1996
9th

ಕರ್ನಾಟಕ ಸರ್ಕಾರ
ಪಠ್ಯಪುಸ್ತಕ ನಿರ್ದೇಶನಾಲಯ

ಸಂಸ್ಕರಿಸಿದ ಮುದ್ರಣ

9

(80)

# ಸಮಾಜ ವಿಜ್ಞಾನ

ಭಾಗ 1

## ಇತಿಹಾಸ ಮತ್ತು ಪೌರನೀತಿ

ಒಂಬತ್ತನೇ ತರಗತಿ

ಬೆಂಗಳೂರು ಬುಕ್ ಸೆಂಟರ್
ನಂ. 4, ರಂಗಸ್ವಾಮಿ ಟೆಂಪಲ್ ಸ್ಟ್ರೀಟ್, ಬೆಂಗಳೂರು - 560 053
ದೂರವಾಣಿ : 22 64 123

## ರಾಷ್ಟ್ರಗೀತೆ

ಜನಗಣ ಮನ ಅಧಿನಾಯಕ ಜಯ ಹೇ ।
ಭಾರತ ಭಾಗ್ಯ ವಿಧಾತಾ ।।।
ಪಂಜಾಬ ಸಿಂಧು ಗುಜರಾತ ಮರಾಠಾ।
ದ್ರಾವಿಡ ಉತ್ಕಲ ವಂಗಾ।।
ವಿಂಧ್ಯ ಹಿಮಾಚಲ ಯಮುನಾ ಗಂಗಾ।
ಉಚ್ಛಲ ಜಲಧಿ ತರಂಗಾ।।
ತವ ಶುಭ ನಾಮೇ ಜಾಗೇ।
ತವ ಶುಭ ಆಶಿಷ ಮಾಗೇ।।
ಗಾಹೇ ತವ ಜಯಗಾಥಾ।
ಜನಗಣ ಮಂಗಳದಾಯಕ ಜಯ ಹೇ।।
ಭಾರತ ಭಾಗ್ಯ ವಿಧಾತಾ।
ಜಯ ಹೇ ಜಯ ಹೇ ಜಯ ಹೇ।।
ಜಯ ಜಯ ಜಯ ಜಯ ಹೇ ।।

- **ರವೀಂದ್ರನಾಥ ಠಾಕೂರ್.**

---

## ನಾಡ ಗೀತೆ
## ಜಯ ಹೇ ಕರ್ನಾಟಕ ಮಾತೆ

ಜೈ! ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ!

ಜೈ! ಸುಂದರ ನದಿ ವನಗಳ ನಾಡೆ,
ಜಯ ಹೇ ರಸ ಋಷಿಗಳ ಬೀಡೆ!
ಭೂದೇವಿಯ ಮಕುಟದ ನವಮಣಿಯೆ.
ಗಂಧದ ಚಂದದ ಹೊನ್ನಿನ ಗಣಿಯೆ.
ರಾಘವ ಮಧುಸೂದನರವತರಿಸಿದ
ಭಾರತ ಜನನಿಯ ತನುಜಾತೆ.
ಜಯಹೇ ಕರ್ನಾಟಕ ಮಾತೆ!

ಜನನಿಯ ಜೋಗುಳದ ವೇದದ ಘೋಷ
ಜನನಿಗೆ ಜೀವವು ನಿನ್ನಾವೇಶ
ಹಸುರಿನ ಗಿರಿಗಳ ಸಾಲೆ
ನಿನ್ನಯ ಕೊರಳಿನ ಮಾಲೆ
ಕಪಿಲ ಪತಂಜಲ ಗೌತಮ ಜಿನನುತ
ಭಾರತ ಜನನಿಯ ತನುಜಾತೆ
ಜಯಹೇ ಕರ್ನಾಟಕ ಮಾತೆ!

ಶಂಕರ ರಾಮಾನುಜ ವಿದ್ಯಾರಣ್ಯ
ಬಸವೇಶ್ವರ ಮಧ್ವರ ದಿವ್ಯಾರಣ್ಯ
ರನ್ನ ಷಡಕ್ಷರ ಪೊನ್ನ
ಪಂಪಲಕುಮಿಪತಿ ಜನ್ನ
ಕಬ್ಬಿಗರುದಿಸಿದ ಮಂಗಳಧಾಮ ।
ಕವಿಕೋಗಿಲೆಗಳ ಪುಣ್ಯಾರಾಮ ।
ನಾನಕ ರಾಮಾನಂದ ಕಬೀರರ

**ಭಾರತ ಜನನಿಯ ತನುಜಾತೆ**
**ಜಯಹೇ ಕರ್ನಾಟಕ ಮಾತೆ**

**ತೈಲಪ ಹೊಯ್ಸಳರಾಳಿದ ನಾಡೆ,**
**ಡಂಕಣ ಜಕಣರ ನೆಚ್ಚಿನ ಬೀಡೆ,**
**ಕೃಷ್ಣಾ ಶರಾವತಿ ತುಂಗಾ**
**ಕಾವೇರಿಯ ವರರಂಗ**

ಚೈತನ್ಯ ಪರಮಹಂಸ **ವಿವೇಕರ**
ಭಾರತ ಜನನಿಯ ತನುಜಾತೆ,
ಜಯಹೇ ಕರ್ನಾಟಕ ಮಾತೆ

ಸರ್ವಜನಾಂಗದ ಶಾಂತಿಯ **ತೋಟ**
ರಸಿಕರ ಕಂಗಳ ಸೆಳೆಯುವ **ನೋಟ,**
ಹಿಂದೂ ಕ್ರೈಸ್ತ ಮುಸಲ್ಮಾನ
ಪಾರಸಿಕ ಜೈನರುದ್ಯಾನ
ಜನಕನ ಹೋಲುವ ದೊರೆಗಳ ಧಾಮ
ಗಾಯಕ ವೈಣಿಕರಾರಾಮ
ಕನ್ನಡ ನುಡಿ ಕುಣಿದಾಡುವ ಗೇಹ ।
ಕನ್ನಡ ತಾಯಿಯ ಮಕ್ಕಳ ದೇಹ ।
ಜೈ! ಭಾರತ ಜನನಿಯ ತನುಜಾತೆ,
ಜಯಹೇ ಕರ್ನಾಟಕ ಮಾತೆ ।

ಜೈ ! ಸುಂದರ ನದಿವನಗಳ ನಾಡೆ,
ಜಯ ಹೇ ರಸ ಋಷಿಗಳ ಬೀಡೆ ।

- **ಕುವೆಂಪು**

ಕರ್ನಾಟಕ ಸರಕಾರ
ಪಠ್ಯಪುಸ್ತಕ ನಿರ್ದೇಶನಾಲಯ

# ಸಮಾಜ ವಿಜ್ಞಾನ

ಭಾಗ – ೧

**1996**

ಸಂಸ್ಕರಿಸಿದ ಮುದ್ರಣ

## ಇತಿಹಾಸ ಮತ್ತು ಪೌರನೀತಿ

ಒಂಬತ್ತನೆಯ ತರಗತಿ

**9**

ಪ್ರಕಾಶಕರು: ದೂರವಾಣಿ: 2264123
**ಬೆಂಗಳೂರು ಬುಕ್ ಸೆಂಟರ್**
ನಂ. 4, ರಂಗಸ್ವಾಮಿ ಗುಡಿ ಬೀದಿ,
ಬೆಂಗಳೂರು - 560 053

| | | | |
|---|---|---|---|
| 1. | ಪುಸ್ತಕದ ಹೆಸರು | : | IX ಸಮಾಜ ವಿಜ್ಞಾನ ಭಾಗ – 1 |
| 2. | ಹಕ್ಕುಗಳು | : | ಪಠ್ಯಪುಸ್ತಕ ನಿರ್ದೇಶಕರು<br>ಬಸವನಗುಡಿ, ಬೆಂಗಳೂರು – 4. |
| 3. | ಪ್ರಕಟಣೆಯ ವರ್ಷ | : | 1993 |
| 4. | ಸಂಸ್ಕರಿಸಿದ ಮುದ್ರಣ | : | 1996 |
| 5. | ಪ್ರಕಾಶಕರು<br>ಬೆಂಗಳೂರು / ಮೈಸೂರು ವಿಭಾಗ | : | ಬೆಂಗಳೂರು ಬುಕ್ ಸೆಂಟರ್<br>ನಂ. 4, ರಂಗಸ್ವಾಮಿ ಗುಡಿ ಬೀದಿ,<br>ಬೆಂಗಳೂರು - 560 053 |
| | ಬೆಳಗಾಂ / ಗುಲ್ಬರ್ಗ ವಿಭಾಗ | : | ಟ್ರಸ್ಟ್ ಪ್ಯಾಕ್, ಬೆಂಗಳೂರು |
| 6. | ಡಿ.ಟಿ.ಪಿ. | : | ಲೇಸರ್ ಲೈನ್ ಗ್ರಾಫಿಕ್ಸ್,<br>ಬೆಂಗಳೂರು 560 053 |
| 7. | ಮುದ್ರಿಸಿದ ಪ್ರತಿಗಳ ಸಂಖ್ಯೆ | : | 50,000 Copies |
| 8. | ಬಳಸಿರುವ ಪ್ರಿಂಟಿಂಗ್ ಪೇಪರ್ | : | 60 G.S.M. |
| 9. | ಪುಸ್ತಕದ ಬೆಲೆ | : | Rs. 8.70 |


## ಪಠ್ಯಪುಸ್ತಕ ರಚನಾ ಸಮಿತಿ

1. ಡಾ॥ ಒ. ಅನಂತರಾಮಯ್ಯ
ಅಧ್ಯಕ್ಷರು
ಇತಿಹಾಸ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ
2. ಡಾ॥ ಎಂ.ವಿ. ಶ್ರೀನಿವಾಸನ್
ಸದಸ್ಯರು
ಇತಿಹಾಸ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ
3. ಡಾ॥ ಕೆ.ಎಸ್. ಶಿವಣ್ಣ
ಸದಸ್ಯರು, ರೀಡರ್,
ಮೈಸೂರು ವಿಶ್ವವಿದ್ಯಾಲಯ
4. ಡಾ॥ ಸೆಬಾಸ್ಟಿಯನ್ ಜೋಸೆಫ್
ಸದಸ್ಯರು, ರೀಡರ್,
ಮೈಸೂರು ವಿಶ್ವವಿದ್ಯಾಲಯ
5. ಡಾ॥ ವೈ. ರಫೀಕ್ ಅಹಮದ್
ಸದಸ್ಯರು
ರಾಜ್ಯಶಾಸ್ತ್ರ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ
6. ಶ್ರೀ ಕೆ.ಆರ್. ಇಕ್ಬಾಲ್ ಅಹಮದ್
ಸದಸ್ಯರು
ಆಲ್ ಅಮೀನ್ ಕಾಲೇಜು,
ಬೆಂಗಳೂರು.
7. ಶ್ರೀ ವೈ. ಸಂಜೀವರಾವ್
ಸದಸ್ಯರು, ನಿವೃತ್ತ ಪ್ರಾಧ್ಯಾಪಕರು,
ಸರಕಾರಿ ಶಿಕ್ಷಣ ಮಹಾ ವಿದ್ಯಾಲಯ,
ಮಂಗಳೂರು.
8. ಶ್ರೀ ಎಸ್. ಮನೋಹರ್
ಸದಸ್ಯರು
ನಿವೃತ್ತ ಅಧ್ಯಾಪಕರು,
ಬಸವೇಶ್ವರ ಹೈಸ್ಕೂಲ್, ಬೆಂಗಳೂರು.
9. ಶ್ರೀ ಎ.ಎಸ್. ದೀಕ್ಷಿತ್, ಸದಸ್ಯರು
ಮುಖ್ಯೋಪಾಧ್ಯಾಯರು,
ಜಿಂದಲ್ ಹೈಸ್ಕೂಲ್, ಬೆಂಗಳೂರು.
10. ಶ್ರೀ ಎ.ಎನ್. ಗೋವಿಂದಗೌಡ
ಸದಸ್ಯರು, ಮುಖ್ಯೋಪಾಧ್ಯಾಯರು,
ಸರಕಾರಿ ಹೈಸ್ಕೂಲ್, ಹಾಸನ ಜಿಲ್ಲೆ.
11. ಶ್ರೀಮತಿ ಭಾಗ್ಯಮ್ಮ ಪಿ.
ಸಂಯೋಜಕರು, ಸಹಾಯಕ ನಿರ್ದೇಶಕರು
ಪಠ್ಯಪುಸ್ತಕ ನಿರ್ದೇಶನಾಲಯ,
ಬೆಂಗಳೂರು.
12. ಕನ್ನಡ ಅನುವಾದ:
ಅ.ರಾ. ಮಿತ್ರ, ಪ್ರಿನ್ಸಿಪಾಲರು,
ಎನ್.ಎಸ್.ವಿ.ಕೆ.ಪಿ.ಯು. ಕಾಲೇಜು,
ಬೆಂಗಳೂರು.
13. ಪರಿಷ್ಕರಣಕಾರರು
ಡಾ. ಸೂರ್ಯನಾಥ ಕಾಮತ್

# ಮುನ್ನುಡಿ

1986ರ ರಾಷ್ಟ್ರೀಯ ಶಿಕ್ಷಣ ನೀತಿಯ ಹಿನ್ನೆಲೆಯಲ್ಲಿ ತಯಾರಿಸಲಾದ ಪಠ್ಯವಸ್ತುವಿನ ಆಧಾರದ ಮೇಲೆ ಈ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಈ ಪಠ್ಯಪುಸ್ತಕದಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಗೆ ಅನುಗುಣವಾಗಿ ಮುಖ್ಯಾಂಶಗಳನ್ನು ಮತ್ತು ಮಾನವೀಯ ಮೌಲ್ಯಗಳಿಗೆ ಒತ್ತು ನೀಡಲಾಗಿದೆ ಹಾಗೂ ಮಕ್ಕಳ ವಯಸ್ಸಿನ ಮಟ್ಟಕ್ಕೆ ಅನುಗುಣವಾಗಿ ಪಾಠಗಳನ್ನು ರಚಿಸಲಾಗಿದೆ.

ಈ ಪಠ್ಯಪುಸ್ತಕದ ರಚನೆಯಲ್ಲಿ ನೆರವಾದವರೆಲ್ಲರಿಗೂ ಪಠ್ಯಪುಸ್ತಕದ ನಿರ್ದೇಶನ ಇಲಾಖೆಯ ಕೃತಜ್ಞತೆಗಳು ಹಾಗೂ ಈ ಪುಸ್ತಕವನ್ನು ಸಕಾಲದಲ್ಲಿ ಹೊರತಂದ ಪ್ರಕಾಶಕರಿಗೂ ನಮ್ಮ ಅಭಿನಂದನೆಗಳು. ಈ ಪಠ್ಯಪುಸ್ತಕದ ಬಗ್ಗೆ ಬರುವ ಎಲ್ಲಾ ಸಲಹೆ ಸೂಚನೆಗಳಿಗೂ ಸದಾ ಸ್ವಾಗತ.

**ಯು.ರಾ. ಅಚ್ಯುತರಾವ್**
ನಿರ್ದೇಶಕರು
ಪಠ್ಯಪುಸ್ತಕ ಇಲಾಖೆ,

ತಾ: 1–3–1993
ಬೆಂಗಳೂರು – 560 004.

## ಪಠ್ಯಪುಸ್ತಕ ನಿರ್ದೇಶನಾಲಯ

**ಬಿ.ಪಿ. ವಾಡಿಯ ರಸ್ತೆ, ಬಸವನಗುಡಿ, ಬೆಂಗಳೂರು – 560 004**

ಪಠ್ಯಪುಸ್ತಕಗಳಲ್ಲಿ ಕಂಡು ಬಂದ ತಪ್ಪು ಒಪ್ಪುಗಳನ್ನು ಸಂಸ್ಕರಿಸಿ ಮುದ್ರಣ ಮಾಡಲಾಗಿದೆ. ಈ ಸಂಸ್ಕರಣಾ ಕಾರ್ಯದಲ್ಲಿ ನೆರವಾದವರಿಗೆಲ್ಲ ಕೃತಜ್ಞತೆಗಳು. ಈ ಪಠ್ಯ ಪುಸ್ತಕದ ಬಗ್ಗೆ ಬರುವ ಎಲ್ಲಾ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ.

ದಿನಾಂಕ: 27-11-95

**ಪಿ.ಎಸ್. ರವೀಂದ್ರನಾಥ್**
ನಿರ್ದೇಶಕರು.

# ವಿಷಯ ಸೂಚಿ

ಪುಟ ಸಂಖ್ಯೆ

**I. ಇತಿಹಾಸ**

1. ಇಸ್ಲಾಂ ಧರ್ಮದ ಉದಯ 1
2. ಯೂರೋಪ್‌ನಲ್ಲಿ ಮಧ್ಯ ಯುಗ 7
3. ಯೂರೋಪಿನಲ್ಲಿ ಆಧುನಿಕ ಯುಗದ ಪ್ರಾರಂಭ 16
4. ಮಧ್ಯಕಾಲೀನ ಭಾರತ 29
5. ಮೊಗಲರ ಆಳ್ವಿಕೆಯಲ್ಲಿ ಭಾರತ 64
6. ಆಧುನಿಕ ಜಗತ್ತು 84

**II. ಪೌರನೀತಿ**

1. ಭಾರತದ ಪ್ರಜಾಪ್ರಭುತ್ವ 122
2. ನಮ್ಮ ಪ್ರಜಾಪ್ರಭುತ್ವವನ್ನು ಬಲಪಡಿಸುವಿಕೆ 134
3. ರಾಷ್ಟ್ರೀಯ ಸಮಗ್ರತೆ 142
4. ರಾಷ್ಟ್ರರಕ್ಷಣೆ 148

# ಇತಿಹಾಸ

## 1. ಇಸ್ಲಾಂ ಧರ್ಮದ ಉದಯ – ಇಸ್ಲಾಂ ನಾಗರೀಕತೆ

ಅರೇಬಿಯ ಮರುಭೂಮಿಗಳ ನಾಡು. ಏಳನೆಯ ಶತಮಾನದಲ್ಲಿ ಅರಬ್ಬರು ಗುಂಪುಗಳಾಗಿ ಹೋರಾಡುತ್ತಿದ್ದರು ಮತ್ತು ಹತ್ತಾರು ಬುಡಕಟ್ಟುಗಳಾಗಿ ಹರಿದು ಹಂಚಿಹೋಗಿದ್ದರು. ಅವರದು ನೆಮ್ಮದಿಯ ಬದುಕಾಗಿರಲಿಲ್ಲ. ಅವರನ್ನು ಹೆಚ್ಚು ಹೆಚ್ಚಾಗಿ ಸನ್ಮಾರ್ಗಿಗಳನ್ನಾಗಿ ಮಾಡುವಂಥ ಒಳ್ಳೆಯ ನೀತಿ ಸಂಹಿತೆ ಇರಲಿಲ್ಲ. ಎಲ್ಲ ಕಡೆಯೂ ಬಡತನ ಮತ್ತು ಅಜ್ಞಾನ ತಾಂಡವವಾಡುತ್ತಿತ್ತು. ಮೆಕ್ಕಾದಲ್ಲಿ ಕಾಬಾ ಎಂಬ ಪೂಜಾಮಂದಿರವಿತ್ತು. ಇದರೊಳಗೆ ಇದ್ದ ಒಂದು ಕಪ್ಪನೆಯ ಚೌಕಾಕಾರದ ಶಿಲೆಯನ್ನೂ, ಇತರ ಕೆಲವು ಮೂರ್ತಿಗಳನ್ನೂ ಈ ಜನ ಆರಾಧಿಸುತ್ತಿದ್ದರು. ಇಂಥ ವಿಷಮ ಸಂದರ್ಭದಲ್ಲಿ ಪ್ರವಾದಿ ಮಹಮ್ಮದರು ಇಸ್ಲಾಂ ಧರ್ಮವನ್ನು ಸ್ಥಾಪಿಸಿದರು. ಅರಬ್ಬೀ ಭಾಷೆಯಲ್ಲಿ ಇಸ್ಲಾಂ ಎಂದರೆ ಭಗವಂತನ ಇಚ್ಛೆಗೆ ಶರಣಾಗುವುದು ಎಂದರ್ಥ.

### ಮಹಮ್ಮದರ ಜೀವನ ಮತ್ತು ಇಸ್ಲಾಂ ಧರ್ಮ

ಖುರೇಷಿ ಕುಟುಂಬದಲ್ಲಿ ಕ್ರಿ.ಶ. 571ರಲ್ಲಿ ಮೆಕ್ಕಾದಲ್ಲಿ ಮಹಮ್ಮದರು ಜನಿಸಿದರು. ಅವರ ಬಾಲ್ಯಜೀವನ ಸುಖಕರವಾಗಿರಲಿಲ್ಲ. ಏಕೆಂದರೆ ಅವರು ಹುಟ್ಟುವ ಮೊದಲೇ ಅವರ ತಂದೆ ಅಬ್ದುಲ್ಲಾ ನಿಧನರಾಗಿದ್ದರು. ಅವರು ಆರು ವರ್ಷದವರಿದ್ದಾಗ ಅವರ ತಾಯಿ ಮರಣ ಹೊಂದಿದಳು. ವ್ಯಾಪಾರಿಯಾಗಿದ್ದ ಅವರ ಚಿಕ್ಕಪ್ಪ ಅಬುತಾಲೀಬ್ ಮಹಮ್ಮದರನ್ನು ಸಾಕಿದರು. ಬಾಲಕರಾದ ಮಹಮ್ಮದ್ ಒಂಟೆಗಳ ಮೇಲೆ ಮಾರಾಟದ ಸರಕುಗಳನ್ನು ಸಾಗಿಸುತ್ತಿದ್ದ ವ್ಯಾಪಾರಿಗಳ ಜೊತೆ ದೂರದ ಪ್ರದೇಶಗಳಿಗೆ ಹೋಗಿ ಬರುತ್ತಿದ್ದರು. ಹೀಗೆ ದೂರಪ್ರಯಾಣ ಮಾಡುತ್ತಾ ಮಾಡುತ್ತಾ ಅರೇಬಿಯಾದ ಜನರ ಜೀವನದ ನಿಜವಾದ ಸ್ಥಿತಿಗಳನ್ನು ತಿಳಿದರು. ಅಲ್ಲದೆ ಮಧ್ಯ ಪ್ರಾಚ್ಯದ ಇತರ ಪ್ರದೇಶಗಳ ಜನರ ಜೀವನದೊಂದಿಗೆ ಅರಬ್ಬರ ಜೀವನವನ್ನು ಹೋಲಿಸಿ ನೋಡಲು ಅವಕಾಶವಾಯಿತು. ತಮ್ಮ ದೇಶದ ಜನ ಅಜ್ಞಾನಿಗಳು, ಅನಕ್ಷರಸ್ಥರಾದವರು, ಕುಡುಕರು, ಮೂರ್ತಿ ಪೂಜಕರು ಮತ್ತು ಐಕ್ಯಮತವಿಲ್ಲದವರು ಎಂಬುದು ಅವರಿಗೆ ಅರಿವಾಯಿತು. ಅವರ ಬಡತನ ಹಾಗೂ ಅನೈಕಮತ್ಯವನ್ನು ಹೋಗಲಾಡಿಸುವ ಸಂಕಲ್ಪ ತೊಟ್ಟರು.

ತಮ್ಮ ಇಪ್ಪತ್ತೈದನೆಯ ವಯಸ್ಸಿನಲ್ಲಿ ಖತೀಜ ಎಂಬಾಕೆಯ ಬಳಿ ಕೆಲಸ ಮಾಡುತ್ತಿದ್ದರು. ಆಕೆಯನ್ನು ಮದುವೆಯಾದರು. ಅವರಿಗೆ ಫಾತಿಮಾ ಎಂಬ ಮಗಳು ಹುಟ್ಟಿದಳು. ಮಹಮ್ಮದರು ಧಾರ್ಮಿಕ ಸ್ವಭಾವದ ವ್ಯಕ್ತಿಯಾಗಿದ್ದರು. ಅವರ ವೈವಾಹಿಕ ಜೀವನ ಪ್ರಾರ್ಥನೆ, ಧ್ಯಾನ ಮೊದಲಾದ ಅವರ ಧಾರ್ಮಿಕ ಆಚಾರಗಳಿಗೆ ಅಡ್ಡಿಯಾಗಲಿಲ್ಲ. ಮೆಕ್ಕಾ ಬಳಿ ಇದ್ದ ಹಿರಾ ಬೆಟ್ಟದಲ್ಲಿ ಅನೇಕ ರಾತ್ರಿಗಳನ್ನು ಧ್ಯಾನ ಪ್ರಾರ್ಥನೆಗಳಲ್ಲಿ ಕಳೆದರು. ದೇವ ದೂತ ಗೇಬ್ರಿಯಲ್ ಪ್ರತ್ಯಕ್ಷನಾಗಿ ದೇಶವಾಸಿಗಳಿಗೆ ಸನ್ಮಾರ್ಗವನ್ನು ತೋರಿ ಅದರಲ್ಲಿ ಮುನ್ನಡೆಯುವಂತೆ ತಿಳಿಸಿದನೆಂದು ನಂಬಲಾಗಿದೆ. ಅವರು ಹೆಂಡತಿ ಖತೀಜಳಿಗೆ,

ಮಕ್ಕಳಿಗೆ ಹಾಗೂ ಕೆಲವರಿಗೆ ಧರ್ಮಬೋಧೆ ಮಾಡಿದರು. ಇದೇ ಅಲ್ಲಾಹುವಿನ ಮೊದಲ ದೈವಾನುಗ್ರಹವಾಗಿತ್ತು. ಮಹಮ್ಮದರು ಮೂರ್ತಿ ಪೂಜೆಯನ್ನು ವಿರೋಧಿಸಿದರು. ತಮ್ಮ ಜನರ ಬದುಕನ್ನು ಪೂರ್ಣಸುಧಾರಣೆ ಮಾಡಲು ಬಯಸಿದರು. ಆಧ್ಯಾತ್ಮಿಕ ಮತ್ತು ತಾತ್ವಿಕ ಕ್ಷೇತ್ರಗಳಲ್ಲಿ ಜನರನ್ನು ಮೇಲೆತ್ತಲು ಪ್ರಯತ್ನಿಸಿದರು.

ಮಹಮ್ಮದರು ತಮ್ಮ ಬೋಧನೆಗಳ ಮೂಲಕ ಮೂರ್ತಿ ಪೂಜೆಯನ್ನು ವಿರೋಧಿಸಿದರು. ಸ್ವಲ್ಪ ಕಾಲಾನಂತರ ಈ ಜನರು ಮಹಮ್ಮದರನ್ನು ಕೊಲ್ಲಲು ಪ್ರಯತ್ನಿಸಿದರು.

ಅಭದ್ರ ಪರಿಸ್ಥಿತಿ ಉಂಟಾದುದನ್ನು ಕಂಡು ಮಹಮ್ಮದರು ಕ್ರಿ.ಶ. 622 ರಲ್ಲಿ ಮೆಕ್ಕಾದಿಂದ ಮದೀನಕ್ಕೆ ತೆರಳಿದರು. ಮೆಕ್ಕಾದಿಂದ ಮದೀನಕ್ಕೆ ಈ ರೀತಿ ಮಾಡಿದ ಪ್ರಯಾಣಕ್ಕೆ ಹಿಜರತ್ ಎಂದು ಕರೆಯುತ್ತಾರೆ. ಅಂದಿನಿಂದ ಹಿಜರಿ ಶಕೆ ಪ್ರಾರಂಭವಾಯಿತು. ಕ್ರಿ.ಶ. 622 ಮುಸ್ಲಿಂ ಪಂಚಾಂಗದ ಮೊದಲನೆಯ ವರ್ಷವಾಯಿತು.

ಮದೀನದಲ್ಲಿ ಮಹಮ್ಮದರು ಅಪಾರ ಗೌರವಕ್ಕೆ ಪಾತ್ರರಾದರು. ಕ್ರಮೇಣ ಇಸ್ಲಾಂ ಧರ್ಮಕ್ಕೆ ಅನೇಕ ಮಂದಿ ಅನುಯಾಯಿಗಳನ್ನು ಪಡೆಯಲು ಶಕ್ಯವಾಯಿತು. ಕ್ರಿ.ಶ. 632 ರ ವೇಳೆಗೆ ಇವರನ್ನು ವಿರೋಧಿಸುತ್ತಿದ್ದ ಅರೇಬಿಯಾದ ಅನೇಕ ಬುಡಕಟ್ಟಿನವರು ಸೋತು ಇಸ್ಲಾಂ ಧರ್ಮಕ್ಕೆ ಶರಣಾದರು. ಕ್ರಮೇಣ ಮೆಕ್ಕಾ ಇಸ್ಲಾಂ ಧರ್ಮದ ಸಾಂಸ್ಕೃತಿಕ ಜೀವನಕ್ಕೆ ಮತ್ತು ಆಧ್ಯಾತ್ಮಿಕ ಪ್ರಗತಿಗೆ ಕೇಂದ್ರ ಸ್ಥಾನವಾಯಿತು. ಹಾಗೆಯೇ ಮದೀನಾ ಇಸ್ಲಾಂ ಜನಗಳಿಗೆ ಇನ್ನೊಂದು ಯಾತ್ರಾ ಸ್ಥಳವಾಯಿತು.

**ಇಸ್ಲಾಂ ಧರ್ಮದ ತತ್ವಗಳು**

ದೇವದೂತ ಗ್ಯಾಬ್ರಿಯಲ್ ದೇವರ ಅಂತಃ ಪ್ರೇರಣೆಯಿಂದ ಮಹಮ್ಮದರಿಗೆ ಮಾಡಿದ ದಿವ್ಯ ಸಂದೇಶಗಳೇ 'ಖುರಾನ್'. ಇಸ್ಲಾಂ ಧರ್ಮದ ಮುಖ್ಯ ತತ್ವಗಳು ಹೀಗಿವೆ:

1. ದೇವರೊಬ್ಬನೇ. ಆತನೇ ಅಲ್ಲಾ. ಮಹಮ್ಮದ್ ಆತನ ಪ್ರವಾದಿ.
2. ಮೂರ್ತಿ ಪೂಜೆ ಸಲ್ಲದು.
3. ಖುರಾನನ್ನು ಭಗವಂತನ ದಿವ್ಯವಾಣಿಯೆಂದು ಅಂಗೀಕರಿಸುವುದು.
4. ಸಾವಿನ ನಂತರದ ಜೀವನವನ್ನು ಮತ್ತು ನಿರ್ಣಯದ ದಿನವನ್ನು ನಂಬುವುದು.

ಇಸ್ಲಾಂನ ಐದು ಮೂಲ ತತ್ವಗಳನ್ನು ತಪ್ಪದೆ ನಿರ್ವಹಿಸಬೇಕೆಂದು ತಮ್ಮ ಅನುಯಾಯಿಗಳಿಗೆ ಪ್ರವಾದಿ ಮಹಮ್ಮದರು ಆದೇಶಿಸಿದರು:

*1. **ಕಲಿಮಾ:*** ದೇವರೊಬ್ಬನೇ ಅಲ್ಲಾ ಎಂದೂ ಮಹಮದ್ ಆತನ ಪ್ರವಾದಿಯೆಂದೂ ನಂಬುವುದು.

*2. **ನಮಾಜ್:*** ದಿನಕ್ಕೆ ಐದು ಬಾರಿ ಪ್ರಾರ್ಥನೆ ಸಲ್ಲಿಸುವುದು.

*3. **ರೋಜಾ:*** ರಂಜಾನ್ ತಿಂಗಳಲ್ಲಿ ಉಪವಾಸ ಮಾಡುವುದು.

*4. **ಝುಕಾತ್:*** ದೀನದಲಿತರಿಗೆ ದಾನ ಧರ್ಮ ಮಾಡುವುದು.

*5. **ಹಜ್:*** ಸಾಧ್ಯವಾದರೆ ಜೀವಿತದಲ್ಲೊಮ್ಮೆ ಮೆಕ್ಕಾ ಯಾತ್ರೆ ಮಾಡುವುದು.

ಅರೇಬಿಯಾದ ಜನರಲ್ಲಿ ಅಷ್ಟಾಗಿ ಶುಚಿತ್ವವಿರಲಿಲ್ಲ. ಆದಕ್ಕಾಗಿ ಮಹಮ್ಮದರು

ಶುಚಿತ್ವಕ್ಕೆ ಹೆಚ್ಚು ಮಹತ್ವ ನೀಡಿದರು. ಎಲ್ಲರೂ ಶುಚಿವಂತರಾಗಲು ಬೋಧಿಸಿದರು. ಸ್ತ್ರೀಯರನ್ನು ಗೌರವಿಸಲು ತಿಳಿಸಿದರು. ಸಾಮಾಜಿಕ ಸನ್ನಡತೆಯನ್ನು, ನೀತಿ ಮಾರ್ಗವನ್ನು ಅನುಸರಿಸಲು ಒತ್ತಿ ಹೇಳಿದರು. ಇಸ್ಲಾಂ ಧರ್ಮದಲ್ಲಿ ಮದ್ಯಪಾನ ಜೂಜು, ವ್ಯಭಿಚಾರ ಮೊದಲಾದವುಗಳನ್ನು ನಿಷೇಧಿಸಲಾಗಿದೆ.

ಮಹಮ್ಮದರ ಉತ್ತರಾಧಿಕಾರಿಗಳನ್ನು ಕಲೀಫರೆಂದು ಕರೆಯಲಾಗಿದೆ. ಕಲೀಫರ ಆಳ್ವಿಕೆಯಲ್ಲಿ ಇಸ್ಲಾಂ ಧರ್ಮ ಅರೇಬೀಯಾ ದೇಶದಾಚೆಗೂ ವ್ಯಾಪಿಸಿತು. 8ನೇ ಶತಮಾನದ ವೇಳೆಗೆ ಇಸ್ಲಾಂ ಧರ್ಮ, ಸಿರಿಯಾ, ಇರಾನ್, ಇರಾಕ್, ಸ್ಪೆಯಿನ್, ದಕ್ಷಿಣ ಆಫ್ರಿಕಾ, ಭಾರತ ದೇಶಗಳಿಗೆ ವ್ಯಾಪಿಸಿತು.

## ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ

ಇಸ್ಲಾಂ ಧರ್ಮದಿಂದ ಜಾಗೃತಗೊಂಡ ಅರಬ್ಬರು ತಮ್ಮ ಸಾಮಾಜಿಕ, ಆರ್ಥಿಕ ಕ್ಷೇತ್ರ ಹಾಗೂ ಧಾರ್ಮಿಕ ಬದುಕಿನಲ್ಲಿ ಸಂಪೂರ್ಣ ಪರಿವರ್ತನೆಗೆ ಒಳಗಾದರು. ರಾಜಕೀಯವಾಗಿ ಇಸ್ಲಾಂ ಜಗತ್ತು ಒಂದಾಯಿತು. ಅರಬ್ಬರು ರಾಜಕೀಯವಾಗಿ ಮತ್ತು ಸೇನಾಬಲದಲ್ಲಿ ಪ್ರಬಲರಾದರು.

**ಸಮಾಜ ವ್ಯವಸ್ಥೆ:**

ಪ್ರವಾದಿ ಮಹಮ್ಮದರು ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಕರಾಗಿದ್ದರು. ಪವಿತ್ರ ಖುರಾನು ಧರ್ಮಗ್ರಂಥವೂ, ಜೀವನಸೂತ್ರ ಗ್ರಂಥವೂ ಆಗಿದೆ. ಜೀವನ ಸೂತ್ರಗಳನ್ನು ಹಾಗೂ ಸಾಮಾಜಿಕ ನಡವಳಿಕೆಯ ವಿವರಗಳನ್ನು ಖುರಾನು ತುಂಬ ಎಚ್ಚರಿಕೆಯಿಂದ ನಿರ್ದೇಶಿಸಿದೆ. ಗುಲಾಮರನ್ನು ದಯೆಯಿಂದ ನೋಡಿಕೊಳ್ಳಬೇಕೆಂದು ಅದು ಶಿಫಾರಸು ಮಾಡಿದೆ. ಗಂಡಸರು ಹಲವರನ್ನು ಮದುವೆಯಾಗಲು ಅವಕಾಶವಿತ್ತಿದೆ.

ಅರಬ್ ಸಮಾಜದಲ್ಲಿ ಕಲೀಫರು ಧಾರ್ಮಿಕ ಮುಖಂಡರೂ, ರಾಜಕೀಯ ಮುಖ್ಯಸ್ಥರೂ ಆಗಿದ್ದರು. ಅವರ ಮಾತೇ ಕಾನೂನು. ಜನರು ವಿವಿಧ ವೃತ್ತಿಯಲ್ಲಿ ತೊಡಗಿದ್ದರು. ಶ್ರೀಮಂತರು, ಬಡವರು ಎಂಬ ಭೇದವಿಲ್ಲದೆ ಎಲ್ಲರನ್ನೂ ಸಮಾನರಂತೆ ಕಾಣುತ್ತಿದ್ದರು. ಸ್ತ್ರೀಯರು ಸಂಸಾರ ಕ್ಷೇತ್ರಕ್ಕಷ್ಟೇ ಸೀಮಿತಗೊಂಡಿದ್ದರು. ಅವರಿಗೆ ಓದು ಬರಹವನ್ನು ಕಲಿಸಲಾಗುತ್ತಿತ್ತು.

**ಅರ್ಥವ್ಯವಸ್ಥೆ**

ಕಲೀಫರು ಹಳೆಯ ರಸ್ತೆಗಳನ್ನೆಲ್ಲ ದುರಸ್ತಿಗೊಳಿಸುವುದರ ಜೊತೆಗೆ ಹೊಸ ಹೊಸ ರಸ್ತೆಗಳನ್ನು ನಿರ್ಮಿಸಿದರು. ಇದರಿಂದ ಸಮಗ್ರ ಸಾಮ್ರಾಜ್ಯವನ್ನು ಸಂಪರ್ಕದ ದೃಷ್ಟಿಯಿಂದ ಬೆಸೆಯುವುದರ ಜೊತೆಗೆ ವ್ಯಾಪಾರಾಭಿವೃದ್ಧಿಗೂ ಸಹಾಯವಾಯಿತು. ಭಾರತ, ಚೈನಾ ಮತ್ತು ರಷ್ಯಾದೊಂದಿಗೆ ಕೂಡ ಅರಬ್ಬರ ವಾಣಿಜ್ಯಜಾಲ ಹಬ್ಬಿತ್ತು. ಅವರ ಕಾರವಾನ್‌ಗಳು

ಸಾಮ್ರಾಜ್ಯದ ಒಂದು **ಮೂಲೆಯಿಂದ ಇನ್ನೊಂದು** ಮೂಲೆಗೆ ಸಲೀಸಾಗಿ ಓಡಾಡುತ್ತಿದ್ದುವು. ಅವರು ಆ **ಕಾಲದ ಮಹಾ ಸಮುದ್ರಯಾತ್ರಿ**ಗಳೂ, ಅನ್ವೇಷಕರೂ ಆಗಿದ್ದರು. ಸುಮಾರು ಮೂರು **ಶತಮಾನಗಳವರೆಗೆ ಮೆಡಿಟರೇ**ನಿಯನ್ ಸಮುದ್ರದ ಆಧಿಪತ್ಯ ಅವರದಾಗಿತ್ತು. ಯೂರೋಪಿನ **ಹಾಗೂ ಪರ್ಷಿಯಾದ** ವ್ಯಾಪಾರಿಗಳು ಅರಬ್ಬರ ಬಾಗ್ದಾದ್ ಮತ್ತು ಸಮರ್‌ಖಂಡ್‌ಗಳ **ವ್ಯಾಪಾರದ** ಮಳಿಗೆಗಳಿಗೆ ಭೇಟಿ ನೀಡುತ್ತಿದ್ದರು.

ಕಲೀಫರ ಹಾಗೂ ಶ್ರೀಮಂತರ ಅರ್ಥಸಂಪನ್ನತೆಯ **ಪರಿಣಾಮವಾಗಿ** ಹಲವಾರು ಕೈಗಾರಿಕೆಗಳು ಸ್ಥಾಪನೆಗೊಂಡವು. ಅರಬ್ಬೀ ರತ್ನಗಂಬಳಿಗಳು, **ಚರ್ಮ ವಸ್ತುಗಳು,** ಸುಂದರ ಖಡ್ಗಗಳು, ರೇಷ್ಮೆ ಲೋಹ ಕೆಲಸಗಳು ಪ್ರಸಿದ್ಧಿ ಹೊಂದಿದವು. ಕೃಷಿ ಕ್ಷೇತ್ರವು ಸಂಪನ್ನಗೊಂಡಿತು. ಅನೇಕ ಕೆರೆಗಳನ್ನು ಕಟ್ಟಲಾಯಿತು. ನೀರಾವರಿ ವ್ಯವಸ್ಥೆಯನ್ನು ವಿಸ್ತರಿಸಲಾಯಿತು. ಆಹಾರ ಧಾನ್ಯ, ಹತ್ತಿ ಮತ್ತು ಕಬ್ಬುಗಳನ್ನು ಬೆಳೆಯಲಾಯಿತು. ಅನೇಕ ಬಗೆಯ ಹಣ್ಣುಗಳನ್ನು ಬೆಳೆಯಲಾಯಿತು. ಗೊಬ್ಬರದ ಬಳಕೆ ಅವರಿಗೆ ತಿಳಿದಿತ್ತು. ತೋಟಗಾರಿಕೆಯಲ್ಲಿ ಹಾಗೂ ಕಸಿ ಮಾಡುವ ವಿಧಾನಗಳಲ್ಲಿ ಅವರು ಸಿದ್ಧಹಸ್ತರಾಗಿದ್ದರು.

## ಸಂಸ್ಕೃತಿ ಹಾಗೂ ವಿಜ್ಞಾನಗಳಿಗೆ ಅರಬ್ಬರ ಕೊಡುಗೆ

### ಸಂಸ್ಕೃತಿ

**ಶಿಕ್ಷಣ ಮತ್ತು ಸಾಹಿತ್ಯ:** ಅರಬ್ಬರು ಸಿಂಧ್ ಪ್ರಾಂತ್ಯವನ್ನು ಗೆದ್ದುದರಿಂದ ಅವರಿಗೆ ಭಾರತೀಯರ ವೇದಾಂತ ಹಾಗೂ ವಿಜ್ಞಾನಗಳ ಪರಿಚಯವುಂಟಾಯಿತು. ಬಸ್ರಾ, ಕೈರೋ, ಬಾಗ್ದಾದ್ ಮತ್ತು ಸ್ಪೇನಿನ ಕೊರ್ಡೊವಾಗಳಲ್ಲಿ ವಿಶ್ವವಿದ್ಯಾಲಯಗಳ ಸ್ಥಾಪನೆಯಾಯಿತು. ಅರಬ್‌ನ ಎಲ್ಲಾ ಮೂಲೆಗಳಿಂದ ಹಾಗೂ ಕ್ರೈಸ್ತ ಯೂರೋಪಿನಿಂದ ವಿದ್ಯಾರ್ಥಿಗಳು ಬಂದು ಇಲ್ಲಿ ಕಲಿಯಲಾರಂಭಿಸಿದರು. ವಿದೇಶಿ ವಿದ್ಯಾರ್ಥಿಗಳು ಇಸ್ಲಾಂ ಸಂಸ್ಕೃತಿಯನ್ನು ತಮ್ಮ ದೇಶಗಳಿಗೂ ಕೊಂಡೊಯ್ದರು. ಮುಂದೆ ಎರಡನೇ ಪೋಪ್ ಆದ ಸಿಲ್‌ವೆಸ್ಟರ್ ಗರ್ಬರ್ಟ್ ಎಂಬಾತ ಕೊರ್ಡೊವಾ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿದ್ದ. ರಾಷ್ಟ್ರದಲ್ಲಿ ಹಲವಾರು ವ್ಯವಸ್ಥಿತ ಗ್ರಂಥಾಲಯಗಳಿದ್ದುವು. ಕೆಲವು ಗ್ರಂಥಾಲಯಗಳಲ್ಲಿ ಸಾವಿರಕ್ಕೂ ಹೆಚ್ಚಿನ ಗ್ರಂಥಗಳಿದ್ದವು. ಇವುಗಳನ್ನೆಲ್ಲ ಸರಿಯಾಗಿ ವರ್ಗೀಕರಿಸಿ ಜೋಡಿಸಲಾಗಿತ್ತು.

ಸಾಹಿತ್ಯದಲ್ಲಿ ಅರಬ್ಬರ ಕೊಡುಗೆ ಇನ್ನೂ ಹೆಚ್ಚಿನದು. ಅವರಿಗೆ ಕಾವ್ಯದ ಬಗೆಗೆ ವಿಶೇಷ ಮಮತೆ. ಪ್ರೇಮ ಮತ್ತು ಯುದ್ಧಗಳ ವಸ್ತುವುಳ್ಳ ಅವರ ಅನೇಕ ರಚನೆಗಳು ಈಗಲೂ ಉಳಿದುಕೊಂಡಿವೆ. ಹನ್ನೊಂದನೆಯ ಶತಮಾನದ ಉಮರ್ ಖಯಾಮನ ರುಬಾಯತ್ ಎಂಬ ಪರ್ಷಿಯನ್ ಕಾವ್ಯ ಶಾಶ್ವತ ಕೀರ್ತಿಯನ್ನು ಸಂಪಾದಿಸಿದ್ದಲ್ಲದೆ, ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡಿದೆ. ಲಘು ಸಾಹಿತ್ಯದಲ್ಲಿ ಸಿಂದಾಬಾದ್ ನಾವಿಕ, ಅಲ್ಲಾವುದ್ದೀನನ ಅದ್ಭುತ ದೀಪ ಮೊದಲಾದ ಅಸಂಖ್ಯಾತ ಕಥೆಗಳನ್ನುಳ್ಳ

ಅರೇಬಿಯನ್ ನೈಟ್ಸ್ ತುಂಬಾ ಜನಪ್ರಿಯವಾದ ಗ್ರಂಥವಾಗಿದೆ. ಇದರಲ್ಲಿಯ ಕಥೆಗಳು ಆ ಕಾಲದ ಅರಬ್ಬರ ರೀತಿ ರಿವಾಜುಗಳನ್ನು ತಿಳಿಸುವುದರಲ್ಲೂ ಸಹಾಯಕವಾಗಿವೆ. ಅಲ್ಬೆರೂನಿ ಎಂಬಾತ ಮಹಾ ತತ್ವಜ್ಞಾನಿಯಾಗಿದ್ದು "ಕಿತಾಬುಲ್ ಹಿಂದ್" ಎಂಬ ಗ್ರಂಥದಿಂದ ಪ್ರಸಿದ್ಧನಾಗಿದ್ದಾನೆ. ಅರಬ್ಬರು ತುಂಬಾ ಸೊಗಸಾದ ಆಲಂಕಾರಿಕ ಲಿಪಿಯಲ್ಲಿ ಗ್ರಂಥಗಳನ್ನು ಬರೆದಿಟ್ಟಿದ್ದಾರೆ. ಅಲ್ಲದೆ ಕಲಾತ್ಮಕವಾದ ಹೊಳಪುಳ್ಳ ಪುಸ್ತಕ ರಚನೆಯಲ್ಲಿ ಅವರು ಸಿದ್ಧಹಸ್ತರು.

**ವಿಜ್ಞಾನ**

ಅರಬ್ಬರು ಭಾರತೀಯರಿಂದ ಹಾಗೂ ಗ್ರೀಕರಿಂದ ಖಗೋಳ ವಿಜ್ಞಾನ, ಔಷಧ ಹಾಗೂ ಗಣಿತಗಳನ್ನು ಕಲಿತರು. ಒಂಬತ್ತರವರೆಗಿನ ಅಂಕಿಗಳು ಹಾಗೂ ಸೊನ್ನೆಯ ಬಳಕೆಗಳನ್ನು ಭಾರತೀಯರಿಂದಲೂ, ರೇಖಾಗಣಿತ ಹಾಗೂ ತ್ರಿಕೋಣ ಮಿತಿಗಳನ್ನು ಗ್ರೀಕರಿಂದಲೂ ಕಲಿತರು. ಲೋಲಕವನ್ನು ನಿರ್ಮಿಸಿದವರು ಅರಬ್ಬರೇ. ಭಾರತ ಗ್ರೀಕ್‌ರಿಂದ ವೈದ್ಯಜ್ಞಾನವನ್ನು ಸಂಪಾದಿಸಿ ತಮ್ಮದೇ ಆದ ಯುನಾನಿ ಔಷಧ ಪದ್ಧತಿಯನ್ನು ಬೆಳೆಸಿದರು. ಈ ಪದ್ಧತಿ ಈಗಲೂ ಬಳಕೆಯಲ್ಲಿದೆ. ಅರಬ್ಬರು ಶರೀರ ಶಾಸ್ತ್ರ, ಆರೋಗ್ಯ ಶಾಸ್ತ್ರಗಳನ್ನು ಅಧ್ಯಯನ ಮಾಡಿ ತುಂಬ ಕ್ಲಿಷ್ಟವಾದ ಶಸ್ತ್ರ ಚಿಕಿತ್ಸೆಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು.

**ವಾಸ್ತುಶಿಲ್ಪ**

ಕಲೀಫರು ತರಬೇತಿ ಪಡೆದ ಅಧಿಕಾರಿಗಳನ್ನೂ, ವಾಸ್ತುಶಿಲ್ಪಿಗಳನ್ನೂ ಅಪಾರ ಸಂಖ್ಯೆಯಲ್ಲಿ ನೇಮಿಸಿಕೊಂಡಿದ್ದರು. ಬಾಗ್ದಾದ್, ಕೈರೋ ಮೊದಲಾದ ನಗರಗಳಲ್ಲಿ ಅರಮನೆಗಳು, ಮಸೀದಿಗಳು ಮತ್ತು ಸಾರ್ವಜನಿಕ ತೋಟಗಳು ಶೋಭಿಸಿದವು. ಕಟ್ಟಡ ರಚನೆಯಲ್ಲಿ ಅರಬ್ಬರು ಗುಮ್ಮಟ್ಟ, ಕಮಾನುಗಳ ವಿನ್ಯಾಸವನ್ನು ರೂಪಿಸಿಕೊಂಡರು. ಈ ವಿನ್ಯಾಸವು ಮುಂದೆ ಸಿರಿಯಾ, ಮೆಸಪೊಟೇಮಿಯಾ, ಈಜಿಪ್ಟ್, ಸ್ಪೇನ್ ಮತ್ತು ಭಾರತಗಳಿಗೂ ಹರಡಿತು. ಆಗ್ರಾದ ತಾಜ್‌ಮಹಲ್ ಮತ್ತು ದೆಹಲಿಯ ಜಾಮಿಯಾ ಮಸೀದಿಗಳು ಈ ಬಗೆಯ ಇಂಡೋ ಸಾರ್ಸೆನಿಕ್ ಅಥವಾ ಇಂಡೋ ಇಸ್ಲಾಮಿಕ್ ವಾಸ್ತುಶಿಲ್ಪದ ಸುಂದರ ಉದಾಹರಣೆಗಳಾಗಿವೆ.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

1. 'ಇಸ್ಲಾಂ'ನ ಅರ್ಥವೇನು ? ಅದರ ಸ್ಥಾಪಕ ಯಾರು ?
2. "ಹಿಜಿರಾ" ಎಂದರೇನು ? ಅದರ ಮಹತ್ವವೇನು ?

ಸಾಮ್ರಾಜ್ಯದ ಒಂದು **ಮೂಲೆಯಿಂದ ಇನ್ನೊಂದು** ಮೂಲೆಗೆ ಸಲೀಸಾಗಿ ಓಡಾಡುತ್ತಿದ್ದುವು. ಅವರು ಆ ಕಾಲದ **ಮಹಾ ಸಮುದ್ರ**ಯಾತ್ರಿಗಳೂ, ಅನ್ವೇಷಕರೂ ಆಗಿದ್ದರು. ಸುಮಾರು ಮೂರು **ಶತಮಾನಗಳವರೆಗೆ ಮೆಡಿಟ**ರೇನಿಯನ್ ಸಮುದ್ರದ ಆಧಿಪತ್ಯ ಅವರದಾಗಿತ್ತು. ಯೂರೋಪಿನ **ಹಾಗೂ ಪರ್ಷಿ**ಯಾದ ವ್ಯಾಪಾರಿಗಳು ಅರಬ್ಬರ ಬಾಗ್ದಾದ್ ಮತ್ತು **ಸಮರ್‌ಖಂಡ್‌ಗಳ ವ್ಯಾಪಾರ**ದ ಮಳಿಗೆಗಳಿಗೆ ಭೇಟಿ ನೀಡುತ್ತಿದ್ದರು.

ಕಲೀಫರ ಹಾಗೂ ಶ್ರೀಮಂತರ **ಅರ್ಥಸಂಪನ್ನತೆಯ ಪರಿಣಾಮ**ವಾಗಿ ಹಲವಾರು ಕೈಗಾರಿಕೆಗಳು ಸ್ಥಾಪನೆಗೊಂಡವು. ಅರಬ್ಬೀ ರತ್ನಗಂಬಳಿಗಳು, **ಚರ್ಮ** ವಸ್ತುಗಳು, ಸುಂದರ ಖಡ್ಗಗಳು, ರೇಷ್ಮೆ ಲೋಹ ಕೆಲಸಗಳು ಪ್ರಸಿದ್ಧಿ **ಹೊಂದಿದವು**. ಕೃಷಿ ಕ್ಷೇತ್ರವು ಸಂಪನ್ನಗೊಂಡಿತು. ಅನೇಕ ಕೆರೆಗಳನ್ನು ಕಟ್ಟಲಾಯಿತು. ನೀರಾವರಿ ವ್ಯವಸ್ಥೆಯನ್ನು ವಿಸ್ತರಿಸಲಾಯಿತು. ಆಹಾರ ಧಾನ್ಯ, ಹತ್ತಿ ಮತ್ತು ಕಬ್ಬುಗಳನ್ನು ಬೆಳೆಯಲಾಯಿತು. ಅನೇಕ ಬಗೆಯ ಹಣ್ಣುಗಳನ್ನು ಬೆಳೆಯಲಾಯಿತು. ಗೊಬ್ಬರದ ಬಳಕೆ ಅವರಿಗೆ ತಿಳಿದಿತ್ತು. ತೋಟಗಾರಿಕೆಯಲ್ಲಿ ಹಾಗೂ ಕಸಿ ಮಾಡುವ ವಿಧಾನಗಳಲ್ಲಿ ಅವರು ಸಿದ್ಧಹಸ್ತರಾಗಿದ್ದರು.

## ಸಂಸ್ಕೃತಿ ಹಾಗೂ ವಿಜ್ಞಾನಗಳಿಗೆ ಅರಬ್ಬರ ಕೊಡುಗೆ

### ಸಂಸ್ಕೃತಿ

**ಶಿಕ್ಷಣ ಮತ್ತು ಸಾಹಿತ್ಯ:** ಅರಬ್ಬರು ಸಿಂಧ್ ಪ್ರಾಂತ್ಯವನ್ನು ಗೆದ್ದುದರಿಂದ ಅವರಿಗೆ ಭಾರತೀಯರ ವೇದಾಂತ ಹಾಗೂ ವಿಜ್ಞಾನಗಳ ಪರಿಚಯವುಂಟಾಯಿತು. ಬಸ್ರಾ, ಕೈರೋ, ಬಾಗ್ದಾದ್ ಮತ್ತು ಸ್ಪೇನಿನ ಕೊರ್ಡೋವಾಗಳಲ್ಲಿ ವಿಶ್ವವಿದ್ಯಾಲಯಗಳ ಸ್ಥಾಪನೆಯಾಯಿತು. ಅರಬ್‌ನ ಎಲ್ಲಾ ಮೂಲೆಗಳಿಂದ ಹಾಗೂ ಕ್ರೈಸ್ತ ಯೂರೋಪಿನಿಂದ ವಿದ್ಯಾರ್ಥಿಗಳು ಬಂದು ಇಲ್ಲಿ ಕಲಿಯಲಾರಂಭಿಸಿದರು. ವಿದೇಶಿ ವಿದ್ಯಾರ್ಥಿಗಳು ಇಸ್ಲಾಂ ಸಂಸ್ಕೃತಿಯನ್ನು ತಮ್ಮ ದೇಶಗಳಿಗೂ ಕೊಂಡೊಯ್ದರು. ಮುಂದೆ ಎರಡನೇ ಪೋಪ್ ಆದ ಸಿಲ್‌ವೆಸ್ಟರ್ ಗರ್ಬರ್ಟ್ ಎಂಬಾತ ಕೊರ್ಡೋವಾ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿದ್ದ. ರಾಷ್ಟ್ರದಲ್ಲಿ ಹಲವಾರು ವ್ಯವಸ್ಥಿತ ಗ್ರಂಥಾಲಯಗಳಿದ್ದುವು. ಕೆಲವು ಗ್ರಂಥಾಲಯಗಳಲ್ಲಿ ಸಾವಿರಕ್ಕೂ ಹೆಚ್ಚಿನ ಗ್ರಂಥಗಳಿದ್ದವು. ಇವುಗಳನ್ನೆಲ್ಲ ಸರಿಯಾಗಿ ವರ್ಗೀಕರಿಸಿ ಜೋಡಿಸಲಾಗಿತ್ತು.

ಸಾಹಿತ್ಯದಲ್ಲಿ ಅರಬ್ಬರ ಕೊಡುಗೆ ಇನ್ನೂ ಹೆಚ್ಚಿನದು. ಅವರಿಗೆ ಕಾವ್ಯದ ಬಗೆಗೆ ವಿಶೇಷ ಮಮತೆ. ಪ್ರೇಮ ಮತ್ತು ಯುದ್ಧಗಳ ವಸ್ತುವುಳ್ಳ ಅವರ ಅನೇಕ ರಚನೆಗಳು ಈಗಲೂ ಉಳಿದುಕೊಂಡಿವೆ. ಹನ್ನೊಂದನೆಯ ಶತಮಾನದ ಉಮರ್ ಖಯಾಮನ ರುಬಾಯತ್ ಎಂಬ ಪರ್ಷಿಯನ್ ಕಾವ್ಯ ಶಾಶ್ವತ ಕೀರ್ತಿಯನ್ನು ಸಂಪಾದಿಸಿದ್ದಲ್ಲದೆ, ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡಿದೆ. ಲಘು ಸಾಹಿತ್ಯದಲ್ಲಿ ಸಿಂದಾಬಾದ್ ನಾವಿಕ, ಅಲ್ಲಾವುದ್ದೀನನ ಅದ್ಭುತ ದೀಪ ಮೊದಲಾದ ಅಸಂಖ್ಯಾತ ಕಥೆಗಳನ್ನುಳ್ಳ

ಅರೇಬಿಯನ್ ನೈಟ್ಸ್ ತುಂಬಾ ಜನಪ್ರಿಯವಾದ ಗ್ರಂಥವಾಗಿದೆ. ಇದರಲ್ಲಿಯ ಕಥೆಗಳು ಆ ಕಾಲದ ಅರಬ್ಬರ ರೀತಿ ರಿವಾಜುಗಳನ್ನು ತಿಳಿಸುವುದರಲ್ಲೂ ಸಹಾಯಕವಾಗಿವೆ. ಅಲ್ಬೆರೂನಿ ಎಂಬಾತ ಮಹಾ ತತ್ವಜ್ಞಾನಿಯಾಗಿದ್ದು "ಕಿತಾಬುಲ್ ಹಿಂದ್" ಎಂಬ ಗ್ರಂಥದಿಂದ ಪ್ರಸಿದ್ಧನಾಗಿದ್ದಾನೆ. ಅರಬ್ಬರು ತುಂಬಾ ಸೊಗಸಾದ ಆಲಂಕಾರಿಕ ಲಿಪಿಯಲ್ಲಿ ಗ್ರಂಥಗಳನ್ನು ಬರೆದಿಟ್ಟಿದ್ದಾರೆ. ಅಲ್ಲದೆ ಕಲಾತ್ಮಕವಾದ ಹೊಳಪುಳ್ಳ ಪುಸ್ತಕ ರಚನೆಯಲ್ಲಿ ಅವರು ಸಿದ್ಧಹಸ್ತರು.

**ವಿಜ್ಞಾನ**

ಅರಬ್ಬರು ಭಾರತೀಯರಿಂದ ಹಾಗೂ ಗ್ರೀಕರಿಂದ ಖಗೋಳ ವಿಜ್ಞಾನ, ಔಷಧ ಹಾಗೂ ಗಣಿತಗಳನ್ನು ಕಲಿತರು. ಒಂಬತ್ತರವರೆಗಿನ ಅಂಕಿಗಳು ಹಾಗೂ ಸೊನ್ನೆಯ ಬಳಕೆಗಳನ್ನು ಭಾರತೀಯರಿಂದಲೂ, ರೇಖಾಗಣಿತ ಹಾಗೂ ತ್ರಿಕೋಣ ಮಿತಿಗಳನ್ನು ಗ್ರೀಕರಿಂದಲೂ ಕಲಿತರು. ಲೋಲಕವನ್ನು ನಿರ್ಮಿಸಿದವರು ಅರಬ್ಬರೇ. ಭಾರತ ಗ್ರೀಕ್‌ರಿಂದ ವೈದ್ಯಜ್ಞಾನವನ್ನು ಸಂಪಾದಿಸಿ ತಮ್ಮದೇ ಆದ ಯುನಾನಿ ಔಷಧ ಪದ್ಧತಿಯನ್ನು ಬೆಳೆಸಿದರು. ಈ ಪದ್ಧತಿ ಈಗಲೂ ಬಳಕೆಯಲ್ಲಿದೆ. ಅರಬ್ಬರು ಶರೀರ ಶಾಸ್ತ್ರ, ಆರೋಗ್ಯ ಶಾಸ್ತ್ರಗಳನ್ನು ಅಧ್ಯಯನ ಮಾಡಿ ತುಂಬ ಕ್ಲಿಷ್ಟವಾದ ಶಸ್ತ್ರ ಚಿಕಿತ್ಸೆಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು.

**ವಾಸ್ತುಶಿಲ್ಪ**

ಕಲೀಫರು ತರಬೇತಿ ಪಡೆದ ಅಧಿಕಾರಿಗಳನ್ನೂ, ವಾಸ್ತುಶಿಲ್ಪಿಗಳನ್ನೂ ಅಪಾರ ಸಂಖ್ಯೆಯಲ್ಲಿ ನೇಮಿಸಿಕೊಂಡಿದ್ದರು. ಬಾಗ್ದಾದ್, ಕೈರೋ ಮೊದಲಾದ ನಗರಗಳಲ್ಲಿ ಅರಮನೆಗಳು, ಮಸೀದಿಗಳು ಮತ್ತು ಸಾರ್ವಜನಿಕ ತೋಟಗಳು ಶೋಭಿಸಿದವು. ಕಟ್ಟಡ ರಚನೆಯಲ್ಲಿ ಅರಬ್ಬರು ಗುಮ್ಮಟ್ಟ, ಕಮಾನುಗಳ ವಿನ್ಯಾಸವನ್ನು ರೂಪಿಸಿಕೊಂಡರು. ಈ ವಿನ್ಯಾಸವು ಮುಂದೆ ಸಿರಿಯಾ, ಮೆಸಪೊಟೇಮಿಯಾ, ಈಜಿಪ್ಟ್, ಸ್ಪೇನ್ ಮತ್ತು ಭಾರತಗಳಿಗೂ ಹರಡಿತು. ಆಗ್ರಾದ ತಾಜ್‌ಮಹಲ್ ಮತ್ತು ದೆಹಲಿಯ ಜಾಮಿಯಾ ಮಸೀದಿಗಳು ಈ ಬಗೆಯ ಇಂಡೋ ಸಾರ್ಸೆನಿಕ್ ಅಥವಾ ಇಂಡೋ ಇಸ್ಲಾಮಿಕ್ ವಾಸ್ತುಶಿಲ್ಪದ ಸುಂದರ ಉದಾಹರಣೆಗಳಾಗಿವೆ.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ:**

1. 'ಇಸ್ಲಾಂ'ನ ಅರ್ಥವೇನು ? ಅದರ ಸ್ಥಾಪಕ ಯಾರು ?
2. "ಹಿಜಿರಾ" ಎಂದರೇನು ? ಅದರ ಮಹತ್ವವೇನು ?

3. ಇಸ್ಲಾಂ ಧರ್ಮದ ಪವಿತ್ರ ಗ್ರಂಥ **ಯಾವುದು** ? ಇಸ್ಲಾಂ ಧರ್ಮದ ಯಾತ್ರಾ ಕ್ಷೇತ್ರಗಳಾವುವು ?
4. ಏಳನೆಯ ಶತಮಾನದ ಆರಂಭದಲ್ಲಿ **ಅರಬ್ಬರ ಸಾಮಾಜಿಕ** ಸ್ಥಿತಿ ಹೇಗಿತ್ತು ?
5. ಪ್ರವಾದಿ ಮಹಮ್ಮದರು ಹುಟ್ಟಿದ್ದು ಎಂದು ? **ಅವರ** ತಂದೆ ಯಾರು ?
6. ಪ್ರವಾಸದಿಂದ ಮಹಮ್ಮದರಿಗೆ ಆದ ಪ್ರಯೋಜನವೇನು ?
7. ಅರೇಬಿಯಾದ ಕೆಲವು ಪ್ರಸಿದ್ಧ ವಿದ್ಯಾಕೇಂದ್ರಗಳನ್ನು ಹೆಸರಿಸಿ.

**II. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ:**

1. ಇಸ್ಲಾಂ ಧರ್ಮದ ಮೂಲತತ್ವಗಳನ್ನು ವಿವರಿಸಿ.
2. ಪ್ರವಾದಿ ಮಹಮ್ಮದರ ಜೀವನ ಸಾಧನೆಗಳನ್ನು ವಿವರಿಸಿ.
3. ಇಸ್ಲಾಂ ಧರ್ಮ ಹರಡಿದ ಬಗೆಯನ್ನು ವಿವರಿಸಿ.
4. ಇಸ್ಲಾಂ ಧರ್ಮದ ಅನುಯಾಯಿಗಳು ಆಚರಿಸಬೇಕಾದ ಐದು ಕರ್ತವ್ಯಗಳು ಯಾವುವು ?
5. ಈ ಕೆಳಕಂಡ ಕ್ಷೇತ್ರಗಳಲ್ಲಿ ಅರಬ್ಬರ ಕಾಣಿಕೆ ಏನು ?
   ಅ) ಸಾಹಿತ್ಯ, ಆ) ವಿಜ್ಞಾನ ಇ) ವಾಸ್ತುಶಿಲ್ಪ.

**III. ಬಿಟ್ಟಿರುವ ಜಾಗಗಳನ್ನು ಭರ್ತಿಮಾಡಿ.**

1. ಮಹಮ್ಮದರು..... ಎಂಬುವರನ್ನು ಮದುವೆಯಾದರು.
2. ಉಮರ್ ಖಯಾಂ..... ಕಾವ್ಯವನ್ನು....... ಭಾಷೆಯಲ್ಲಿ ರಚಿಸಿದನು.
3. ತಾಜ್‌ಮಹಲ್ ಮತ್ತು ಜಾಮಿಯಾ ಮಸೀದಿಗಳು ....... ವಾಸ್ತುಶಿಲ್ಪ ಮಾದರಿಗಳಾಗಿವೆ.
4. ಆಲ್ಬೆರೂನಿ ಎಂಬ ತತ್ವಜ್ಞಾನಿ....... ಎಂಬ ಗ್ರಂಥವನ್ನು ಬರೆದಿದ್ದಾನೆ.
5. ಅರಬ್ಬರು ಭಾರತೀಯ ಗಣಿತಜ್ಞರಿಂದ.........ಬಳಕೆಯನ್ನೂ......ನೇ ಸಂಖ್ಯೆ ಯನ್ನೂ ಕಲಿತರು.

**IV. ಇವುಗಳನ್ನು ಹೊಂದಿಸಿ ಬರೆಯಿರಿ.**

| ಅ | ಆ |
|---|---|
| 1) ಬಸ್ರಾ | ಅ) ಮಹಮ್ಮದರ ಮಗಳು |
| 2) ಕೊರ್ಡೋವಾ | ಆ) ಮೆಕ್ಕಾದ ಪೂಜಾ ಮಂದಿರ |
| 3) ಫಾತಿಮಾ | ಇ) ತತ್ವಜ್ಞಾನದ ಇತಿಹಾಸ |
| 4) ಕಾಬಾ | ಈ) ಸ್ಪೇನ್ |
| 5) ಅರೇಬಿಯನ್ ನೈಟ್ಸ್ | ಉ) ವಿಶ್ವವಿದ್ಯಾನಿಲಯ |
| | ಊ) ಕಥಾಸಂಗ್ರಹ |

# 2. ಯುರೋಪ್‌ನಲ್ಲಿ ಮಧ್ಯ ಯುಗ

## ಊಳಿಗಮಾನ್ಯ ಪದ್ಧತಿ

### ಊಳಿಗಮಾನ್ಯ (ಸರಂಜಾಮೀ) ಪದ್ಧತಿ

ಅರ್ಥ: ಸುಮಾರು ಐದನೆಯ ಶತಮಾನದಿಂದ ಹದಿನೈದನೆಯ ಶತಮಾನದವರೆಗೆ ಯೂರೋಪಿನಲ್ಲಿ ವಿಶಿಷ್ಟ ಸಾಮಾಜಿಕ ಮತ್ತು ಆರ್ಥಿಕ ಪದ್ಧತಿ ಪ್ರಚಲಿತವಾಗಿತ್ತು. ಜಮೀನುದಾರರ ವಶದಲ್ಲಿದ್ದ ಭೂಮಿಯಲ್ಲಿ ರೈತರು ಜೀತಪದ್ಧತಿಯಲ್ಲಿ ದುಡಿಯುತ್ತಿದ್ದ ವ್ಯವಸ್ಥೆಯಲ್ಲಿ ಊಳಿಗಮಾನ್ಯ ಪದ್ಧತಿಯ (ಫ್ಯೂಡಲಿಸಂ) ಆರ್ಥಿಕ ಸ್ವರೂಪವನ್ನು ತಿಳಿಯಬಹುದು.

ಜಮೀನುದಾರರು ದೊರೆಗೂ ಮತ್ತು ರೈತರಿಗೂ ನಡುವೆ ಮಧ್ಯವರ್ತಿಗಳಾಗಿ ವರ್ತಿಸುತ್ತಿದ್ದರು. ಜೀತದಾಳುಗಳಾದ ರೈತರು ವಸ್ತುರೂಪದಲ್ಲಿ ಗೇಣಿಯನ್ನು ಕೊಡುವುದರ ಜೊತೆಗೆ ಒಡೆಯರಿಗೆ ಉಚಿತವಾಗಿ ದೈಹಿಕ ಸೇವೆ ಸಲ್ಲಿಸುತ್ತಿದ್ದರು. ರಾಜಕೀಯವಾಗಿ ಭೂಮಿಯ ಕಂದಾಯವನ್ನು ವಸೂಲು ಮಾಡುವ ಸಶಕ್ತವಾದ ಕೇಂದ್ರ ಶಕ್ತಿಯೊಂದು ಇಲ್ಲದಿದ್ದರಿಂದಲೇ ಊಳಿಗಮಾನ್ಯ ಪದ್ಧತಿಗೆ ಎಡೆ ದೊರಕಿತ್ತು.

### ಊಳಿಗಮಾನ್ಯ ಪದ್ಧತಿಯ ಪರಿಭಾಷೆ

ತನ್ನ ಜಮೀನನ್ನು ಇನ್ನೊಬ್ಬನಿಗೆ ನೀಡುವ ವ್ಯಕ್ತಿಗೆ ಒಡೆಯ (ಲಾರ್ಡ್) ಎನ್ನುತ್ತಿದ್ದರು. ಆಸ್ತಿಯನ್ನು ಸ್ವೀಕರಿಸುತ್ತಿದ್ದ ವ್ಯಕ್ತಿಯನ್ನು ಹಿಡುವಳಿದಾರ (ವ್ಯಾಸೆಲ್) ಎಂದು ಕರೆಯುತ್ತಿದ್ದರು. ಒಡೆಯನಿಂದ ಹಿಡುವಳಿದಾರನಿಗೆ ನೀಡಲಾಗುತ್ತಿದ್ದ ತುಂಡುನೆಲವನ್ನು ಕರಾರಿನ ಉಂಬಳಿ (ಫೀಫ್) ಎಂದು ಕರೆಯುತ್ತಿದ್ದರು. ಭೂಮಾಲೀಕನಿಗೆ ಅಧೀನನಾಗಿ ವರ್ತಿಸುತ್ತಿದ್ದ ವ್ಯಕ್ತಿಗೆ ಜೀತದಾಳು (ಸರ್ಫ್) ಎನ್ನುತ್ತಿದ್ದರು.

### ಊಳಿಗಮಾನ್ಯ ಪದ್ಧತಿಯ ರಾಜ್ಯವ್ಯವಸ್ಥೆ

ಹನ್ನೊಂದನೆಯ ಶತಮಾನದ ವೇಳೆಗೆ ಯೂರೋಪಿನಲ್ಲಿ ಮೂರು ಪ್ರಮುಖ ಊಳಿಗಮಾನ್ಯ ರಾಜ್ಯಗಳಿದ್ದವು. ಅವು ಯಾವುವೆಂದರೆ: 1) ಒಟ್ಟೊ ಮಹಾಶಯನಿಂದ ಪುನರುಜ್ಜೀವನಗೊಂಡ ಪವಿತ್ರ ರೋಮನ್ ಸಾಮ್ರಾಜ್ಯ. 2) ಕ್ಯಾಪ್ಷಿಯನ್ ದೊರೆಗಳಿಂದ ಆಳಲ್ಪಡುತ್ತಿದ್ದ ಫ್ರಾನ್ಸ್ ರಾಜ್ಯ. 3)ವಿಜೇತ ವಿಲಿಯಂನಿಂದ ಒಂದಾಗಿಸಲ್ಪಟ್ಟ ಇಂಗ್ಲೆಂಡ್ ರಾಜ್ಯ.

ಮಧ್ಯಯುಗದಲ್ಲಿ ಊಳಿಗಮಾನ್ಯ ಪದ್ಧತಿ ಯೂರೋಪಿನ ಇತರ ಭಾಗಗಳಲ್ಲೂ ಅಲ್ಪಸ್ವಲ್ಪ ಮಾರ್ಪಾಟಿನೊಂದಿಗೆ ಅಸ್ತಿತ್ವದಲ್ಲಿದ್ದುದನ್ನು ಕಾಣಬಹುದಾಗಿದೆ.

## ಒಡೆಯರು ಮತ್ತು ಅವರ ಸವಲತ್ತುಗಳು

ತನ್ನ ವ್ಯಾಪ್ತಿಗೆ ಬರುವ ಪ್ರದೇಶದಲ್ಲಿ ಊಳಿಗಮಾನ್ಯ ಒಡೆಯ ಸರ್ವಾಧಿಕಾರಿ ಆಗಿದ್ದನು. ಅವನಿಗೆ ಅವನದೇ ಆದ ಖಾಸಗೀ ಸೈನ್ಯವಿತ್ತು. ಭದ್ರಕೋಟೆ ಇತ್ತು, ತನಗೆ ಸೇರಿದ ಪ್ರದೇಶದಲ್ಲಿದ್ದ ಜನರಿಂದ ತೆರಿಗೆ ವಸೂಲಿ ಮಾಡಬಹುದಿತ್ತು. ತನ್ನ ವಶದಲ್ಲಿದ್ದ ಕರಾರಿನ ಉಂಬಳಿ ಪ್ರದೇಶಗಳಲ್ಲಿ ನ್ಯಾಯಾಧೀಶನಾಗಿ ಕಾರ್ಯ ನಿರ್ವಹಿಸಿ ದೂರುಗಳನ್ನು ವಿಚಾರಿಸುತ್ತಿದ್ದನು.

ಹೀಗೆ ಹತ್ತಾರು ಅಧಿಕಾರಗಳನ್ನು ಹೊಂದಿದ್ದ ಊಳಿಗಮಾನ್ಯ ಸರದಾರರು ದಿನೇ ದಿನೇ ಪ್ರಬಲರಾಗುತ್ತಾ ಬಂದರು. ದೊರೆಯ ಅಧಿಕಾರವನ್ನೇ ಪ್ರಶ್ನಿಸುವ ಮಟ್ಟಕ್ಕೂ ಬಂದರು. ಪ್ರಬಲರಾದ ಶ್ರೀಮಂತ ಒಡೆಯರು, ಡ್ಯೂಕ ಮತ್ತು ಅರ್ಲ್ಸ್ ಎಂದು ಪ್ರಸಿದ್ಧರಾಗಿದ್ದರು. ಅವರು ತಮ್ಮ ಕೈ ಕೆಳಗಿನ ಹಿಡುವಳಿದಾರರಿಂದ ಸೈನಿಕ (Baron) ಸಹಾಯವನ್ನು ಪಡೆಯುತ್ತಿದ್ದರು. ನೈಟ್ಸ್ (Knights) ಎಂದು ಕರೆಯಲ್ಪಡುತ್ತಿದ್ದ ಸರದಾರರು ಮೇಲಿನವರಿಂದ ಹಿಡುವಳಿಗಳನ್ನು ಪಡೆದು, ಸೈನಿಕ ನೆರವನ್ನು ಒಡೆಯರಿಗೆ ನೀಡುತ್ತಿದ್ದರು.

## ರೈತವರ್ಗದ ಸ್ಥಿತಿಗತಿಗಳು

ಸಮಾಜದಲ್ಲಿ ರೈತವರ್ಗದವರು ಕೆಳಗಿನ ವರ್ಗಕ್ಕೆ ಸೇರಿದವರಾಗಿದ್ದರು. ಇಡೀ ವ್ಯವಸ್ಥೆಯ ಹೊಣೆಗಾರಿಕೆ ಹೊತ್ತವರಾಗಿದ್ದರು. ರೈತವರ್ಗದಲ್ಲಿ ಅನೇಕ ವಿಭಾಗಗಳಿದ್ದವು. ಜೀತವರ್ಗದವರು ಅತಿಮುಖ್ಯರಾಗಿದ್ದರು. ಹಿಡುವಳಿದಾರರು ನೀಡಿದ ಭೂಮಿಯನ್ನು ತೆಗೆದುಕೊಂಡು ಸಾಗುವಳಿ ಮಾಡುತ್ತಿದ್ದರು ಮತ್ತು ಊಳಿಗಮಾನ್ಯದೊಡೆಯರ ಜಮೀನುಗಳಲ್ಲಿ ಕೆಲಸ ಮಾಡಲು ನಿಯುಕ್ತರಾಗಿದ್ದರು. ಲಾರ್ಡ್ ವರ್ಗದ ಸಾರ್ವಜನಿಕ ಕಾರ್ಯಗಳಲ್ಲಿ, ಲಾರ್ಡನ ಸ್ವಂತದ ಕಟ್ಟಡ ನಿರ್ಮಾಣಗಳಲ್ಲಿ ಉಚಿತ ಸೇವೆ ಮಾಡಬೇಕಾದ ನಿರ್ಬಂಧನೆಗೆ ಒಳಗಾಗಿದ್ದರು. ಅವರು ತಾವು ಉಳುಮೆ ಮಾಡುತ್ತಿದ್ದ ಜಾಗದಲ್ಲೇ ವಾಸಿಸಬೇಕಾಗಿತ್ತು. ಬೇರೆ ಕಡೆಗೆ ವಲಸೆ ಹೋಗಲು ಅಥವಾ ಓಡಿಹೋಗಲು ಯತ್ನಿಸಿದರೆ ಅಂಥವರನ್ನು ಹಿಡಿದು ಕ್ರೂರವಾಗಿ ದಂಡಿಸಲಾಗುತ್ತಿತ್ತು.

ಇನ್ನೊಂದು ವರ್ಗದ ಜನ ಸ್ವತಂತ್ರ ಸಾಗುವಳಿದಾರರೆಂದು ಕರೆಯಲ್ಪಡುತ್ತಿದ್ದರು. ಲಾರ್ಡ್ಸ್‌ರಿಂದ ಇವರಿಗೂ ಜಮೀನು ನೀಡಲಾಗುತ್ತಿತ್ತು. ಆದರೂ ಸಹ ಅವರು ಸ್ವಂತ ಜಮೀನನ್ನೂ ನೋಡಿಕೊಳ್ಳುತ್ತಿದ್ದರು. ಉಚಿತಸೇವೆ ನೀಡುವ ನಿರ್ಬಂಧದಿಂದ ಇವರನ್ನು ಮುಕ್ತಗೊಳಿಸಲಾಗಿತ್ತು.

ಮೂರನೇ ವರ್ಗದ ರೈತವರ್ಗವನ್ನು 'ಜೀತದಾಳು' (Villeins) ಎಂದು ಕರೆಯುತ್ತಿದ್ದರು.

ಇವರು ತಮ್ಮ ಉತ್ಪತ್ತಿಯಲ್ಲಿನ ಪಾಲೊಂದನ್ನು ಲಾರ್ಡ್ ವರ್ಗಕ್ಕೆ ನೀಡುತ್ತಿದ್ದರು. ಇವರು ಕೂಲಿಯಿಲ್ಲದೆ ನಿರ್ದಿಷ್ಟ ಅವಧಿಯ ಕಾಲ ತಮ್ಮ ಮೇಲಿನವರಿಗಾಗಿ ದುಡಿಯಬೇಕಾಗಿತ್ತು.

**ಈ ಪದ್ಧತಿಯ ಗುಣಗಳು**

ಊಳಿಗಮಾನ್ಯ ವ್ಯವಸ್ಥೆ ಒಂದು ಪ್ರಯೋಜನಕಾರೀ ಕೆಲಸ ಮಾಡಿತು. ಯುರೋಪಿನಲ್ಲಿ ಶಾಂತಿ ಮತ್ತು ಭದ್ರತೆಗಳನ್ನು ಕಾಪಾಡಿಕೊಂಡು ಬಂದಿತು. ಈ ವ್ಯವಸ್ಥೆಯಿಂದ ರಾಜರು, ಒಡೆಯರು, ಒಕ್ಕಲುದಾರರು, ಜೀತದಾಳುಗಳು ಎಂಬ ಸಾಮಾಜಿಕ ಶ್ರೇಣೀಕರಣ ಉಂಟಾಯಿತು. ಅಲ್ಲದೆ ಈ ವ್ಯವಸ್ಥೆಯು ಒಂದು ಅರ್ಥವ್ಯವಸ್ಥೆಯ ಸೂತ್ರವನ್ನು ಒದಗಿಸಿಕೊಟ್ಟಿತು. ಜೀತದಾಳುಗಳು ಮೊದಲುಗೊಂಡು ಎಲ್ಲ ಶ್ರೇಣಿಗಳವರೂ ಜೀವನ ನಿರ್ವಹಣೆ ಮಾಡಲು ಇದರಿಂದ ಸಾಧ್ಯವಾಯಿತು.

**ಈ ಪದ್ಧತಿಯ ಅವಗುಣಗಳು**

ಊಳಿಗಮಾನ್ಯ ಪದ್ಧತಿ ಅತಿ ದೊಡ್ಡ ಶೋಷಣಾ ಪದ್ಧತಿಯಾಗಿತ್ತು. ರೈತವರ್ಗದವರು ಬೆವರು ಸುರಿಸಿ ದುಡಿದು ಬಳಲುತ್ತಿದ್ದರು. ಲಾರ್ಡ್ ವರ್ಗದವರು ಕುಡಿದು ನರ್ತಿಸುತ್ತಾ ಕಾಲ ಕಳೆಯುತ್ತಿದ್ದರು.

ಊಳಿಗಮಾನ್ಯ ಪದ್ಧತಿಯಲ್ಲಿ ಒಂದು ಬಲಿಷ್ಠವಾದ ಮತ್ತು ಕೇಂದ್ರೀಕೃತವಾದ ಸರಕಾರ ರೂಪುಗೊಳ್ಳಲು ಸಾಧ್ಯವಿರಲಿಲ್ಲ. ಅಲ್ಲದೆ ಈ ಪದ್ಧತಿಯು ರಾಜ್ಯಗಳ ಏಕೀಕರಣವನ್ನೂ ತಪ್ಪಿಸಿತು.

**ಊಳಿಗಮಾನ್ಯ ಪದ್ಧತಿಯ ಅವನತಿ**

ಮಧ್ಯಕಾಲೀನಯುಗ ಮುಗಿಯುವ ವೇಳೆಗೆ ಊಳಿಗಮಾನ್ಯ ಪದ್ಧತಿ ಅವನತಿಯತ್ತ ಸಾಗುತ್ತ ಬಂದಿತು. ನಗರಗಳು ಬೆಳೆದು ವಾಣಿಜ್ಯ–ವ್ಯಾಪಾರ ಹೆಚ್ಚಾಗಿ ವರ್ತಕರು ಮತ್ತು ಬ್ಯಾಂಕರುಗಳಂಥ ಹೊಸ ಸಾಮಾಜಿಕ ವರ್ಗಗಳು ಕಾಣಿಸಿಕೊಳ್ಳತೊಡಗಿದವು. ಇವು ಊಳಿಗಮಾನ್ಯ ಪದ್ಧತಿ ಅವನತಿ ಹೊಂದಲು ಸಾಕಷ್ಟು ಪ್ರಭಾವ ಬೀರಿದವು. ವಿನಿಮಯಕ್ಕೆ ಹಣದ ವಹಿವಾಟು ಹೆಚ್ಚಾಯಿತು. ಹೊಸ ಭೂ ಪ್ರದೇಶಗಳ ಅನ್ವೇಷಣೆ ನಡೆಯಿತು. ಸಿಡಿಮದ್ದಿನ ಬಳಕೆ ಇತ್ಯಾದಿ ವಿಜ್ಞಾನದ ನವಶೋಧಗಳು ಬೆಳಕಿಗೆ ಬಂದವು. ಇವೆಲ್ಲವೂ ಊಳಿಗಮಾನ್ಯ ಪದ್ಧತಿ ನಾಶವಾಗಲು ನೆರವಾದವು. ಇತ್ತಕಡೆ ಊಳಿಗಮಾನ್ಯ ಪ್ರದೇಶಗಳಲ್ಲಿದ್ದ ರೈತಾಪಿ ಜನರು ತಮ್ಮ 'ಲಾರ್ಡ್' ವರ್ಗದವರ ವಿರುದ್ಧ ದಂಗೆಯೆದ್ದರು. ಅತ್ತ ಕಡೆ ರಾಷ್ಟ್ರೀಯತಾ ವಿಕಾಸದ ಹಿನ್ನೆಲೆಯಲ್ಲಿ ರಾಜರು ಹೆಚ್ಚು ಹೆಚ್ಚು ಪ್ರಬಲರಾಗುತ್ತಾ ಬಂದು ಲಾರ್ಡ್ ವರ್ಗಕ್ಕೆ ವಿರುದ್ಧವಾಗಿ ವರ್ತಿಸತೊಡಗಿದರು. ಪರಿಣಾಮವಾಗಿ ಊಳಿಗಮಾನ್ಯ ಪದ್ಧತಿ ಮರೆಯಾಗುತ್ತಾ ಬಂದಿತು.

**ವಾಣಿಜ್ಯ ಮತ್ತು ವ್ಯಾಪಾರಗಳ ಪ್ರಗತಿ**

ಹೊಸನಗರಗಳ ಉದಯ ಮತ್ತು ನವ ವಾಣಿಜ್ಯ ಮಾರ್ಗಗಳ ಶೋಧಗಳಿಂದ ಯುರೋಪು ಗ್ರಾಮೀಣ ಜೀವನದಿಂದ ನಗರ ಜೀವನಕ್ಕೆ ಪರಿವರ್ತಿತವಾಯಿತು. ಭೂಮಾಲೀಕರು ಮತ್ತು ರೈತರು ಊಳಿಗಮಾನ್ಯ ಪ್ರದೇಶಗಳಲ್ಲಿ ಉಳಿದುಕೊಂಡರು. ವ್ಯಾಪಾರ ಮತ್ತು ನಗರಗಳ ಬೆಳವಣಿಗೆಯಲ್ಲಿ ಅವರ ಪಾತ್ರ ಏನೇನೂ ಇರದಾಯಿತು.

ಹೊಸದೊಂದು ಜನವರ್ಗ ನಿರ್ಮಾಣವಾಯಿತು. ಅದರಲ್ಲಿ ವ್ಯಾಪಾರಿಗಳು, ಬ್ಯಾಂಕರುಗಳು, ಕುಶಲಕರ್ಮಿಗಳು ಮತ್ತು ಇತರ ಕಾರ್ಮಿಕರು ಇದ್ದರು.

**ಮಧ್ಯಕಾಲೀನ ನಗರಗಳು**

ಮಧ್ಯಕಾಲೀನ ಮಾದರಿಯ ಪಟ್ಟಣದಲ್ಲಿ ಅದರ ಆಕರ್ಷಣ ಕೇಂದ್ರ ಎಂದರೆ ಅಲ್ಲಿಯ ಚರ್ಚ್ (ಇಗರ್ಜಿ) ಆಗಿತ್ತು. ಚರ್ಚ್ ಕಟ್ಟಡವಲ್ಲದೆ ಪುರಭವನ, ವ್ಯಾಪಾರದ ಸಂಕೀರ್ಣಗಳು, ಕೈಗಾರಿಕಾ ಸಂಘಟನೆಗಳ ಕಟ್ಟಡಗಳು ಇರುತ್ತಿದ್ದವು. ಮಧ್ಯಕಾಲೀನ ನಗ್ಗರಗಳಲ್ಲಿ ಅದರದೇ ಆದ ಸಾಮಾಜಿಕ ರಚನೆಯೊಂದು ಇರುತ್ತಿತ್ತು. ಮೇಲ್‌ಸ್ತರದಲ್ಲಿ ಪ್ರಸಿದ್ಧ ವಾಣಿಜ್ಯೋದ್ಯಮಿಗಳು, ಹಣಕಾಸಿನ ಲೇವಾದೇವಿಗಾರರು, ಕುಶಲಕರ್ಮಿಗಳು ಅವರ ಕೆಳಗೆ ಕರಕುಶಲಕರ್ಮಿಗಳು ಮತ್ತು ಗುಮಾಸ್ತ ವರ್ಗದವರು ಇದ್ದರು. ಸಾಮಾಜಿಕ ಶ್ರೇಣಿಯ ಕೆಳಸ್ತರದಲ್ಲಿ ಇತರ ಕಾರ್ಮಿಕರು ವೃತ್ತಿ ಕಲಿಕೆದಾರರು ಇದ್ದರು.

ಉತ್ತರ ಇಟಲಿಯಲ್ಲಿ ವೆನಿಸ್, ಜಿನೋವ, ಫೀಸಾ, ಮಿಲಾನ್, ಫ್ಲಾರೆನ್ಸ್ ನಗರಗಳು ಪ್ರವರ್ಧಮಾನಕ್ಕೆ ಬಂದವು. ದಕ್ಷಿಣ ಫ್ರಾನ್ಸಿನಲ್ಲಿ ಟೂಲೋಸ್, ಮಾರ್ಸೆಲ್ ಮತ್ತು ನಾರ್ಬೋನ್ ನಗರಗಳು ಹುಟ್ಟಿಕೊಂಡವು. ರೈನ್ ಕಣಿವೆ ಪ್ರದೇಶಗಳಲ್ಲಿ ಕೊಲೊನ್, ಮೈಂಜ್, ಸ್ಟ್ರಾಸ್ಬರ್ಗ್ ನಗರಗಳು ಕಾಣಿಸಿಕೊಂಡವು. ಉತ್ತರದ ಕಡೆ ಹ್ಯಾಮ್‌ಬರ್ಗ್, ಬ್ರೆಮೆನ್ ಮತ್ತು ಲುಬೆಕ್ ನಗರಗಳು ಬೆಳವಣಿಗೆ ಹೊಂದಿದವು. ಇಂಗ್ಲೆಂಡು ವಿಸ್ತಾರ ಮತ್ತು ಜನಸಂಖ್ಯೆಯಲ್ಲಿ ಅಧಿಕ ಪ್ರಗತಿ ಹೊಂದಿತು.

**ವಾಣಿಜ್ಯದ ಬೆಳವಣಿಗೆ**

ಮಧ್ಯಪ್ರಾಚ್ಯದಲ್ಲಿ, ಮಧ್ಯಯುಗದ ಕಾಲದಲ್ಲಿ ಕ್ರೈಸ್ತರ ಪವಿತ್ರ ನೆಲೆಗಳಿಗಾಗಿ ಧಾರ್ಮಿಕ ಸಮರ ಯೋಧರು (Crusaders)ಹೋರಾಟ ನಡೆಸಿದುದರ ಫಲವಾಗಿ, ಆ ಕಾಲದಲ್ಲಿ ಕಂಡುಬರುತ್ತಿದ್ದ ಪ್ರತ್ಯೇಕತಾ ಮನೋಭಾವವು ನಶಿಸಲು ಕಾರಣವಾಯಿತು. ಚರ್ಚಿಗೆ ಅಗತ್ಯವಿದ್ದ, ಯೂರೋಪಿನಲ್ಲಿ ಸಿಗದಿದ್ದ ಆಭರಣಗಳಲ್ಲಿ ಮತ್ತು ಅಧಿಕಾರಿ ಪೋಷಾಕುಗಳಂಥ ಸರಕುಗಳಲ್ಲಿ ಆಸಕ್ತಿ ಉಂಟಾಯಿತು. ಇಂಥ ಸರಕುಗಳನ್ನು ಧಾರ್ಮಿಕ ಸಮರಯೋಧರು ಮಧ್ಯಪ್ರಾಚ್ಯದ ಪವಿತ್ರ ಪ್ರದೇಶಗಳಿಂದ ಯೂರೋಪಿಗೆ ತಂದರು.

ಉದಾರತನದ ಮತ್ತು ಗಣ್ಯ ಶ್ರೀಮಂತಿಕೆಯ ಜನ ಪ್ರಾಚ್ಯ ದೇಶದ ಶ್ರೀಮಂತಿಕೆಯ ಭೋಗವನ್ನು ಕೊಳ್ಳಲು ಬಯಸಿದರು. ನಾರ್ಮನ್ನರು ಉತ್ತರ ಇಟಲಿ ಹಾಗೂ ಸಿಸಿಲಿಯನ್ನು ಗೆದ್ದುದರಿಂದ ಮೆಡಿಟರೇನಿಯನ್ ಸಮುದ್ರದ ಪ್ರದೇಶದಲ್ಲಿದ್ದ ಅರಬ್ಬರ ಸಾರ್ವಭೌಮತ್ವಕ್ಕೆ ಧಕ್ಕೆಯುಂಟಾಯಿತು. ಇದರಿಂದ ದೂರ ಪ್ರಯಾಣದ ವ್ಯಾಪಾರಕ್ಕೆ ಬಲವಾದ ಪ್ರೇರಣೆ ಒದಗಿತು. ಕಾನ್‌ಸ್ಟಾಂಟಿನೋಪಲ್‌ನಿಂದ ಏಷ್ಯಾದ ಸರಕುಗಳನ್ನು ಪಡೆಯುವಂತಾಯಿತು. ಬಾಲ್ಟಿಕ್ ಪ್ರದೇಶದಿಂದ ಮೀನು, ರಷ್ಯಾದಿಂದ ತುಪ್ಪಳ (ಫರ್), ಉತ್ತರ ಯೂರೋಪಿನಿಂದ ಧಾನ್ಯಗಳನ್ನು ಪಡೆಯಲು ಅನುಕೂಲವಾಯಿತು.

**ವೃತ್ತಿ ಸಂಘಗಳು (ಗಿಲ್ಡ್)**

ವಾಣಿಜ್ಯ ಬೆಳೆದಂತೆಲ್ಲಾ ವರ್ತಕರ ಮತ್ತು ಕುಶಲಕರ್ಮಿಗಳ ವೃತ್ತಿಶ್ರೇಣಿಗಳೂ ಹುಟ್ಟಿಕೊಂಡವು. ಈ ವೃತ್ತಿ ಶ್ರೇಣಿಗಳು ಬೆಲೆಗಳನ್ನು ನಿಯಂತ್ರಿಸುವುದರೊಂದಿಗೆ ವೃತ್ತಿಗಳ ಗುಣಮಟ್ಟವನ್ನು ಕಾಯ್ದುಕೊಳ್ಳಲು ನೆರವಾದುವು. ಚಿನಿವಾರರ, ಕಮ್ಮಾರರ, ಚಮ್ಮಾರರ, ಕ್ಷೌರಿಕರ, ಬಡಗಿಗಳ ಮತ್ತು ಇನ್ನೂ ಅನೇಕರ ವೃತ್ತಿ ಶ್ರೇಣಿಗಳು ಪ್ರಾರಂಭಗೊಂಡವು. ಮಧ್ಯಕಾಲೀನ ಯುಗದಲ್ಲಿ ಈ ವಾಣಿಜ್ಯ ಮತ್ತು ಕುಶಲ ಕರ್ಮಿಗಳ ಈ ಶ್ರೇಣಿಗಳು ಉಪಯುಕ್ತ ಕಾರ್ಯವನ್ನೆಸಗಿದವು.

## ಚರ್ಚಿನ ಪಾತ್ರ

ಮಧ್ಯಕಾಲೀನ ಯುಗದಲ್ಲಿ ಯೂರೋಪಿನಲ್ಲಿ ಚರ್ಚ್ ಪ್ರಬಲತರ ಧಾರ್ಮಿಕ ಸಂಸ್ಥೆ ಆಗಿತ್ತು. ಕ್ಯಾಥೋಲಿಕ್ ಚರ್ಚಿನ ಅಧಿಪತಿಯಾದ ಪೋಪನನ್ನು ಈ ಜಗತ್ತಿನಲ್ಲಿ ಯೇಸುಕ್ರಿಸ್ತನ ಪ್ರತಿನಿಧಿಯೆಂದು ಅಂಗೀಕರಿಸಿದ್ದರು. ಕಾಲಾನಂತರ ರೋಮ್ ಸಾಮ್ರಾಜ್ಯದ ಅಧಿಕೃತ ಧರ್ಮವಾಗಿ ಕ್ರೈಸ್ತಮತವನ್ನು ಅಂಗೀಕರಿಸಲಾಯಿತು. ಕ್ರಮೇಣ ಕ್ರಿಸ್ತನ ಪ್ರಧಾನ ಅನುಯಾಯಿಯೆನಿಸಿದ ಸಂತ ಪೀಟರನ ಉತ್ತರಾಧಿಕಾರಿಯೆಂದು ಮನ್ನಣೆ ನೀಡಿದ್ದರಿಂದ ಪೋಪ್ ಅಧ್ಯಾತ್ಮಿಕ ಮತ್ತು ಲೌಕಿಕ ಅಧಿಕಾರವನ್ನು ಅನುಭವಿಸತೊಡಗಿದನು.

**ಕ್ರೈಸ್ತ ಧರ್ಮದ ಸನ್ಯಾಸಿ ಸಂಘ**

ಮೂಲಭೂತವಾಗಿ ಕ್ರೈಸ್ತಮತವು ಈ ಭೂಮಿಯಲ್ಲಿ ಪ್ರತಿಯೊಬ್ಬ ಮಾನವನ ಜೀವಿತವು ತನ್ನ ಅಸ್ತಿತ್ವಕ್ಕಷ್ಟೇ ಮೀಸಲಾದುದಲ್ಲ ಎಂದು ಹೇಳುತ್ತದೆ. ಮನುಷ್ಯನು ತನ್ನ ಜೀವನದ ಸುಖಸಂತೋಷಗಳನ್ನು ಮರಣಾನಂತರದ ಅನಂತ ದೈವಿಕ ಸ್ಫೂರ್ತಿಯ ಆನಂದವನ್ನು ಅನುಭವಿಸಲು ತ್ಯಜಿಸಬೇಕು. ಈ ನಂಬಿಕೆಯ ಅನುಸಾರವಾಗಿ ಸನ್ಯಾಸಿ ಜೀವನವಿಧಾನಕ್ಕೆ ಮನ್ನಣೆ ದೊರೆಯುತ್ತಾ ಹೋಯಿತು. ಸಂತ ಅಗಸ್ಟೀನ್, ಸಂತ ಫ್ರಾನ್ಸಿಸ್, ಸಂತ ಬೆನೆಡಿಕ್ಟ್ ಮಹಾಶಯರುಗಳು ಪರಿಶುದ್ಧತೆ, ಆವೇಶಗಳ ನಿಯಂತ್ರಣ ಮತ್ತು ಒಳ್ಳೆಯತನಕ್ಕಾಗಿ ಪರಿಶ್ರಮ ಪಡುವುದನ್ನು ಒತ್ತಿ ಹೇಳಿದರು.

**ಮಧ್ಯಯುಗದ ವಾಣಿಜ್ಯ ಸಂತೆಗಳು (Medieval Fairs)**

ಮಧ್ಯಕಾಲೀನ ಯುಗದ ವ್ಯಾಪಾರಿಗಳು ತಮ್ಮ ಸರಕುಗಳ ವಿತರಣೆಗಾಗಿ ನೂತನ ವಿಧಾನವೊಂದನ್ನು ಕಂಡುಕೊಂಡರು. ಆ ಕಾಲದ ವಾಣಿಜ್ಯ ಸಂತೆಗಳ ಈ ವಿಧಾನವನ್ನು ಜಾರಿಗೆ ತಂದರು. ನಗರಾಡಳಿತದ ಆಶ್ರಯದಲ್ಲಿ ಇಲ್ಲವೇ ರಾಜ್ಯದ ಅಧಿಕಾರವರ್ಗದ ರಕ್ಷಣೆಯಲ್ಲಿ ಇವು ಜಾತ್ರೆಗಳಂತೆ ನಡೆಸಲಾರಂಭಿಸಿದವು. ಆಯಾ ಸ್ಥಳೀಯ ವ್ಯಾಪಾರಿಗಳ ಅನುಕೂಲಕ್ಕಾಗಿ ದೂರದ ಪ್ರದೇಶಗಳಿಂದ ವರ್ತಕರು ಬಂದು ಈ ವಾಣಿಜ್ಯ ಸಂತೆಗಳಲ್ಲಿ ತಮ್ಮ ಸರಕುಗಳನ್ನು ಮಾರುತ್ತಿದ್ದರು. ವ್ಯಾಪಾರದ ಪ್ರದೇಶಗಳಲ್ಲಿ ವಿವಾದಗಳು ಉಂಟಾದಾಗ ವಿಶೇಷ ನ್ಯಾಯಾಲಯಗಳು ವಿಚಾರಣೆ ನಡೆಸುತ್ತಿದ್ದವು. ತಮ್ಮ

ಸುತ್ತಮುತ್ತಲಿನ ಪ್ರದೇಶಗಳಲ್ಲಿ ನ್ಯಾಯಬೆಲೆಯಲ್ಲಿ ಯೂರೋಪಿನ ಜನರು ದೂರದ ಪ್ರದೇಶದವರಿಂದ ಸರಕು ಪಡೆಯಲು ಈ ಭಾರಿ ಸಂತೆಗಳಿಂದ ಅನುಕೂಲವಾಯಿತು.

ವಾಣಿಜ್ಯ ಪುನರುಜ್ಜೀವನ ಮತ್ತು ಹೊಸನಗರಗಳ ಉದಯಗಳ ಸಲುವಾಗಿ ಸಮಾಜದಲ್ಲಿ ವಾಣಿಜ್ಯ ವ್ಯವಹಾರಗಳ ಪ್ರಾಶಸ್ತ್ಯ ಹೆಚ್ಚಾಯಿತು. ವರ್ತಕ ವರ್ಗ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಸಮಾಜದಲ್ಲಿ ಒಂದು ಶಕ್ತಿಯಾಗಿ ರೂಪುಗೊಂಡಿತು. ಅಲ್ಲದೆ ರಾಜಕೀಯವಾಗಿ ಬಲಿಷ್ಠ ವರ್ಗವೆನ್ನಿಸಿಕೊಂಡಿತು.

**ಶಿಕ್ಷಣ**

ಮಧ್ಯಕಾಲೀನ ಕ್ರೈಸ್ತಮಠಗಳು (ಸನ್ಯಾಸಿ ಸಂಘಗಳು) ವಿದ್ಯಾಕೇಂದ್ರಗಳೂ ಆಗಿದ್ದುವು. ಸನ್ಯಾಸಿಗಳು ಜನರ ನೈತಿಕ ಮಟ್ಟವನ್ನು ಸುಧಾರಿಸಲು ಸೇವಾ ಕಾರ್ಯ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ಮಠಗಳಲ್ಲಿ ವ್ಯಾಕರಣ, ತರ್ಕ ಗಣಿತ ಮತ್ತು ಆತ್ಮ ಜ್ಞಾನಗಳನ್ನು ಕಲಿಸುತ್ತಿದ್ದರು. ಲ್ಯಾಟಿನ್ ಭಾಷೆ ಶಿಕ್ಷಣ ಮಾಧ್ಯಮ.

ಮುಂದೆ ಸಿಯಾನೋ, ಬೋಲೊನ (ಇಟಲಿ), ಪ್ಯಾರಿಸ್ (ಫ್ರಾನ್ಸ್), ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್ (ಬ್ರಿಟನ್)ಗಳಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟವು. ಇವು ತತ್ವಶಾಸ್ತ್ರ ಮತ್ತು ಆತ್ಮ ಜ್ಞಾನಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟವು. ವಿಜ್ಞಾನ, ಇತಿಹಾಸ ಮತ್ತು ಕುಶಲಕಲೆಗಳಿಗೆ ಈ ಕೇಂದ್ರಗಳಲ್ಲಿ ಹೆಚ್ಚಿನ ಅವಕಾಶವಿರಲಿಲ್ಲ. ಒಟ್ಟಿನಲ್ಲಿ ಜನರು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಮುಂದುವರೆಯಲು ಈ ಮಠಗಳು ನೆರವಾದವು.

## ಮಧ್ಯಯುಗದ ಸಂಸ್ಕೃತಿ ಮತ್ತು ಜೀವನ

ಪಶ್ಚಿಮದಲ್ಲಿ ರೋಮನ್ ಸಾಮ್ರಾಜ್ಯ ಅವನತಿ ಹೊಂದಿದ ಮೇಲೆ ಪುನರುಜ್ಜೀವನ ಮತ್ತು ಸುಧಾರಣಾ ಯುಗ ಪ್ರಾರಂಭವಾಗುವವರೆಗಿನ ಅವಧಿಯನ್ನು ಮಧ್ಯಯುಗದ ಕಾಲವೆಂದು ಯೂರೋಪಿನ ಇತಿಹಾಸದಲ್ಲಿ ಕರೆಯಲಾಗಿದೆ. ಮಧ್ಯಯುಗದ ಜೀವನ ಮತ್ತು ಸಂಸ್ಕೃತಿಯ ವಿಚಾರವಾಗಿ ಮುಂದೆ ಪ್ರಸ್ತಾಪ ಮಾಡಲಾಗಿದೆ.

**ಊಳಿಗಮಾನ್ಯ ಸಮಾಜ**

ಮಧ್ಯಕಾಲಯುಗದ ಸಮಾಜವನ್ನು ಊಳಿಗಮಾನ್ಯ ಸಮಾಜವೆಂದು ಕರೆಯಬಹುದು. ಹಿಂದಿನ ಅಧ್ಯಾಯಗಳಲ್ಲಿ ತಿಳಿಸಿರುವಂತೆ ಊಳಿಗಮಾನ್ಯ ಪದ್ಧತಿಯ ಲಕ್ಷಣಾನುಸಾರ ಈ ಕಾಲದ ಸಮಾಜ ಶ್ರೇಣೀಕೃತವಾಗಿದ್ದು, ಸ್ಥಾನಮಾನದ ಪ್ರಜ್ಞೆಯಿಂದ ಕೂಡಿತ್ತು.

ಮಧ್ಯಕಾಲದ ಯೂರೋಪಿಯನ್ ಸಮಾಜವು ಅನೇಕ ವರ್ಗಗಳಾಗಿ ವಿಭಜಿತವಾಗಿತ್ತು. ಉದಾರಶೀಲ ಗುಣದಿಂದ ಕೂಡಿದ ಉನ್ನತ ವರ್ಗವು ಸಮಾಜದಲ್ಲಿ ರೂಪುಗೊಂಡಿತ್ತು. ಈ ವರ್ಗದ ಹಕ್ಕು ಮತ್ತು ಸವಲತ್ತುಗಳು ಆನುವಂಶಿಕವಾಗಿ ಮುಂದುವರೆದುವು. ನೋಬಲ್ ವರ್ಗದ ಜನರು ಸಾಮಾನ್ಯವಾಗಿ ಯುದ್ಧ ಕವಚ ಮತ್ತು

ಶಸ್ತ್ರಗಳೊಡನೆ ಕುದುರೆಗಳ ಸವಾರರಾಗಿ ಸಂಚರಿಸುತ್ತಿದ್ದರು. ಇದರಿಂದ ಸಾಮಾನ್ಯ ಜನರಿಂದ ಅವರು ಭಿನ್ನರಾಗಿ ಕಾಣುತ್ತಿದ್ದರು. ಅವರು ಶ್ರೀಮಂತರಾಗಿದ್ದು, ಸುಖಭೋಗಗಳಿಗೆ ದುಂದುವೆಚ್ಚ ಮಾಡುತ್ತಿದ್ದರು. ಭೂಪ್ರದೇಶದ ಬಹುಭಾಗ ಪಾದ್ರಿಗಳ ಇಲ್ಲವೆ ನೋಬಲ್‌ವರ್ಗದ ಜನರ ಹಿಡಿತದಲ್ಲಿತ್ತು. ಪಾದ್ರಿಗಳಲ್ಲಿ ಉನ್ನತ ವರ್ಗದವರಲ್ಲಿ ಕಾರ್ಡಿನಲ್ಸ್ ಮತ್ತು ಬಿಷಪ್ಪರು ಸೇರಿರುತ್ತಿದ್ದರು. ಅವರು ಉದಾರ ವರ್ಗದವರ ಘನತೆ ಮತ್ತು ಐಶ್ವರ್ಯದ ವೈಭವದಲ್ಲಿ ಪಾಲ್ಗೊಂಡಿದ್ದರು. ಉದಾರವರ್ಗವು ಮತ್ತು ಕ್ಲರ್ಜಿ ವರ್ಗವು ಸಮಾನ ಆಸಕ್ತಿಗಳ ಕಾರಣದಿಂದ ಆರ್ಥಿಕ ವ್ಯವಹಾರಗಳಲ್ಲಿ ಹಾಗೂ ರಾಜಕೀಯ ವಿದ್ಯಮಾನಗಳಲ್ಲಿ ಪರಸ್ಪರ ಒಂದಾಗಿ ಸಹಕರಿಸುತ್ತಿದ್ದವು. ಸಾಮಾನ್ಯ ಪಾದ್ರಿಗಳು ಮಾತ್ರ ಜನಸಾಮಾನ್ಯರಂತೆ ಕಷ್ಟಕಾರ್ಪಣ್ಯಗಳನ್ನು ಅನುಭವಿಸುತ್ತಾ ಬದುಕು ಸಾಗಿಸುತ್ತಿದ್ದರು.

ರೈತರು, ಕುಶಲಕರ್ಮಿಗಳು ಮತ್ತು ಚಾಕರ ವರ್ಗದವರು ಕೆಳವರ್ಗದವರಲ್ಲಿ ಬಹುಸಂಖ್ಯಾತರಾಗಿದ್ದರು. ರೈತನ ಮನೆ ಸಾಧಾರಣವಾಗಿತ್ತು. ಚಿಕ್ಕ ಮತ್ತು ಶಿಥಿಲಗೊಂಡ ಕಟ್ಟಡವಾಗಿದ್ದು ಅದರಲ್ಲಿ ದನಕರುಗಳೂ ಕುಟುಂಬದವರೂ ಒಟ್ಟಿಗೆ ವಾಸಿಸುತ್ತಿದ್ದರು. ಅವರು ಕಡಿಮೆ ದರ್ಜೆಯ ಒರಟು ಉಡುಪುಗಳನ್ನು ಧರಿಸುತ್ತಿದ್ದರು. ಪೌಷ್ಟಿಕ ಆಹಾರದ ಕೊರತೆಯಿಂದ ಪದೇ ಪದೇ ನರಳುತ್ತಿದ್ದರು. ನೋಬಲ್ ವರ್ಗದ ಜನರಿಗಾಗಿ ಪದೇ ಪದೇ ಸಾಕಷ್ಟು ಬಿಟ್ಟಿ ದುಡಿಮೆ ಮಾಡಬೇಕಿತ್ತು. ಒಂದು ವೇಳೆ ಅವರ ದುಡಿಮೆಗೆ ಕೂಲಿ ಸಿಕ್ಕರೂ ಅದು ತೀರಾ ಕಡಿಮೆ ಇರುತ್ತಿತ್ತು. ಕೆಳವರ್ಗದ ಜನರಿಗೆ ವಾಸ್ತವಿಕವಾಗಿ ಪ್ರವಾಸ, ಶಿಕ್ಷಣ, ಮನರಂಜನೆಗಳಿಗೆ ಯಾವುದೇ ಅವಕಾಶಗಳು ಇರುತ್ತಿರಲಿಲ್ಲ. ಕೇವಲ ಸಣ್ಣಪುಟ್ಟ ತಪ್ಪುಗಳಿಗಾಗಿ ಈ ವರ್ಗದವರು ಕಠಿಣ ಶಿಕ್ಷೆಯನ್ನು ಅನುಭವಿಸಬೇಕಾಗುತ್ತಿತ್ತು. ಇಷ್ಟೆಲ್ಲಾ ಅಡೆತಡೆಗಳಿದ್ದರೂ ಕೆಳವರ್ಗದ ಜನರು ತಮ್ಮದೇ ಆದ ಹಬ್ಬ, ಸಮಾರಂಭ, ವಿನೋದ, ಸಂತೋಷಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

## ಕಲೆ ಮತ್ತು ವಾಸ್ತುಶಿಲ್ಪ

ಬೈಜಾಂಟೈನ್, ಬಾರ್ಬೇರಿಯನ್ ಮತ್ತು ಕ್ರಿಶ್ಚಿಯನ್ ಕಲಾತ್ಮಕ ಪಂಥಗಳು ಮತ್ತು ವಿಚಾರಧಾರೆಗಳು ಮಧ್ಯಯುಗದಲ್ಲಿ ಕಾಣಿಸಿಕೊಂಡರೂ ಕಲೆಗಾರರಾಗಲಿ, ವಾಸ್ತುಶಿಲ್ಪಿಗಳಾಗಲಿ ಸ್ವತಂತ್ರರಾಗಿ ಕೆಲಸ ಮಾಡಲು ಅವಕಾಶವಾಗಲಿಲ್ಲ. ಚರ್ಚ್ ಮತ್ತು ನೋಬಲ್‌ವರ್ಗದ ಶ್ರೀಮಂತರ ಆಶ್ರಯವನ್ನು ಅವರು ಅವಲಂಬಿಸಬೇಕಾಗಿತ್ತು. ದೇವರ ಮಹಿಮಾತಿಯುಶಗಳನ್ನು ನಿರೂಪಿಸುವ ಸಾಧನವನ್ನಾಗಿ ಕಲೆಯನ್ನು ಚರ್ಚಿನವರು ಬಳಸಿಕೊಂಡರು.

ಬಹುತೇಕ ಪಟ್ಟಣಗಳಲ್ಲಿ ಕ್ಯಾಥಿಡ್ರಿಲ್ ಚರ್ಚುಗಳಿದ್ದವು. ಕ್ಯಾಥಿಡ್ರಿಲ್ ಚರ್ಚ್ ಕೇವಲ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಸ್ಫೂರ್ತಿಗಷ್ಟೆ ಮೀಸಲಾಗಿರದೆ ನಾಗರೀಕ ಹೆಮ್ಮೆ, ಮತ್ತು ಘನತೆಗೆ ಹೆಸರಾಗಿತ್ತು. ಈ ಅವಧಿಯಲ್ಲಿ ಗಾಥಿಕ್ ಶೈಲಿಯ ವಾಸ್ತುಶಿಲ್ಪ ಪ್ರವರ್ಧಮಾನಕ್ಕೆ ಬಂದಿತು.

ಮಧ್ಯಕಾಲೀನ ಶಿಲ್ಪಿಗಳು ಚರ್ಚುಗಳ ಅಲಂಕರಣಕ್ಕೆ ಹೆಚ್ಚು ಗಮನವಿತ್ತರು. ಲೌಕಿಕ ವಿಷಯಗಳಿಗೆ ಕನಿಷ್ಠ ಗಮನವಿತ್ತರು.

**ವರ್ಣ ಚಿತ್ರಕಲೆ**

ವರ್ಣಚಿತ್ರಕಲೆಗೆ ಸಂಬಂಧಪಟ್ಟಂತೆ ಹೇಳುವುದಾದರೆ ಪ್ರಕೃತಿ ದೃಶ್ಯಗಳು, ಬೇಟೆಯ ನೋಟಗಳು, ಆಟಪಾಠಗಳು ಮೊದಲಾದ ಲೌಕಿಕ ವಸ್ತುಗಳ ನಿರೂಪಣೆಗೆ ಹೆಚ್ಚು ಆಸಕ್ತಿ ವಹಿಸಿದರು. ಸಿಮಾಬ್ಯೂ (CIMABIE1249–1302)ಸಿಯಾನದ ಡಚಿಯೊ (Duccio 1255–1319) ಫ್ಲಾರೆನ್ಸಿನ ಗಿಯೋಟೊ (GIOTTO 1266–1337) ಆ ಕಾಲದ ಪ್ರಸಿದ್ಧ ವರ್ಣಚಿತ್ರಕಾರರಾಗಿದ್ದರು. ಈ ಕಾಲದಲ್ಲಿ ಕಟ್ಟಡಗಳನ್ನು ಮತ್ತು ಚರ್ಚುಗಳನ್ನು ಬಣ್ಣದ ಗಾಜಿನ ಚಿತ್ರಗಳಿಂದ ಅಲಂಕರಿಸಲು ಮೊದಲಾಯಿತು. ಬಣ್ಣದ ಗಾಜುಗಳಲ್ಲಿ ವಿವಿಧ ನಮೂನೆಗಳನ್ನೂ, ಸಸ್ಯವರ್ಗದ ವಿನ್ಯಾಸಗಳನ್ನೂ ನಿರ್ಮಿಸಿದರು. ನೀಲಿ, ಕಪ್ಪು, ಕೆಂಪು, ರಕ್ತನೀಲ ಮೊದಲಾದ ದಟ್ಟವರ್ಣಗಳಿಂದ ಬೈಬಲ್ ಪ್ರಸಂಗಗಳನ್ನು ರಚಿಸಲಾಯಿತು.

**ಸಂಗೀತ**

ಆಧುನಿಕ ಪಾಶ್ಚಾತ್ಯ ಸಂಗೀತದ ಮೂಲ ನೆಲೆ ಮಧ್ಯಯುಗದಲ್ಲಿ ಕಂಡುಬರುತ್ತದೆ. ಚರ್ಚಿನ ಕಾರ್ಯಕ್ರಮಗಳಲ್ಲಿ ಸಂಗೀತದ ಬಳಕೆ ಅಧಿಕವಾಯಿತು. ಅರೆಜಾವಿನ ಗಿಡೊ ಎಂಬ ಕ್ರೈಸ್ತ ಸನ್ಯಾಸಿ 10ನೇ ಶತಮಾನದಲ್ಲಿ ಪ್ರಸ್ತಾರವನ್ನು ಹಾಕುವ ಪದ್ಧತಿ ಪ್ರಾರಂಭಿಸಿದನು. ಇದರಿಂದ ಸರಳ ಗಾಯನದಿಂದ ವೃಂದಗಾಯನ ಬಳಕೆಗೆ ಬರಲು ಅನುಕೂಲವಾಯಿತು. ಹೊಸ ಸಂಗೀತ ವಾದ್ಯಗಳ ಆವಿಷ್ಕಾರವಾಯಿತು. 13ನೆಯ ಶತಮಾನದ ವೇಳೆಗೆ ಕೀಲಿಮಣೆ ಕೀಬೋರ್ಡು ಮತ್ತು ನಿಲುಗಡೆಗಳಿರುವ ವಾದ್ಯಗಳನ್ನು ಚರ್ಚುಗಳಲ್ಲಿ ವಾದ್ಯವಾಗಿ ಬಳಸಲು ಪ್ರಾರಂಭವಾಯಿತು.

## ಅಭ್ಯಾಸ

**I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಅಥವಾ ಎರಡು ವಾಕ್ಯಗಳಲ್ಲಿ ಉತ್ತರಿಸಿ.**

1. ಊಳಿಗಮಾನ್ಯ ಪದ್ಧತಿ ಎಂದರೇನು ?
2. ಇವುಗಳನ್ನು ವಿವರಿಸಿ: ಊಳಿಗಮಾನ್ಯ ಪದ್ಧತಿಯ ಭಾಗಗಳಾದ, ಲಾರ್ಡ್ ವರ್ಗದವರು, ಹಿಡುವಳಿದಾರರು (ವ್ಯಾಸಲ್) ಉಂಬಳಿ (ಫಿಫ್), ಜೀತಗಾರರು.
3. 11ನೇ ಶತಮಾನದಲ್ಲಿ ಯುರೋಪಿನಲ್ಲಿ ಊಳಿಗಮಾನ್ಯ ಪದ್ಧತಿ ಅಸ್ತಿತ್ವದಲ್ಲಿದ್ದ ಮೂರು ರಾಜ್ಯಗಳನ್ನು ಹೆಸರಿಸಿ.
4. ಊಳಿಗಮಾನ್ಯ ಪದ್ಧತಿಯ ಅವನತಿಗೆ ಕಾರಣಗಳಾವುವು ?
5. ಯುರೋಪಿನಲ್ಲಿ ಮಧ್ಯಕಾಲೀನ ಯುಗದಲ್ಲಿ ಅಭಿವೃದ್ಧಿಗೆ ಬಂದ ಕಲಾಮಾಧ್ಯಮಗಳನ್ನು ವಿವರಿಸಿ.
6. ಮಧ್ಯಯುಗದಲ್ಲಿ ಚರ್ಚಿನ ಪಾತ್ರವೇನು ?

ಯೂರೋಪಿನಲ್ಲಿ ಮಧ್ಯಯುಗದ ಅವಧಿಯಲ್ಲಿ ಅಸ್ತಿತ್ವದಲ್ಲಿದ್ದ ಮುಖ್ಯ ವಿಶ್ವವಿದ್ಯಾನಿಲಯಗಳನ್ನು ತಿಳಿಸಿ.

ಮಧ್ಯಕಾಲೀನ ಯುಗದಲ್ಲಿ ಹೊಸದಾಗಿ ರೂಪುಗೊಂಡ ವರ್ಗಗಳನ್ನು ಹೆಸರಿಸಿ.

**ಕೆಳಕಂಡ ಪ್ರಶ್ನೆಗಳನ್ನು ಉತ್ತರಿಸಿ.**

ಊಳಿಗಮಾನ್ಯ ಪದ್ಧತಿಯ ಒಡೆಯರಿಗಿದ್ದ ಸವಲತ್ತುಗಳಾವುವು ?

ಊಳಿಗಮಾನ್ಯ ಪದ್ಧತಿಯ ಕಾಲದಲ್ಲಿ ರೈತವರ್ಗದ ಸ್ಥಿತಿಗತಿಗಳು ಹೇಗಿದ್ದವು ?

ಮಧ್ಯಕಾಲೀನ ಯುಗದಲ್ಲಿ ಕಂಡುಬರುವ ಸಾಮಾಜಿಕ ಜೀವನದ ರೀತಿನೀತಿಗಳನ್ನು ವಿವರಿಸಿ.

ವಾಣಿಜ್ಯಾಭಿವೃದ್ಧಿಗೆ ನೆರವಾದ ಅಂಶಗಳಾವುವು ?

ಮಧ್ಯಕಾಲೀನ ಯುಗದಲ್ಲಿ ಕಲೆ, ವಾಸ್ತುಶಿಲ್ಪ, ಚಿತ್ರಕಲೆ ಕ್ಷೇತ್ರಗಳಲ್ಲಿ ಆದ ಸಾಧನೆಗಳನ್ನು ವಿವರಿಸಿ.

**ಕೆಳಗೆ ಕೊಟ್ಟಿರುವ ಎ ಮತ್ತು ಬಿ ಪಟ್ಟಿಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ರೋಮನ್ ಸಾಮ್ರಾಜ್ಯ | ಅ) ರೈತವರ್ಗ |
| 2. ಬಿಟ್ಟಿ ದುಡಿಮೆ | ಆ) ಇಂಗ್ಲೆಂಡು |
| 3. ಕೆಪಿಯನ್ ದೊರೆಗಳು | ಇ) ವ್ಯಾಪಾರ ಕೇಂದ್ರ |
| 4. ವಿಜೇತ ವಿಲಿಯಂ | ಈ) ಧಾರ್ಮಿಕ ಯುದ್ಧ (ಕ್ರುಸೇಡ್) |
| 5. ಕಾನ್‌ಸ್ಟಾಂಟಿನೋಪಲ್ | ಉ) ಒಟ್ಟೊ ಮಹಾಶಯ |
| 6. ಪವಿತ್ರ ಭೂಮಿ | ಊ) ಫ್ರಾನ್ಸ್ ರಾಜ್ಯದಲ್ಲಿ ಅಸ್ತಿತ್ವದಲ್ಲಿತ್ತು |
| | ಋ) ಜರ್ಮನಿ |

**ಖಾಲಿ ಜಾಗ ಭರ್ತಿ ಮಾಡಿ.**

ವಿವಿಧ ವಿನ್ಯಾಸ ಮತ್ತು......ಗಳನ್ನು ಬಣ್ಣದ ಗಾಜುಗಳಲ್ಲಿ ರಚಿಸಿದರು.

ಸಂಗೀತಕ್ಕೆ ಸ್ವರಪ್ರಸ್ತಾರ.... ಎಂಬುವನಿಂದ ಪರಿಚಯಿಸಲ್ಪಟ್ಟಿತು.

ಮಧ್ಯಕಾಲೀನ ಯುಗದ ಶಿಲ್ಪಿಗಳು......ಗೆ ಹೆಚ್ಚು ಗಮನವಿತ್ತರು.

ಮಧ್ಯಕಾಲದ ಅವಧಿಯಲ್ಲಿ...... ಶೈಲಿಯ ವಾಸ್ತುಶಿಲ್ಪ ಪ್ರವರ್ಧಮಾನಕ್ಕೆ ಬಂದಿತು.

# 3. ಯೂರೋಪಿನಲ್ಲಿ ಆಧುನಿಕ ಯುಗದ ಪ್ರಾರಂಭ

## ಜ್ಞಾನಪುನರುಜ್ಜೀವನ

14, 15, 16ನೇ ಶತಮಾನಗಳ ಯೂರೋಪಿನ ಜ್ಞಾನ, ಕಲೆ ಮತ್ತು ಸಾಹಿತ್ಯಗಳ ಪುನರುತ್ಥಾನಕ್ಕೆ "ಜ್ಞಾನಪುನರುಜ್ಜೀವನ ಯುಗ" ಎಂಬ ಪದವನ್ನು ಬಳಸುತ್ತಾರೆ. ಹೊಸಹುಟ್ಟು ಅಥವಾ 'ಉಳಿವು' ಎನ್ನುವುದು ಇದರ ವಾಚ್ಯಾರ್ಥ. ಮೂಲತಃ ಇದು ಕಾನ್‌ಸ್ಟಾಂಟಿನೋಪಲಿನ ಅವನತಿ, ಧಾರ್ಮಿಕ ಯುದ್ಧ ಮತ್ತು ಭೌಗೋಳಿಕ ಅನ್ವೇಷಣೆಗಳಿಂದ ಉತ್ತೇಜನಗೊಂಡ ಬೌದ್ಧಿಕ ಪುನರುತ್ಥಾನವಾಗಿದೆ. 1453ರಲ್ಲಿ ವ್ಯಾಪಾರ ಮತ್ತು ಜ್ಞಾನಾರ್ಜನೆಗಳಿಗೆ ಕೇಂದ್ರ ಸ್ಥಾನವಾಗಿದ್ದ ಕಾನ್‌ಸ್ಟಾಂಟಿನೋಪಲನ್ನು ತುರ್ಕಿಯರು ವಶಪಡಿಸಿಕೊಂಡರು. ಕಾನ್‌ಸ್ಟಾಂಟಿನೋಪಲಿನ ಗ್ರೀಕ್ ವಿದ್ವಾಂಸರು ತಮ್ಮೊಂದಿಗೆ ಪ್ರಾಚೀನ ಗ್ರೀಕ್‌ನ ಉತ್ಕೃಷ್ಟ ಗ್ರಂಥಗಳನ್ನು ತೆಗೆದುಕೊಂಡು ಇಟಲಿಗೆ ಪಲಾಯನ ಮಾಡಿದರು. ಇಟಾಲಿಯನ್ನರು ಗ್ರೀಕ್‌ನ ಶ್ರೇಷ್ಠ ಕೃತಿಗಳಲ್ಲಿ ಆಸಕ್ತಿ ತಳೆದು, ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳನ್ನು ಕಲಿತರು. ಈ ಕೃತಿಗಳಲ್ಲಿದ್ದ ವಿಚಾರಧಾರೆ ಜ್ಞಾನ ಪ್ರಸಾರಕಾಲದಲ್ಲಿ ಸಹಾಯಕವಾಯಿತು. ಮೊದಲಿಗೆ ಇಟಲಿಯ ಫ್ಲಾರೆನ್ಸಿನಲ್ಲಿ ಪ್ರಾರಂಭವಾದ ಜ್ಞಾನ ಪುನರುಜ್ಜೀವನ ಕಾರ್ಯವು ಅನಂತರ ರೋಮ್, ವೆನಿಸ್, ಜಿನೀವ, ಮಿಲಾನ್ ನಗರಗಳಿಗೆ ಹರಡಿತು. ಮಾನವೀಯತೆ ಹಾಗೂ ವೈಜ್ಞಾನಿಕ ಮನೋಭಾವದಿಂದ ಕೂಡಿದ ನೂತನ ತಂತ್ರ ಕೌಶಲದ ಕಲೆ, ವಾಸ್ತುಶಿಲ್ಪ ಮತ್ತು ಹೊಸ ರೀತಿಯ ಲೌಕಿಕ ಸಾಹಿತ್ಯಗಳ ಬೆಳವಣಿಗೆಯೇ ಜ್ಞಾನಪುನರುಜ್ಜೀವನದ ಅಂತಃಸತ್ವವಾಯಿತು.

**ಶಿಕ್ಷಣ ಮತ್ತು ಪಾಂಡಿತ್ಯ**

ಫ್ರಾನ್ಸಿಸ್ಕೊ ಪೆಟ್ರಾರ್ಕ್ ಜ್ಞಾನಪುನರುಜ್ಜೀವನ ಕಾಲದ ಮಾನವತಾವಾದ ಸ್ಥಾಪಕನೆನಿಸಿದ್ದಾನೆ. 1304ರಲ್ಲಿ ಇಟಲಿಯಲ್ಲಿ ಜನಿಸಿದ ಇವನು ತಂದೆಯ ಒತ್ತಾಸೆಯಿಂದ ಸಿಸೆರೋನ ಕೃತಿಗಳನ್ನು ಅಧ್ಯಯನ ಮಾಡಿದನು. ಸಿಸೆರೋನ ತತ್ವ ಮತ್ತು ಶೈಲಿಯನ್ನು ಬಹುವಾಗಿ ಮೆಚ್ಚಿಕೊಂಡ ಇವನು ಎಲ್ಲ ಶ್ರೇಷ್ಠ ಕೃತಿಗಳನ್ನು ಅಧ್ಯಯನ ಮಾಡಲು ತೀವ್ರ ಆಸಕ್ತಿ ತಳೆದನು. ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಸುವ್ಯವಸ್ಥಿತಗೊಳಿಸುವ ಕಾರ್ಯವನ್ನು ಕೈಗೊಂಡವರಲ್ಲಿ ಮೊದಲಿಗನೆನಿಸಿದನು. ಕ್ರೈಸ್ತ ಸನ್ಯಾಸಿಗಳ ಮಠ ಮತ್ತು ಚರ್ಚ್‌ಗಳಲ್ಲಿನ ಗ್ರಂಥ ಭಂಡಾರಗಳಲ್ಲಿ ಹಸ್ತಪ್ರತಿಗಳನ್ನು ಹುಡುಕಿ ತರಲು ಇತರರನ್ನೂ ಹುರಿದುಂಬಿಸಿದನು. ತನ್ನ ಮನೆಯಲ್ಲಿ ಪ್ರತಿಕಾರರನ್ನು ನೇಮಿಸಿಕೊಳ್ಳುವುದರ ಮೂಲಕ, ಅತಿ ಶ್ರೇಷ್ಠ ಪ್ರಾಚೀನ ಗ್ರೀಕ್ ಮತ್ತು ಲ್ಯಾಟಿನ್ ಗ್ರಂಥಗಳ ದಾಖಲೆ ಮತ್ತು ಸಂಗ್ರಹಣಾ ಕಾರ್ಯವನ್ನು ಆರಂಭಿಸಿದನು. ಮೊದಲ ಮಾದರಿಯಾಗಿದ್ದ ಇವನ ಗ್ರಂಥ ಭಂಡಾರವು ಪಂಡಿತರಿಗೆ ಮೇಲ್ಪಂಕ್ತಿ ಎನಿಸಿತು. ಕ್ರಮೇಣ ಶ್ರೀಮಂತ ಇಟಾಲಿಯನ್ನರ ಅನುದಾನದ ನೆರವಿನಿಂದ ಅನೇಕರು ಈ ರೀತಿಯ ಸಂಗ್ರಹಣಾ ಕಾರ್ಯವನ್ನು ಮಾಡಲಾರಂಭಿಸಿದರು.

ಹೀಗೆ ಬೆಳೆದು ಬಂದ ಬೃಹತ್ ಗ್ರಂಥ ಭಂಡಾರಗಳೆಂದರೆ ಫ್ಲಾರೆನ್ಸ್‌ನ ಲಾರೆನ್ಷಿಯನ್, ವೆನಿಸ್‌ನ ಸೇಂಟ್‌ಮಾರ್ಕ್ ಮತ್ತು ರೋಮಿನ ವ್ಯಾಟಿಕನ್.

ಗ್ರೀಕ್ ಭಾಷೆಯನ್ನು ಕಲಿತ ಮೊದಲಿಗರಲ್ಲಿ ಒಬ್ಬನಾದ ಗಿಯೊವೆನಿ ಬೊಕ್ಯಾಷಿಯೊ, ಪೆಟ್ರಾರ್ಕ್‌ನ ಅನುಯಾಯಿ. ಇಲಿಯಡ್ ಮತ್ತು ಒಡೆಸ್ಸಿ ಕಾವ್ಯಗಳನ್ನು ಲ್ಯಾಟಿನ್ನಿಗೆ ಭಾಷಾಂತರಿಸಿದ ಇವನು, ಪ್ರಾಚೀನ ಹಸ್ತಪ್ರತಿಗಳಿಗಾಗಿ ಶೋಧನೆ ನಡೆಸಿದನು. ಹಾಗೆ ಹುಡುಕಿ ತೆಗೆದ ಬರವಣಿಗೆಗಳಲ್ಲಿ ಪ್ರಾಚೀನ ಇತಿಹಾಸಜ್ಞನಾದ 'ಟಾಸಿಟಸ್'ನ ಬರವಣಿಗೆಯೂ ಒಂದು. ಬೊಕ್ಯಾಷಿಯೊನ ಬರವಣಿಗೆಗಳಲ್ಲಿ ಕ್ರೈಸ್ತಪೂರ್ವದ ಭಾವನೆಗಳನ್ನು ಕಾಣಬಹುದಾಗಿದೆ. ಅವನ ಕಾದಂಬರಿ 'ಲಾಫ್ಲಾಮೆತ್ತಾ' ಪಶ್ಚಿಮ ದೇಶಗಳಲ್ಲಿ ಮೊದಲ ಮನೋವೈಜ್ಞಾನಿಕ ಕಾದಂಬರಿ ಎನಿಸಿದೆ. ಬೊಕ್ಯಾಷಿಯೊನ ಮತ್ತೊಂದು ಶ್ರೇಷ್ಠ ಕೃತಿಯಾದ 'ಡೆಕಾಮೆರಾನ್' ಕ್ರೈಸ್ತ ಧರ್ಮದ ಬಗ್ಗೆ ಟೀಕೆ ಮಾಡಿದೆ.

ರೋಮ್‌ನ ಮಾನವತಾವಾದಿಗಳಲ್ಲಿ ಒಬ್ಬನೆನಿಸಿದ ಲೊರೆನ್‌ಸೊಲವೆ ಪ್ರಾಚೀನ ಗ್ರಂಥಗಳನ್ನು ಕ್ರಮಬದ್ಧವಾಗಿ ಅಭ್ಯಸಿಸಿ ಪ್ರಾಚೀನ ಚರ್ಚಿನ ಐತಿಹಾಸಿಕ ಸಂಗತಿಗಳ ಬಗ್ಗೆ ಹೊಸ ವಿವರಣೆ ನೀಡಿದ್ದಾನೆ.

ಯುರೋಪಿನ ಲೌಕಿಕ ವಿದ್ವಾಂಸರ ಮೊದಲ ತಂಡದವರು ಇಟಲಿಯ ಮಾನವತಾವಾದಿಗಳಾಗಿದ್ದರು. ಅವರಲ್ಲಿ ಬಹುಮಂದಿ ಮಧ್ಯಮ ಅಥವಾ ಶ್ರೀಮಂತ ಕುಟುಂಬಗಳಿಂದ ಬಂದವರಾಗಿದ್ದು, ಪಾದ್ರಿಗಳೊಂದಿಗೆ ಯಾವ ರೀತಿಯ ಸಂಪರ್ಕವನ್ನೂ ಇಟ್ಟುಕೊಂಡಿರಲಿಲ್ಲ.

## ಕಲೆ, ಚಿತ್ರಕಲೆ ಮತ್ತು ವಾಸ್ತುಶಿಲ್ಪ

ಕಲೆ, ಚಿತ್ರಕಲೆ, ಶಿಲ್ಪ, ವಾಸ್ತುಶಿಲ್ಪ, ಸಂಗೀತ, ನಾಟಕ ಮತ್ತಿತರ ಕ್ಷೇತ್ರಗಳಲ್ಲಿ ಜ್ಞಾನಪುನರುಜ್ಜೀವನದ ಪ್ರಭಾವವನ್ನು ಕಾಣಬಹುದು. ಮೈಕೆಲೆಂಜಲೋ (1475–1564), ರಾಫೇಲ್ (1483–1520) ಮತ್ತು ಲಿಯನಾರ್ಡೊ ದ ವಿಂಚಿ (1542–1619) ಜ್ಞಾನ-ಪುನರುಜ್ಜೀವನ ಕಾಲದ ಪ್ರಖ್ಯಾತ ಚಿತ್ರಕಾರರು. ರಾಫೇಲನು ತನ್ನ ಪ್ರಸಿದ್ಧವಾದ "ಸಿಸ್ಟ್ಯೈನ್ ಮೆಡೋನ" ವರ್ಣಚಿತ್ರದ ಮೂಲಕ ಶಾಶ್ವತವಾದ ಹೆಸರನ್ನು ಮಾಡಿದರೆ ಮೈಕೆಲೆಂಜಲೋ ಪ್ರತಿಭಾವಂತ ಚಿತ್ರಕಾರನಾಗಿ, ಅದಕ್ಕೂ ಮಿಗಿಲಾಗಿ ಅತ್ಯುನ್ನತ ಶಿಲ್ಪಿಯಾಗಿ ಎಲ್ಲರನ್ನೂ ಮೀರಿಸಿದ್ದಾನೆ. ಮದರ್ ಮೇರಿ ಮತ್ತು ದಿವಂಗತ ಕ್ರಿಸ್ತನನ್ನು ಚಿತ್ರಿಸಿರುವ 'ಪಿಯೆಟ' (Pieta) ಅವನ ಉತ್ಕೃಷ್ಟ ಕಲಾಕೃತಿಯಾಗಿದೆ. ಲಿಯನಾರ್ಡೊ ದ ವಿಂಚಿ ಬಹುಮುಖ ಪ್ರತಿಭೆಯುಳ್ಳ ವ್ಯಕ್ತಿ. ಅವನೊಬ್ಬ ಕಲಾವಿದ, ಕವಿ, ಸಂಗೀತಗಾರ ಮತ್ತು ಯಂತ್ರಶಿಲ್ಪಿಯಾಗಿದ್ದನು. ಆತನ 'ಮೋನಾಲೀಸಾ' ಮತ್ತು 'ಕೊನೆಯ ಭೋಜನ' ಚಿತ್ರಗಳು ಜಗತ್ ಪ್ರಸಿದ್ಧವಾಗಿವೆ.

## ಸಾಹಿತ್ಯ

ಜ್ಞಾನಪುನರುಜ್ಜೀವನವು ಯುರೋಪಿನ ಪ್ರಾದೇಶಿಕ ಭಾಷೆಗಳಾದ ಇಟಾಲಿಯನ್, ಸ್ಪ್ಯಾನಿಷ್, ಫ್ರಾನ್ಸ್, ಜರ್ಮನ್ ಭಾಷೆಗಳಲ್ಲಿ ಹೊಸ ಜೀವನವನ್ನು ಮೂಡಿಸಿತು. ಜ್ಞಾನಪುನರುಜ್ಜೀವನ ಕಾಲದವರೆಗೂ ಶಾಸ್ತ್ರೀಯ ಭಾಷೆಯಾಗಿದ್ದ ಗ್ರೀಕ್

ಮತ್ತು ಲ್ಯಾಟಿನ್‌ಗಳು ಪಾಂಡಿತ್ಯದ ಅಭಿವ್ಯಕ್ತಿಗೆ ಸೂಕ್ತ ಮಾಧ್ಯಮವಾಗಿದ್ದುವು. ಪದ್ಯ ನಾಟಕ ಹಾಗೂ ಕಥೆ, ಕಾದಂಬರಿಗಳು ಪ್ರಕಟವಾಗಿ ಅವು ಲ್ಯಾಟಿನ್ ಭಾಷೆಯ ಸ್ಥಾನವನ್ನು ಕಸಿದುಕೊಂಡವು. ಈ ಯೂರೋಪಿಯನ್ ಭಾಷೆಗಳ ಬೆಳವಣಿಗೆಯು ಸಹಜವಾಗಿ ಯೂರೋಪಿನಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಿತು. ಇಟಲಿ ಭಾಷೆಯಲ್ಲಿ ರಚಿತವಾದ ಡಾಂಟೆಯ 'ಡಿವೈನ್ ಕಾಮಿಡಿ' ಎಂಬ ಗ್ರಂಥವು ಜ್ಞಾನಪುನರುಜ್ಜೀವನ ಕಾಲದ ಅತ್ಯಂತ ಶ್ರೇಷ್ಠಬರಹಗಳಲ್ಲಿ ಒಂದಾಗಿದೆ.

ಎರಾಸ್‌ಮಸ್ ಎಂಬ ಪ್ರಸಿದ್ಧ ಡಚ್ ಬರಹಗಾರನು ಆ ಕಾಲದಲ್ಲಿ ಕ್ರಿಶ್ಚಿಯನ್ ಚರ್ಚುಗಳಲ್ಲಿ ವ್ಯಾಪಕವಾಗಿದ್ದ ಭ್ರಷ್ಟಾಚಾರವನ್ನು ಕುರಿತು ಟೀಕಿಸುತ್ತಿದ್ದನು. ಇಂಗ್ಲಿಷ್ ಭಾಷೆಯಲ್ಲಿ ರಚಿತವಾದ 'ಉಟೋಪಿಯಾ' ಥಾಮಸ್ ಮೋರ್ ಎಂಬ ಲೇಖಕನದು. ಡಾನ್ ಕ್ವಿಕ್ಸೋಟ್‌ನ ಗ್ರಂಥಕರ್ತೃವಾದ ಸ್ಪ್ಯಾನಿಷ್ ಭಾಷೆಯ ಸರ್‌ವಾನ್‌ಟಿಸ್ ಮೊದಲಾದವರು ಆಗಿನ ಪ್ರಾರಂಭದ ಬರಹಗಾರರಲ್ಲಿ ಪ್ರಸಿದ್ಧರಾಗಿದ್ದಾರೆ. ಇಂಗ್ಲಿಷ್ ಪ್ರಬಂಧಕಾರನಾದ ಫ್ರಾನ್ಸಿಸ್ ಬೇಕನ್ ಮತ್ತು 'ಪ್ರಿನ್ಸ್'ನ ಲೇಖಕನಾದ ಇಟಲಿಯ ಮ್ಯಾಕಿಯಾವಿಲಿ – ಎಂಬ ಲೇಖಕರಿಬ್ಬರೂ ತಮ್ಮ ಕಾಲದ ಯೂರೋಪಿಯನ್ನರ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದರು. ಪ್ರಸಿದ್ಧ ರಾಜಕೀಯ ದಾರ್ಶನಿಕನಾದ ಮ್ಯಾಕಿಯಾವಿಲಿ ರಾಜ್ಯಾಡಳಿತವನ್ನು ನಡೆಸುವ ವಿಚಾರದಲ್ಲಿ ಹೊಸ ಸಿದ್ಧಾಂತಗಳನ್ನು ಮಂಡಿಸಿದನು.

ಇಂಗ್ಲಿಷಿನ ಕವಿಯೂ ನಾಟಕಕಾರನೂ ಆದ ಷೇಕ್ಸ್‌ಪಿಯರ್, ಜ್ಞಾನಪುನರುಜ್ಜೀವನ ಯುಗದ ಸಾಹಿತಿಗಳಲ್ಲಿ ಮಹಾನ್ ವ್ಯಕ್ತಿಯಾಗಿದ್ದಾನೆ. ಈ ಕಾಲದಲ್ಲಿ ಫ್ರಾನ್ಸ್‌ನ 'ರ್‍ಯಾಬೆಲಿ' **(Rabelias)** ಜ್ಯೋತಿಶ್ಶಾಸ್ತ್ರ ಮತ್ತು ಮೂಢನಂಬಿಕೆಗಳ ವಿರುದ್ಧ ತನ್ನ ಲೇಖನಿಯನ್ನು ಪ್ರಬಲವಾದ ಆಯುಧವಾಗಿ ಪ್ರಯೋಗಿಸಿದನು.

### ವೈಜ್ಞಾನಿಕ ಅನ್ವೇಷಣೆ ಮತ್ತು ಸಂಶೋಧನೆ

ಮಾನವ, ವೈಚಾರಿಕತೆಯನ್ನು ರೂಢಿಸಿಕೊಂಡಿದ್ದರಿಂದ, ಪರಿವೀಕ್ಷಣೆ ಮತ್ತು ಪ್ರಯೋಗಗಳ ಮೂಲಕ ವೈಜ್ಞಾನಿಕ ಮನೋಭಾವವನ್ನು ಬೆಳಸಿಕೊಳ್ಳಲು ಸಾಧ್ಯವಾಯಿತು. ಕ್ರಿ.ಶ. 16ನೇ ಶತಮಾನದಲ್ಲಿ ನಿಕೊಲಸ್ ಕೊಪರ್‌ನಿಕಸನು ಭೂಮಿಯು ತನ್ನ ಕಕ್ಷೆಯ ಮೇಲೆ ಸುತ್ತುತ್ತಾ ಸೂರ್ಯನ ಸುತ್ತ ತಿರುಗುತ್ತದೆ ಎಂದು ಪ್ರತಿಪಾದಿಸಿದನು. ಈ ಸಿದ್ಧಾಂತವು ಹಿಂದಿನ ಸಿದ್ಧಾಂತಕ್ಕಿಂತ ಭಿನ್ನವಾಗಿತ್ತು. 1543ರಲ್ಲಿ ಕೊಪರ್‌ನಿಕಸನ 'ಆಕಾಶಗೋಳಗಳ ಪರಿಭ್ರಮಣ' ಎಂಬ ಪ್ರಮುಖ ಗ್ರಂಥ ಪ್ರಕಟವಾಯಿತು. ಇದರ ಫಲವಾಗಿ ಅವನು ಚರ್ಚಿನಿಂದ ನಿಂದನೆಗೆ ಒಳಗಾದನು. ಇದು ಬೈಬಲ್ಲಿಗೆ ವಿರುದ್ಧವಾದ ಹೇಳಿಕೆ ಎಂಬ ಕಾರಣದಿಂದ ಸುಧಾರಣಾವಾದಿಗಳಾದ ಕ್ಯಾಲ್‌ವಿನ್ ಮತ್ತು ಲೂಥರ್ ಅವರುಗಳೂ ಸಹ ಇದನ್ನು ವಿರೋಧಿಸಿದರು.

ಧಾರ್ಮಿಕರ ವಿರೋಧವಲ್ಲದೆ ಕೊಪರ್‌ನಿಕಸನಿಗೆ ಇತರ ತೊಂದರೆಗಳಿದ್ದವು. ಇವನು ತನ್ನ ಸಿದ್ಧಾಂತವನ್ನು ವೀಕ್ಷಣೆಯ ಮೂಲಕ ಸಾಧಾರವಾಗಿ ಮಂಡಿಸಲು ಸಾಧ್ಯವಾಗಲಿಲ್ಲ. ಏಕೆಂದರೆ ಆ ಕಾಲದಲ್ಲಿ ತನ್ನ ಸಿದ್ಧಾಂತವನ್ನು ಆಧಾರಸಹಿತ

ನಿರೂಪಿಸಲು ಸಾಧ್ಯವಾಗುವ ದೂರದರ್ಶಕ ಯಂತ್ರವನ್ನು ಕೊಪರ್‌ನಿಕಸ್ ಹೊಂದಿರಲಿಲ್ಲ. ಅದಲ್ಲದೆ, ಟಾಲೆಮಿಯ ಕಾಲದಿಂದಲೂ ಬಂದ ವೀಕ್ಷಣ ಮಾಹಿತಿಯ ಆಧಾರದ ಮೇಲೆ ತನ್ನ ಸಿದ್ಧಾಂತವನ್ನು ಸಿದ್ಧಪಡಿಸಿದ್ದನು. ಇದಲ್ಲದೆ ಅವನು ತನ್ನ ಸಿದ್ಧಾಂತವನ್ನು ನಿರೂಪಿಸಲು ಅಂದು ಅಸ್ತಿತ್ವದಲ್ಲಿದ್ದ ಭೌತ ಶಾಸ್ತ್ರಕ್ಕಿಂತಲೂ ಗಣಿತ ಶಾಸ್ತ್ರವನ್ನು ಅವಲಂಬಿಸಿದ್ದನು.

ಜರ್ಮನಿಯ ಪ್ರಸಿದ್ಧ ಗಣಿತ ಶಾಸ್ತ್ರಜ್ಞನಾದ ಜೋಹಾನ್ಸ್ ಕೆಪ್ಲರನು (1571–1630) ಗ್ರಹಗಳು ಸೂರ್ಯನ ಸುತ್ತ ತಮ್ಮ ಕಕ್ಷೆಯಲ್ಲೇ ವೃತ್ತಾಕಾರಕ್ಕೆ ಬದಲು ದೀರ್ಘವೃತ್ತಾಕಾರವಾಗಿ ಸುತ್ತುತ್ತವೆ. ಎಂದು ಸಾಬೀತುಪಡಿಸಿದನು. ಅವನು ಕಂಡುಹಿಡಿದ ನಿಯಮ 'ಕೆಪ್ಲರನ ಪ್ರಥಮ ನಿಯಮ' (1609) ಎಂದು ಹೆಸರು ಪಡೆಯಿತು.

ಜ್ಯೋತಿರ್ವಿಜ್ಞಾನಿ ಮತ್ತು ಭೌತಶಾಸ್ತ್ರಜ್ಞನಾದ ಗೆಲಿಲಿಯೋ (1564–1642) ಪ್ರಯೋಗಗಳನ್ನು ನಡೆಸುವುದಕ್ಕಿಂತಲೂ ಮಿಗಿಲಾಗಿ ವೀಕ್ಷಣಾಕಾರ್ಯದಲ್ಲಿ ನಿಷ್ಣಾತನಾಗಿದ್ದನು. ನಕ್ಷತ್ರ ವೀಕ್ಷಣೆಗಾಗಿ ದೂರದರ್ಶಕಯಂತ್ರವನ್ನು ರಚಿಸಿದ ಪ್ರಥಮ ವ್ಯಕ್ತಿಯಾಗಿದ್ದನು. ಹಿಂದಿನವರು ತಿಳಿದಂತೆ ಗ್ರಹಗಳು ಬೆಳಕು ಚೆಲ್ಲುವ ವೃತ್ತಾಕಾರದ ವಸ್ತುವಾಗಿಲ್ಲ. ಭೂಮಿ ಮತ್ತು ಚಂದ್ರನಂತೆ ಆಕಾರವನ್ನು ಹೊಂದಿದ ಕಾಯಗಳಾಗಿವೆ. ಜ್ಯೋತಿರ್ಗ್ರಹಕ್ಕೆ ಉಪಗ್ರಹಗಳಿವೆ. ಆಕಾಶದ ಕಕ್ಷೆಗೆ ಒಂದಕ್ಕಿಂತ ಹೆಚ್ಚು ಕೇಂದ್ರಗಳು ಎಂಬುದು ವಾದವಾಗಿತ್ತು. ಈ ಮೊದಲು ತಿಳಿಯದಿದ್ದ ನಕ್ಷತ್ರಗಳ ಅಸ್ತಿತ್ವವನ್ನು ಗೆಲಿಲಿಯೊ ದೂರದರ್ಶಕದ ಮೂಲಕ ಕಂಡುಹಿಡಿದನು. ಗ್ರೀಕ್ ಮತ್ತು ಕ್ರಿಶ್ಚಿಯನ್ ಸಿದ್ಧಾಂತವಾದ 'ಭೂಮಿಯನ್ನು ಕೇಂದ್ರವಾಗುಳ್ಳ ಪುಟ್ಟ ವಿಶ್ವವೊಂದಿದೆ' ಎಂಬ ವಿಚಾರವನ್ನು ನಂಬಿದ್ದ ಪ್ರತಿಯೊಬ್ಬರನ್ನೂ. ಗೆಲಿಲಿಯೋನ ಸಿದ್ಧಾಂತಗಳು ದಿಗ್ಭ್ರಾಂತಗೊಳಿಸಿದುವು.

ಐಸಾಕ್ ನ್ಯೂಟನ್ನನು (1642–1727) 'ಗುರುತ್ವಾಕರ್ಷಣ ನಿಯಮ'ವನ್ನು ಮಂಡಿಸಿ ಆಕಾಶದಲ್ಲಿ ಗ್ರಹಗಳ ಚಲನವಲನಗಳು ಈ ಗುರುತ್ವಾಕರ್ಷಣೆಯಿಂದ ನಿಯಂತ್ರಿಸಲ್ಪಡುವುದೆಂದು ಸಮರ್ಥಿಸಿದನು. 1682ರಲ್ಲಿ ಹ್ಯಾಲಿಯು ಈಗ ಅವನ ಹೆಸರನ್ನು ಹೊಂದಿರುವ ಧೂಮಕೇತುವು ಕಾಣುವುದರ ಬಗ್ಗೆ ಮೊದಲೇ ಮುನ್ಸೂಚನೆ ನೀಡಿದ್ದನು.

ಆಗ ಲಭ್ಯವಿದ್ದ ಹೊಸ ಖಗೋಳ ವಿಜ್ಞಾನದ ಸಹಾಯದಿಂದ, ಪೋಪ್ ಗ್ರೆಗೊರಿ XIII ಜೂಲಿಯನ್ ಕ್ಯಾಲೆಂಡರನ್ನು ಪರಿಷ್ಕರಿಸಿದನು. 'ಗ್ರೆಗೊರಿ ಕ್ಯಾಲೆಂಡರ್' ಎಂದು ಕರೆಯಲ್ಪಟ್ಟ ಈ ಹೊಸ ಕ್ಯಾಲೆಂಡರ್ ಎಲ್ಲರಿಂದಲೂ ಮನ್ನಣೆ ಪಡೆಯಿತು.

ವೈದ್ಯಕೀಯ ಕ್ಷೇತ್ರದಲ್ಲಿ ವೆಸಲಿಯಸ್ (Vesalius) (1514–1564)ನು ಅಂಗರಚನಾಶಾಸ್ತ್ರದ ಬಗ್ಗೆ ಒಂದು ಗ್ರಂಥವನ್ನು ಬರೆದನು. ವಿಲಿಯಂ ಹಾರ್ವೆ (William Harvey) (1578–1657)ಯು ಹೃದಯದಿಂದ ರಕ್ತವು ಮೊದಲು ಶುದ್ಧ ರಕ್ತವಾಹಿನಿಯಿಂದ (ಅಪಧಮನಿ) (arteries) ಮಲಿನ ರಕ್ತ ವಾಹಿನಿ (Veins)ಗೆ ಬಂದು, ಅನಂತರ ಹೃದಯಕ್ಕೆ ಮರಳುತ್ತದೆ ಎಂದು ಕಂಡುಹಿಡಿದನು. ಕಾರ್ಡಸನು (Cordus, 1515–1544) ಗಂಧಕಾಮ್ಲ ಮತ್ತು ಮದ್ಯಸಾರದಿಂದ ಇಂದ್ರಿಯ ಸುಪ್ತಿಕಾರಕ

(ether)ವನ್ನು ಸಿದ್ಧಪಡಿಸಿದನು. ಹೆಲ್ಮಾಂಟ್ (Helmont 1577–1640) ಇಂಗಾಲಾಮ್ಲವನ್ನು ಕಂಡುಹಿಡಿದನು.

ಫ್ರಾನ್ಸಿಸ್ ಬೇಕನ್ ಮತ್ತು ರೆನೆ ಡಿಸ್ಕಾರ್ಟೆ (Rene Descartes) ಎಂಬ ಇಬ್ಬರು ವೈಜ್ಞಾನಿಕ ದಾರ್ಶನಿಕರು ಪ್ರಯೋಗ ಪರಿವೀಕ್ಷಣೆಯ ವೈಜ್ಞಾನಿಕ ವಿಧಾನವನ್ನು ವಿಸ್ತೃತಗೊಳಿಸಿದರು. ಅಲ್ಲದೆ ಮಾನವಿಕ ವಿಭಾಗವನ್ನು ಒಳಗೊಂಡ ಜ್ಞಾನದ ಎಲ್ಲಾ ಶಾಖಾಧ್ಯಯನಗಳಲ್ಲೂ ವೈಜ್ಞಾನಿಕ ವಿಧಾನವನ್ನು ಅಳವಡಿಸಬೇಕೆಂದು ಪ್ರತಿಪಾದಿಸಿದರು.

## ಪೂರ್ವ–ಪಶ್ಚಿಮಗಳಿಗೆ ಹೊಸ ಸಮುದ್ರ ಮಾರ್ಗಗಳು

ಪುನರುಜ್ಜೀವನ ಯುಗದಲ್ಲಿ ಬೆಳೆದು ಬಂದ ಕುತೂಹಲ ಪ್ರಜ್ಞೆ ಮುಂದೆ ಒಂದು ಸಾಹಸ ಪ್ರಜ್ಞೆಗೆ ಪ್ರೇರಕವಾಯಿತು. ಜಗತ್ತಿನಲ್ಲಿ ಹೊಸ ಹೊಸ ಭೂ ಪ್ರದೇಶಗಳನ್ನು ಕಂಡು ಹಿಡಿಯುವ ಕಾರ್ಯಕ್ಕೆ ಜನರನ್ನು ಪ್ರಚೋದಿಸಿತು. ಈ ಸಾಹಸಗಳಿಗೆ ಮುಖ್ಯ ಪ್ರೇರಣೆ ಕೊಟ್ಟದ್ದು ಬೇರೊಂದಿದೆ. ಅದೆಂದರೆ ಪೂರ್ವ ದೇಶಗಳೊಡನೆ ವ್ಯವಹಾರ ನಡೆಸುವುದರಿಂದ ಬರಬಹುದಾದ ಅಪಾರ ಲಾಭ.

ಹದಿಮೂರನೆಯ ಶತಮಾನದ ಯಾತ್ರಿಕ ಮಾರ್ಕೊ ಪೋಲೊ, ವೆನಿಸಿನಿಂದ ಚೈನಾ, ಜಪಾನುಗಳಿಗೆ ಪ್ರವಾಸ ಮಾಡಿದ. ಆತನ ಪ್ರವಾಸ ಕಥನ ಚೈನಾ, ಜಪಾನ್, ಬರ್ಮ, ಸಯಾಂ ಮತ್ತು ಭಾರತ ದೇಶಗಳ ಬಗೆಗೆ ಹೊಸ ವಿಷಯಗಳನ್ನು ಬಿತ್ತರಿಸಿತು. ಮುಸ್ಲಿಮರಿಂದ ಕ್ರೈಸ್ತರ ಪವಿತ್ರ ಭೂಮಿಗಳನ್ನು ಮತ್ತೆ ಸ್ವಾಧೀನಪಡಿಸಿಕೊಳ್ಳುವ ಸಲುವಾಗಿ ಕ್ರೈಸ್ತರು 'ಧರ್ಮಯುದ್ಧ' ಮಾಡಿದರಷ್ಟೆ. ಅವರಿಗೆ ಈ ನೆವದಲ್ಲಿ ಪೂರ್ವ ದೇಶಗಳ ಉತ್ಪಾದನೆಗಳ ಮತ್ತು ಸಂಪತ್ತಿನ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಯಿತು. ಇಟಲಿಯ ಕೆಲವು ನಗರಗಳು ಪೂರ್ವ ದೇಶಗಳೊಂದಿಗೆ ವ್ಯವಹಾರ ಸಂಪರ್ಕ ಇರಿಸಿಕೊಂಡು ಶ್ರೀಮಂತವಾದುದರಿಂದ ಯೂರೋಪಿನ ಇತರ ರಾಜ್ಯಗಳಿಗೆ ಇಟಲಿಯ ಮೇಲೆ ಅಸೂಯೆ ಮೂಡಿತು.

ಮುಖ್ಯವಾಗಿ ವ್ಯಾಪಾರದಲ್ಲಿ ಮೆಣಸು ಮತ್ತು ಸಂಬಾರ ಪದಾರ್ಥಗಳ ವ್ಯವಹಾರ ತುಂಬ ಲಾಭದಾಯಕವಾಗಿತ್ತು. ಆದರೆ 1453ರ ನಂತರ ಟರ್ಕರು ಪಶ್ಚಿಮ ಏಷ್ಯಾ ಮುಖಾಂತರವಾದ ಐರೋಪ್ಯರ ವ್ಯವಹಾರವನ್ನು ಸ್ಥಗಿತಗೊಳಿಸಿದರು. ಇದರಿಂದಾಗಿ ಪೂರ್ವದೇಶಕ್ಕೆ ಹೊಸ ಮಾರ್ಗಗಳನ್ನು ಹುಡುಕುವ ಪ್ರಯತ್ನಗಳಿಗೆ ಚಾಲನೆ ದೊರೆತಂತಾಯಿತು.

### **ಭೌಗೋಳಿಕ ಅನ್ವೇಷಣೆ (1492–1524)**

ಭೌಗೋಳಿಕ ಅನ್ವೇಷಣೆಯಲ್ಲಿ ಮೊದಲು ಆಸಕ್ತಿ ತೋರಿಸಿದವರೆಂದರೆ ಪೋರ್ಚುಗೀಸ್ ಮತ್ತು ಸ್ಪಾನಿಷ್ ರಾಜರುಗಳು. ಜನಕ್ಕೆ ನೆರವಾಗುವ ಮ್ಯಾರಿನರ್ಸ್ ಕಂಪಾಸ್ ಪರಿಚಿತಗೊಂಡದ್ದೂ ಈ ಸಂದರ್ಭದಲ್ಲೇ. ಪ್ರಿನ್ಸ್ ಹೆನ್ರಿ ಎಂಬ ಪೋರ್ಚುಗೀಸ್ ದೊರೆಯ ಸಹಾಯದಿಂದ ಬಾರ್ತೋಲೋಮಿಯೊ ಡಾಯಸ್ ಎಂಬ ಕಡಲ ಯಾತ್ರಿ

ಆಫ್ರಿಕಾದ ದಕ್ಷಿಣ ತುದಿಯನ್ನು ಮುಟ್ಟಿ ಅದನ್ನು 'ಕೇಪ್ ಆಫ್ ಗುಡ್ ಹೋಪ್' ಎಂದು ಕರೆದ. ಇದೊಂದು ಮಹತ್ವದ ಯಾತ್ರೆಯಾಗಿತ್ತು.

1498ರಲ್ಲಿ ಇದೇ ಮಾರ್ಗವಾಗಿ ವಾಸ್ಕೋಡಗಾಮನು ಭಾರತದ ಕೇರಳ ತೀರಕ್ಕೆ ಬಂದು ತಲುಪಿದ. ಆತ ಕ್ಯಾಲಿಕಟ್‌ನ ಜಾಮೊರಿನ್‌ರನ್ನು ಭೇಟಿ ಮಾಡಿ ಮೆಣಸು, ಸಂಬಾರ ಪದಾರ್ಥಗಳಿಂದ ಇಡಿಕಿರಿದ ಹಡಗಿನಲ್ಲಿ ಪೋರ್ಚುಗಲ್ಲಿಗೆ ಹಿಂದಿರುಗಿದ. ವಾಸ್ಕೋಡಗಾಮನ ಅನ್ವೇಷಣೆಯಿಂದಾಗಿ ಪೂರ್ವ–ಪಶ್ಚಿಮಗಳ ನಡುವೆ ವ್ಯಾವಹಾರಿಕ ಚಟುವಟಿಕೆಗೆ ಇಂಬು ದೊರೆಯಿತು.

ಈತನ ಪ್ರಯಾಣ ಮಾರ್ಗವನ್ನೇ ಅನುಸರಿಸಿ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಇಂಗ್ಲೀಷರು ಭಾರತ ಮತ್ತು ಇತರ ಪೂರ್ವದ ದೇಶಗಳನ್ನು ತಲುಪಿದರು.

ಕ್ರಿಸ್ಟೊಫರ್ ಕೊಲಂಬಸ್, ಇನ್ನೊಬ್ಬ ಭೌಗೋಳಿಕ ಅನ್ವೇಷಕ. ಈತ ಇಟಲಿಯವನು. ಹೊಸ ದೇಶಗಳ ಅನ್ವೇಷಣೆಯ ವಿಷಯದಲ್ಲಿ ಈತನ ಹೆಸರು ಪ್ರಸಿದ್ಧಿಗೆ ಬಂದಿದೆ. ಪಶ್ಚಿಮದ ಮೂಲಕ ಪಯಣಿಸಿ ಭಾರತರನ್ನು ತಲುಪುವುದು ಈತನ ಅಟ್ಲಾಂಟಿಕ್ ಯಾತ್ರೆಯ ಉದ್ದೇಶವಾಗಿತ್ತು. 1492ರಲ್ಲಿ ಈತ ಸ್ಪೇನಿನಿಂದ ಯಾತ್ರೆ ಆರಂಭಿಸಿದ. ರಾಣಿ ಇಸಾಬೆಲ್ಲ ಧನಸಹಾಯ ಮಾಡಿದಳು. ತುಂಬ ಪ್ರಯಾಸದ ಪ್ರಯಾಣದ ನಂತರ ಈತ ಅಟ್ಲಾಂಟಿಕ್ ಸಮುದ್ರ ತೀರದ ಬಹಾಮಾ ದ್ವೀಪವನ್ನು ಮುಟ್ಟಿದ. ಇವು ಭಾರತದ ತೀರ ಪ್ರದೇಶಗಳೆಂದು ಭಾವಿಸಿದ. ಆದ್ದರಿಂದ ಈ ದ್ವೀಪಕ್ಕೆ ''ಇಂಡೀಸ್'' ಎಂದೂ ಜನರಿಗೆ ರೆಡ್ ಇಂಡಿಯನ್ಸ್ ಎಂದೂ ಹೆಸರುಕೊಟ್ಟ.

ಎಷ್ಟೋಕಾಲದ ನಂತರ, ಕೊಲಂಬಸ್ ಒಂದು ಅಜ್ಞಾತ ಖಂಡದ ಒಂದು ದ್ವೀಪವನ್ನು ತಲುಪಿದ ವಿಷಯ ಜನರಿಗೆ ತಿಳಿಯಿತು. ಅದು ಅಮೆರಿಕಾ ಖಂಡದ ಶೋಧವಾಗಿತ್ತು. ಮುಂದೆ ಅಮೆರಿಗೋ ವೆಸ್‌ಪುಚ್ಚಿ ಎಂಬ ಫ್ಲಾರೆನ್ಸಿನ ಮಹಾಯಾತ್ರಿ ಅಮೆರಿಕಾದ ಭೂ ಪ್ರದೇಶಕ್ಕೆ ಬಂದ. ತಾನು ಕಂಡ ದೃಶ್ಯಗಳ ಬಗೆಗೆ ಆತ ತುಂಬ ವರ್ಣಮಯ ಪತ್ರಗಳನ್ನು ಬರೆದಿದ್ದಾನೆ. 'ಹೊಸ ಜಗತ್ತು' ಎಂಬ ಶಬ್ದವನ್ನು ಬಳಕೆಗೆ ತಂದವನು ಈತನೇ. ಆತನ ಪತ್ರದ ಪ್ರತಿಗಳು ಯುರೋಪಿನಲ್ಲಿ ಭಾರೀ ಪ್ರಮಾಣದಲ್ಲಿ ಮಾರಾಟವಾದುವು. ಹೀಗೆ ಅಸ್ತಿತ್ವಕ್ಕೆ ಬಂದ ಹೊಸ ಜಗತ್ತೇ 'ಅಮೆರಿಕಾ' (ಲ್ಯಾಂಡ್ ಆಫ್ ಅಮೆರಿಗೋ).

ಸ್ಪೇನ್ ಮತ್ತು ಪೋರ್ಚುಗೀಸ್ ರಾಜ್ಯಗಳೇ ಈ ಬಗೆಯ ಸಮುದ್ರಯಾನದ ರಾಜ್ಯಗಳಾದ್ದರಿಂದ 1494ರಲ್ಲಿ ಅವೆರಡೂ ಒಟ್ಟಿಗೆ ಸೇರಿ ಒಂದು ಒಪ್ಪಂದಕ್ಕೆ ಬಂದವು. ತಮ್ಮ ತಮ್ಮ ರಾಜ್ಯದ ಹಿತಾಸಕ್ತಿಗಳನ್ನು ಕಾಯ್ದು ಕೊಳ್ಳುವುದೇ ಅವುಗಳ ಉದ್ದೇಶ. ಕೊಲಂಬಸ್ ಕಂಡು ಹಿಡಿದ ಎಲ್ಲ ಭೂಮಿಯ ಒಡೆತನ ತನಗೆ ಬರಬೇಕೆಂದು ಸ್ಪೇನ್ ಆಶಿಸಿತು. 1513ರಲ್ಲಿ ವಾಸ್ಕೊ ನ್ಯೂನೆಜ್ ಡಿ ಬೋಬಲ್ ಎಂಬಾತ ಪೆಸಿಫಿಕ್ ಸಾಗರವನ್ನು ಪತ್ತೆ ಹಚ್ಚಿದ. ಹೀಗೆ ಅಮೆರಿಕಾದ ಆಚೆಗೂ ಸಮುದ್ರವಿದೆ ಎಂಬ ಸಂಗತಿ ಅವರ ಅರಿವಿಗೆ ಬಂದಿತು.

ಫರ್ಡಿನೆಂಡ್ ಮೆಗೆಲನ್ ಎಂಬ ಪೋರ್ಚುಗೀಸ್ ನಾವಿಕ ಸ್ಪೇನ್ ದೊರೆಯ

ಸೇವೆಯಲ್ಲಿ 1519ರಲ್ಲಿ ಐದು ಹಡಗುಗಳೊಡನೆ ದಕ್ಷಿಣ ಅಮೆರಿಕಾ ಕಡಲದಂಡೆಯ ಉದ್ದಕ್ಕೂ ಹೊರಟು ಏಷ್ಯಾ ಖಂಡವನ್ನು ತಲಪುವ ಪ್ರಯತ್ನ ಮಾಡಿದ. ಪೆಸಿಫಿಕ್ ಸಾಗರವನ್ನು ದಾಟಿದ್ದು ಈತನ ಅದ್ಭುತ ಸಾಹಸ ಎನ್ನಬೇಕು. ಅಟ್ಲಾಂಟಿಕ್ ಸಮುದ್ರಕ್ಕಿಂತ ಶಾಂತವಾಗಿದ್ದುದರಿಂದ ಅದಕ್ಕೆ ಪೆಸಿಫಿಕ್ (ಶಾಂತ ಸಾಗರ) ಎಂದು ಹೆಸರಿಟ್ಟವನೂ ಈತನೇ. ಗಿನಿಯಾ ದ್ವೀಪವನ್ನು ಸೇರಿ ಅಲ್ಲಿಂದ ಫಿಲಿಫೈನ್ಸ್ ದ್ವೀಪಗಳಿಗೆ ಬಂದು ಸೇರಿದ. ಈ ದ್ವೀಪದ ನಿವಾಸಿಗಳು ಅವನನ್ನು ಕೊಂದರು. ಆದರೂ ಅವನ ಜತೆಯವರು ಯಾನವನ್ನು ಮುಂದುವರಿಸಿ ಸ್ಪೇನಿಗೆ ಬಂದರು. ಮೆಗೆಲನ್ ಜಗತ್ತನ್ನು ಪ್ರದಕ್ಷಿಣೆ ಮಾಡಿದ ನಾವಿಕರಲ್ಲಿ ಮೊದಲಿಗ ಮತ್ತು ಜಗತ್ತು ದುಂಡಗಿದೆ ಎಂಬ ಭಾವನೆಯನ್ನು ಸ್ಥಿರಗೊಳಿಸಿದವನೂ ಈತನೇ. ಅಲ್ಲದೆ ಪಶ್ಚಿಮಾಭಿಮುಖವಾಗಿ ಹೊರಟು ಪೂರ್ವವನ್ನು ಸೇರಬಹುದೆಂಬುದನ್ನು ತೋರಿಸಿಕೊಟ್ಟವನು ಈತನೇ.

ಇಂಗ್ಲೆಂಡಿನ ಜಾನ್ ಕಾಬಟ್ ಮತ್ತು ಫ್ರಾನ್ಸಿಸ್‌ಡ್ರೇಕ್, ಫ್ರಾನ್ಸಿನ ಕಾರ್ಟಿಯರ್ ಕೂಡ ಪ್ರಸಿದ್ಧ ಅನ್ವೇಷಕ ನಾವಿಕರಾಗಿದ್ದಾರೆ.

ಇವರುಗಳ ಸಂಶೋಧನೆಯಿಂದ ಜಗತ್ತಿನ ಭೂಪಟವೇ ಬದಲಾಯಿತು. ಮನುಷ್ಯನ ಅಭಿಪ್ರಾಯದಲ್ಲೂ ಸಾಕಷ್ಟು ಬದಲಾವಣೆಗಳಾದವು. ಸಮುದ್ರ ವ್ಯಾಪಾರದಲ್ಲಿ ಒಂದು ಕ್ರಾಂತಿಯೇ ಆಯಿತು. ಮುಂದೆ 'ವಸಾಹತು ನೀತಿ' ಆರಂಭಗೊಂಡು ಇತಿಹಾಸದ ಗತಿಯನ್ನೇ ಬದಲಿಸಿತು.

## ವಾಣಿಜ್ಯ ವ್ಯವಹಾರಗಳ ಪ್ರಗತಿ

ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಕಂಡುಹಿಡಿದ ಮೇಲೆ ಮೊದಲು ಪೋರ್ಚುಗೀಸರು ವಾಣಿಜ್ಯ ವ್ಯವಹಾರಗಳಲ್ಲಿ ಹಕ್ಕುದಾರರೆಂಬುದು ಸಿದ್ಧ ವಿಷಯವಾಯಿತು. ಮುಂದೆ ಡಚ್ಚರು ಈ ಹಕ್ಕುದಾರಿಕೆಯನ್ನು ವಿರೋಧಿಸಿದರು. ಇನ್ನೂ ಮುಂದೆ ಇಂಗ್ಲಿಷರು ಮತ್ತು ಫ್ರೆಂಚರು ಸೇರಿಕೊಂಡರು. ಏಷ್ಯಾ ಮತ್ತು ಅಮೆರಿಕ ಪದಾರ್ಥಗಳೆಲ್ಲ ಯೂರೋಪಿನ ಮಾರುಕಟ್ಟೆಗಳಲ್ಲಿ ಸುಲಭ ಬೆಲೆಗೆ ಸಿಕ್ಕತೊಡಗಿದವು. ಈ ವಹಿವಾಟಿನಿಂದಾಗಿ ಯೂರೋಪಿಯನ್ ದೇಶಗಳು ಅದ್ಭುತ ಏಳಿಗೆಯನ್ನು ಸಾಧಿಸಿದವು.

## ವಸಾಹತು ಸ್ಥಾಪನೆ

ವ್ಯಾಪಾರದ ನಂತರ ವಸಾಹತು ಸ್ಥಾಪನೆ. ಅಮೆರಿಕಾದಲ್ಲಿ ಯೂರೋಪಿಯನ್ನರು ವಸಾಹತು ಸ್ಥಾಪಿಸಿ ಕೊಳ್ಳೆಹೊಡೆದು ನಿವಾಸಿಗಳಾದ ಇನ್‌ಕಾಸ್ ಮತ್ತು ಮಯನ್‌ರ ಸಂಸ್ಕೃತಿಯನ್ನೇ ನಾಶ ಮಾಡಿದರು. ಆಫ್ರಿಕಾ, ಆಸ್ಟ್ರೇಲಿಯಾಗಳಲ್ಲಿ ಮೂಲನಿವಾಸಿಗಳು ಬಹುತೇಕ ಗುಲಾಮೀ ಮಟ್ಟಕ್ಕೆ ಇಳಿಸಲ್ಪಟ್ಟರು. ಭಾರತ, ಚೀನಾ ಮತ್ತು ಇತರ ಏಷ್ಯಾದ ರಾಜ್ಯಗಳಲ್ಲಿ ಜನರನ್ನು ರಾಜಕೀಯವಾಗಿ ಪಾರತಂತ್ರ್ಯಕ್ಕೆ ಕೆಡವಿ ಆರ್ಥಿಕವಾಗಿ ಶೋಷಿಸಲಾಯಿತು.

# ಧಾರ್ಮಿಕ ಸುಧಾರಣೆ

ಜ್ಞಾನಪುನರುಜ್ಜೀವನದ ಹೊಸ ಚೇತನವು ಯೂರೋಪಿನ ಜನಾಂಗದವರ ಮೇಲೆ ಆಳವಾದ ಪ್ರಭಾವವನ್ನು ಬೀರಿತು. ಪ್ರಶ್ನಿಸುವ ಮನೋಭಾವವು ಹೊಸ ಅರಿವಿಗೆ ದಾರಿಮಾಡಿಕೊಟ್ಟಿತು. ಚರ್ಚಿನ ಚಟುವಟಿಕೆಗಳ ಬಗ್ಗೆ ಮೂಡಿದ ಪ್ರಶ್ನೆಗಳು ಚರ್ಚಿನ ಸುಧಾರಣೆಗೆ ಕಾರಣವಾದುವು.

**ಸುಧಾರಣಾ ಪೂರ್ವದ ಚರ್ಚಿನ ಸ್ಥಿತಿ**

ಪೋಪ್ ಚರ್ಚಿನ ಮುಖ್ಯಸ್ಥನಾಗಿದ್ದನು. ರೋಮನ್ ಕ್ಯಾಥೋಲಿಕ್ ಚರ್ಚುಗಳು ಜನರ ಧಾರ್ಮಿಕ ಜೀವನ ಹಾಗೂ ಶಿಕ್ಷಣಗಳ ಮೇಲೆ ಹಿಡಿತವನ್ನು ಹೊಂದಿದ್ದವು. ರಾಜನಷ್ಟೇ ಪೋಪ್ ಸಹ ಪ್ರಭಾವಶಾಲಿಯಾಗಿದ್ದನು.

ಕ್ರಮೇಣ ಚರ್ಚುಗಳು ಸಹ ಹಣದ ಪ್ರಾಬಲ್ಯಪಡೆದು ಧಾರ್ಮಿಕ ಕಾರ್ಯಗಳನ್ನು ಕಡೆಗಣಿಸಿ ಲೌಕಿಕದಲ್ಲಿ ಆಸಕ್ತಿ ತಳೆದವು. ಜನರು ಚರ್ಚಿನ ಬಗ್ಗೆ ನಂಬಿಕೆಯನ್ನು ಕಳೆದುಕೊಂಡರು. ಚರ್ಚಿನ ಪ್ರಾಬಲ್ಯ ಹೆಚ್ಚುತ್ತಿರುವುದನ್ನು ಕಂಡು ರಾಜರು ಸಹಿಸದಾದರು.

15ನೇ ಶತಮಾನದಲ್ಲಿ ಪಾದ್ರಿಗಳು ಚರ್ಚಿನ ವರ್ತನೆ, ವಿಧಿಗಳಲ್ಲಿ ಕೆಲವು ಸುಧಾರಣೆಗಳಾಗಬೇಕೆಂದು ಆಗ್ರಹಪಡಿಸಿದರು. ಜಾನ್ ವೈಕ್ಲಿಫ್ ಮತ್ತು ಜಾನ್ ಹಸ್ ಎಂಬ ಇಬ್ಬರು ಚರ್ಚಿನ ಆಚರಣೆ ಪದ್ಧತಿಯ ಸುಧಾರಣೆಗಾಗಿ ಒತ್ತಾಯಪಡಿಸಿದರು. ಜಾನ್ ಹಸ್ಸನು ಮಾಡಿದ ಹಕ್ಕೊತ್ತಾಯ (Demand)ಗಳಿಗಾಗಿ ಅವನನ್ನು ಸಜೀವದಹನ ಮಾಡಲಾಯಿತು.

ಈ ಮಧ್ಯೆ ಚರ್ಚಿನ ಒಳಗೆ ಮತ್ತು ಹೊರಗೆ ಬದಲಾವಣೆಗಾಗಿ ಒತ್ತಾಯ ಹೆಚ್ಚಾಯಿತು. ಚರ್ಚಿನ ಸಾಂಪ್ರದಾಯಿಕ ನಿಯಮಗಳ ಸುಧಾರಣೆಯ ಮೂಲಕ ಬದಲಾವಣೆಯನ್ನು ಕೆಲವರು ಬಯಸಿದರೆ, ಮತ್ತೆ ಕೆಲವರು ಆಮೂಲಾಗ್ರ ಬದಲಾವಣೆಯನ್ನು ಅಪೇಕ್ಷಿಸಿದರು. ಚರ್ಚಿನ ಧಾರ್ಮಿಕ ಆಚರಣೆಗಳ ವಿರುದ್ಧ ಸಿಡಿದೆದ್ದವರನ್ನು "ಪ್ರೊಟೆಸ್ಟೆಂಟ್"ರೆಂದು ಕರೆಯಲಾಯಿತು. ಚರ್ಚಿನ ವಿರುದ್ಧ ಜನತೆಯ ಹೋರಾಟವನ್ನು "ಧಾರ್ಮಿಕ ಸುಧಾರಣೆ" ಎಂದು ಕರೆಯಲಾಯಿತು.

ಮಾರ್ಟಿನ್ ಲೂಥರನು (1483–1566) ಪ್ರೊಟೆಸ್ಟಂಟರ ನಾಯಕನಾಗಿ ರೋಮನ್ ಕ್ಯಾಥೋಲಿಕ್ ಚರ್ಚಿನಲ್ಲಿ ರೂಢಿಯಲ್ಲಿದ್ದ ಹಲವಾರು ದುಷ್ಟ ಪದ್ಧತಿಗಳನ್ನು ತಿರಸ್ಕರಿಸಿದನು.

ಪಾಪ ಕ್ಷಮಾ ಪತ್ರವನ್ನು ಚರ್ಚ್ ಮಾರಾಟ ಮಾಡುವುದನ್ನು ತೀವ್ರ ಟೀಕಿಸಲಾಯಿತು. ಸಾಮಾನ್ಯವಾಗಿ ಪಾದ್ರಿಗಳು ತಪ್ಪಿತಸ್ಥರಿಗೆ ಶಿಕ್ಷೆಯನ್ನು ನೀಡುತ್ತಿದ್ದರು. ಆದರೆ ಶ್ರೀಮಂತರಾದ ತಪ್ಪಿತಸ್ಥರು ಹಣಸಂದಾಯ ಮಾಡುವುದರ ಮೂಲಕ ಕ್ಷಮೆಯನ್ನು ಪಡೆಯುತ್ತಿದ್ದರು. ಹೀಗೆ ಹಣಸಂದಾಯ ಮಾಡಿದ ತಪ್ಪಿತಸ್ಥರಿಗೆ ಪೋಪ್‌ನು ನೀಡುವ ಪತ್ರಕ್ಕೆ "ಪಾಪ ಕ್ಷಮಾ ಪತ್ರ"ವೆಂದು ಹೆಸರು. ಈ ರೀತಿ ಸಂದಾಯವಾದ

ಹಣವನ್ನು ಪಾದ್ರಿಗಳು ಭೋಗವಿಲಾಸದ ಜೀವನಕ್ಕಾಗಿ ವೆಚ್ಚಮಾಡುತ್ತಿದ್ದರು. ಈ ರೀತಿ 'ಕ್ಷಮಾ ಪತ್ರ' ನೀಡುವಿಕೆಯು ಒಂದು ರೀತಿಯ ವ್ಯಾಪಾರವಾಗಿ ಪರಿಣಮಿಸಿತು. ರೋಮಿನ ಸೇಂಟ್ ಪೀಟರ್ ಚರ್ಚನ್ನು ಕಟ್ಟುವಾಗ ಬೇಕಾದ ಅಪಾರ ಹಣಕ್ಕಾಗಿ ಬ್ಯಾಂಕಿನವರು ಈ ರೀತಿಯ ಕ್ಷಮಾಪತ್ರಗಳನ್ನೂ ದಳ್ಳಾಳಿ ಆಧಾರದ ಮೇಲೆ ಮಾರಾಟ ಮಾಡಲು ಪ್ರಾರಂಭಿಸಿದರು. ಇದರಿಂದ ಜನರು ಚರ್ಚಿನ ವಿರುದ್ಧ ರೊಚ್ಚಿಗೆದ್ದರು.

ಮಾರ್ಟಿನ್ ಲೂಥರನು ಬಯಲು ಮಾಡಿದ ಚರ್ಚಿನ ದುಷ್ಕೃತ್ಯಗಳು ಎಲ್ಲಾ ವರ್ಗಗಳ ಜನರನ್ನೂ ಕೆರಳಿಸಿದವು. ಲೂಥರನು ಚರ್ಚಿನಲ್ಲಿ ಆಚರಣೆಯಲ್ಲಿದ್ದ ದುಷ್ಟ ಪದ್ಧತಿಗಳ ವಿರುದ್ಧ 95 ಆಪಾದನೆಗಳನ್ನು ಮಂಡಿಸಿ, ವಿಟೆನ್‌ಬರ್ಗ್ ಚರ್ಚಿನ ಬಾಗಿಲಿಗೆ ಅಂಟಿಸಿದರು. ಕಡೆಗೆ ಪಾಪ ಕ್ಷಮಾ ಪತ್ರದ ಮಾರಾಟವು ನಿಂತು ಹೋಯಿತು. ಮಾರ್ಟಿನ್ ಲೂಥರನನ್ನು ಬಹಿಷ್ಕರಿಸಲಾಯಿತು. ಕ್ರಿ.ಶ. 1521ರಲ್ಲಿ ಅವನನ್ನು ರೋಮಿನ ಚಕ್ರವರ್ತಿ ಐದನೇ ಚಾರ್ಲ್ಸ್‌ನ ಮುಂದೆ ಹಾಜರುಪಡಿಸಲಾಯಿತು. ಆಗ ಅವನು ತನ್ನ ಮೇಲಿನ ಆರೋಪಗಳನ್ನು ಸಮರ್ಥವಾಗಿ ನಿರಾಕರಿಸಿ, ಬಿಡುಗಡೆ ಹೊಂದಿದನು.

ಮಾರ್ಟಿನ್ ಲೂಥರನ ಪ್ರಯತ್ನಗಳ ಫಲವಾಗಿ ಜರ್ಮನಿಯ ನಾನಾ ಭಾಗಗಳಲ್ಲಿ ಮತ ಸುಧಾರಣೆ ವಿಷಯವು ಜನಪ್ರಿಯವಾಯಿತು.

**ಪ್ರತಿ ಸುಧಾರಣೆ**

ರೋಮನ್ ಕ್ಯಾಥೊಲಿಕ್ ಚರ್ಚು ತಾನು ಕಳೆದುಕೊಂಡ ಜನಪ್ರಿಯತೆಯನ್ನು ಗಳಿಸಲು ಕೈಗೊಂಡ ಪ್ರಯತ್ನಗಳ ಫಲವಾಗಿ ಚರ್ಚಿನ 'ಪ್ರತಿ ಸುಧಾರಣೆ' ಅಸ್ತಿತ್ವಕ್ಕೆ ಬಂದಿತು. ಅತ್ಯಂತ ಜನಪ್ರಿಯ ನಾಯಕನಾದ ಇಗ್ನೇಷಿಯಸ್ ಲಯೊಲ 'ಯೇಸು ಸಮಾಜ' ಎಂಬ ಕ್ರೈಸ್ತ ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿದನು. ಫ್ರಾನ್ಸಿಸ್ ಕ್ಷೇವಿಯರ್, ಇಗ್ನೇಷಿಯಸ್ ಲಯೊಲನ ಶಿಷ್ಯರಲ್ಲಿ ಒಬ್ಬನಾಗಿದ್ದನು. ಈ ಸಂಸ್ಥೆಯ ಸದಸ್ಯರನ್ನು 'ಜೆಸುಯಿಟರು' ಎಂದು ಕರೆಯಲಾಯಿತು. ಇವರು ಪೋಪ್‌ಗೆ ಪ್ರಶ್ನಾತೀತ ವಿಧೇಯತೆಯನ್ನು ತೋರುವ ಪ್ರತಿಜ್ಞೆ ಮಾಡಿದರು. ಈ ಸದಸ್ಯರು ದೂರದ ದೇಶಗಳಿಗೆ ಕ್ಯಾಥೊಲಿಕ್ ಚರ್ಚಿನ ಸಂದೇಶವನ್ನು ಕೊಂಡೊಯ್ದರು. ಈ ಸಂದೇಶವನ್ನು ಸಾರಲು ಅವರು ಅನೇಕ ಶಾಲಾ–ಕಾಲೇಜುಗಳನ್ನು ಪ್ರಾರಂಭಿಸಿದರು. ಇವರು ಕೈಗೊಂಡ ಚಟುವಟಿಕೆಗಳ ಫಲವಾಗಿ ಚರ್ಚು ಬಲಿಷ್ಠವಾಯಿತು.

## ರಾಷ್ಟ್ರೀಯ ಪ್ರಭುತ್ವಗಳ ಉದಯ

ಏಕ ಸರ್ಕಾರದಡಿಯಲ್ಲಿ ನಾಗರೀಕ ಜಗತ್ತನ್ನು ಒಂದುಗೂಡಿಸುವುದು ಮಧ್ಯಕಾಲೀನ ಯುಗದ ರಾಜಕೀಯ ಆದರ್ಶವಾಗಿತ್ತು. ಆದರೆ ಆಧುನಿಕ ರಾಷ್ಟ್ರೀಯ ಪ್ರಭುತ್ವಗಳ ಉದಯವು ಈ ಆದರ್ಶವನ್ನು ಕೊನೆಗೊಳಿಸಿತು. ಪವಿತ್ರ ರೋಮನ್ ಸಾಮ್ರಾಜ್ಯದ ರಾಜ್ಯಗಳು ಭಿನ್ನಭಾಷೆಗಳ, ಜನಾಂಗಿಕ ವರ್ಗಗಳ ಮತ್ತು ಚಾರಿತ್ರಿಕ ಹಿನ್ನೆಲೆಗಳ ಜನಗಳಿಂದ ಕೂಡಿದ್ದವು. ರೋಮನ್ ಸಾಮ್ರಾಜ್ಯ ಹಾಗೂ ಪವಿತ್ರ ರೋಮನ್

ಸಾಮ್ರಾಜ್ಯಗಳಲ್ಲಿದ್ದ ರಾಜ್ಯವ್ಯವಸ್ಥೆ ನಮಗೆಲ್ಲ ಸುಪರಿಚಿತವಾಗಿದೆ. ಈ ಸಾರ್ವಭೌಮ ರಾಜ್ಯಗಳಲ್ಲಿ ಬೇರೆ ಬೇರೆ ವರ್ಗಗಳ, ಭಾಷೆಗಳ ಮತ್ತು ಐತಿಹಾಸಿಕ ಹಿನ್ನೆಲೆಗಳ ರಾಜ್ಯವ್ಯವಸ್ಥೆ ನಮಗೆಲ್ಲ ತಿಳಿದಿದೆ. ಈ ಸಾರ್ವಭೌಮ ರಾಜ್ಯಗಳಲ್ಲಿ ಬೇರೆ ಬೇರೆ ವರ್ಗಗಳ, ಭಾಷೆಗಳ ಮತ್ತು ಐತಿಹಾಸಿಕ ಹಿನ್ನೆಲೆಗಳ ಜನರೆಲ್ಲ ಒಂದೇ ಕಡೆ ಇರುತ್ತಿದ್ದರು. ಆದರೆ ಒಂದು ರಾಷ್ಟ್ರ ಎಂಬುದು ಸಮಾನ ಮೂಲದ, ಸಮಾನ ಭಾಷೆಯ, ಸಮಾನ ಇತಿಹಾಸದ ಜನರಿಂದ ಕೂಡಿತ್ತು.

ಮಧ್ಯಕಾಲೀನ ಯುಗದ ಅಂತ್ಯದ ವೇಳೆಗೆ ಯೂರೋಪಿನಲ್ಲಿ ಹೊಸ ಪ್ರಜ್ಞೆಯು ರಾಷ್ಟ್ರೀಯ ವಾದ ಕಾಣಿಸಿಕೊಳ್ಳ ತೊಡಗಿತು. ಸಮಾನವಾದ ಭಾಷೆ, ಜನಾಂಗಿಕತೆ, ಚಾರಿತ್ರಿಕ ಹಿನ್ನಲೆಗಳನ್ನು ಉಳ್ಳ ಜನರು ತಮ್ಮ ತಮ್ಮ ದೊರೆಗಳ ಮೂಲಕ ಒಂದಾದರು. ಊಳಿಗಮಾನ್ಯ ಪದ್ಧತಿಯ ಒಡೆಯರು ಮತ್ತು ರಾಜರ ನಡುವೆ ನಡೆದ ಹೋರಾಟವು ರಾಷ್ಟ್ರೀಯತೆ ಉದಯವಾಗಲು ಮುಖ್ಯ ಕಾರಣವಾಯಿತು.

ನಗರಗಳ ಬೆಳವಣಿಗೆ ಮತ್ತು ವರ್ತಕವರ್ಗದವರ ಅಭ್ಯುದಯದ ಫಲವಾಗಿ ಊಳಿಗಮಾನ್ಯ ಒಡೆಯರ ಮೇಲೆ ದೊರೆಗಳು ತಮ್ಮ ನಿಯಂತ್ರಣವನ್ನು ಸ್ಥಾಪಿಸಲು ಬಹುಮಟ್ಟಿಗೆ ನೆರವಾಯಿತು. ಊಳಿಗಮಾನ್ಯ ಪದ್ಧತಿಯ ಅರಾಜಕತ್ವ ಮತ್ತು ಅವ್ಯವಸ್ಥೆಯನ್ನು ಕೊನೆಗೊಳಿಸಬಲ್ಲ ಬಲಿಷ್ಠ ರಾಜರ ನೆರವು, ನಗರಗಳಲ್ಲಿ ಆರ್ಥಿಕ ಚಟುವಟಿಕೆಗಳನ್ನು ಹೆಚ್ಚಿಸಿಕೊಳ್ಳಲು ಕಾರಣವಾಯಿತು.

ಊಳಿಗಮಾನ್ಯ ಪದ್ಧತಿಯನ್ನು ಸದೆಬಡಿದು ನಾಶಮಾಡಲು ಫಿರಂಗಿ ಮದ್ದಿನ ಬಳಕೆ ರಾಜರಿಗೆ ನೆರವಾದ ಮುಖ್ಯ ಸಾಧನಗಳಲ್ಲೊಂದಾಗಿತ್ತು. ಹೀಗಾಗಿ ಮಧ್ಯಯುಗದ ಅಂತ್ಯದ ವೇಳೆಗೆ ಊಳಿಗಮಾನ್ಯ ಒಡೆಯರ ಅಳಿದುಳಿದ ರಾಜಕೀಯ ಅಧಿಕಾರವು ನಶಿಸಿತು. ರಾಜರು ತಮ್ಮ ಅಧಿಕಾರವನ್ನು ಕೇಂದ್ರೀಕರಿಸಿಕೊಂಡು ಬಲವಾದ ರಾಷ್ಟ್ರೀಯ ರಾಜ್ಯಗಳಲ್ಲಿ ತಮ್ಮ ಪ್ರಾಂತ್ಯಗಳನ್ನು ವಿಲೀನಗೊಳಿಸಿದರು.

ಯೂರೋಪಿನ ಅನೇಕ ಪ್ರಾಂತ್ಯಗಳಲ್ಲಿ ರಾಷ್ಟ್ರೀಯತೆಯು ಪ್ರವರ್ಧಮಾನ ಮಟ್ಟಕ್ಕೆ ಬರಲು ಇತರ ಹಲವಾರು ಕಾರಣಗಳು ನೆರವಾದವು. ಉದಾಹರಣೆಗೆ ಫ್ರಾನ್ಸ್ ಮತ್ತು ಇಂಗ್ಲೆಂಡುಗಳಲ್ಲಿ ಶತಮಾನದ ಯುದ್ಧ, ಹೊಸ ದೇಶಾಭಿಮಾನದ ಭಾವನೆಯನ್ನು ಹುಟ್ಟುಹಾಕಿತು. ಸ್ಪೈನ್‌ನಲ್ಲಿ ಮೂರ್ ಜನಾಂಗದೊಡನೆ ನಡೆಸಿದ ಹೋರಾಟ ರಾಷ್ಟ್ರೀಯತೆ ಬರಲು ನೆರವಾಯಿತು.

## ದೊರೆಗಳ ದೈವದತ್ತಾಧಿಕಾರ

ಮೇಲ್ಕಂಡ ಬೆಳವಣಿಗೆಗಳಿಂದ ರಾಜತ್ವದ ಬಗ್ಗೆ ನವೀನ ಕಲ್ಪನೆಗಳು ಉಂಟಾದವು. ದೈವದತ್ತಾಧಿಕಾರ ಸಿದ್ಧಾಂತದ ಉದ್ದೇಶವು ಪೋಪರು ತಾವು ದೈವದತ್ತಾಧಿಕಾರದ ಪ್ರತಿನಿಧಿಗಳೆಂದು ಹೇಳಿಕೊಳ್ಳುವುದನ್ನು ಪ್ರಶ್ನಿಸುವುದಾಗಿತ್ತು. ಇಂಗ್ಲೆಂಡಿನ ಜಾನ್ ವೈಕ್ಲಿಫನು (John Wycliff) ರಾಜರ ದೈವದತ್ತಾಧಿಕಾರವನ್ನು ಚರ್ಚ್‌ಗೆ ವಿರುದ್ಧವಾಗಿ ಎತ್ತಿ ಹಿಡಿದನು. ಮಾರ್ಟಿನ್ ಲೂಥರ್ (Martin-Luther) ಸಹ ನಿರಂಕುಶ ರಾಜ ಪ್ರಭುತ್ವವನ್ನು ಬೆಂಬಲಿಸಿದನು. ಇದೇ ರೀತಿಯಾಗಿ ಇಟಲಿಯಲ್ಲಿ ಮ್ಯಾಕಿಯಾವೆಲಿ

(Machiavelli), ಫ್ರಾನ್ಸಿನಲ್ಲಿ ಬೊಡಿನ್ (Bodin) ಇಂಗ್ಲೆಂಡಿನಲ್ಲಿ ಹಾಬ್ಸ್ (Hobbes) ರಾಜ್ಯಗಳ ಅಧಿಕಾರವನ್ನು ಬಲಿಷ್ಠಗೊಳಿಸಲು ರಾಜ ಪ್ರಭುತ್ವವನ್ನು ಬಲಪಡಿಸಬೇಕೆಂದು ವಾದಿಸಿ, ವೈಚಾರಿಕ ಹಿನ್ನೆಲೆಯಲ್ಲಿ ರಾಜರನ್ನು ಬೆಂಬಲಿಸಿದರು.

**ಪ್ರಧಾನ ರಾಷ್ಟ್ರೀಯ ಪ್ರಭುತ್ವಗಳು**

ಕ್ರಿ.ಶ. 1337ಮತ್ತು ಕ್ರಿ.ಶ. 1453ರ ನಡುವೆ ಇಂಗ್ಲೆಂಡಿಗೂ ಫ್ರಾನ್ಸಿಗೂ ಜರುಗಿದ ಶತಮಾನದ ಯುದ್ಧ, ಫ್ರೆಂಚ್ ದೊರೆಗಳು ತಮ್ಮ ಅಧಿಕಾರವನ್ನು ಸ್ಥಾಪಿಸಲು ನೆರವಾಯಿತು. ಫ್ರಾನ್ಸಿನ ಜೋನ್ ಆಫ್ ಆರ್ಕ್ (Joan of Arc) ಜನಗಳಲ್ಲಿ ಬಿತ್ತಿದ ದೇಶಾಭಿಮಾನದ ಭಾವನೆ ಇಂಗ್ಲೆಂಡಿನಿಂದ ಫ್ರಾನ್ಸಿನ ಉತ್ತರಾರ್ಧ ಭಾಗವು ಮುಕ್ತವಾಗಲು ನೆರವಾಯಿತು. ಶತಮಾನದ ಯುದ್ಧ ಮುಗಿದಾಗ ಫ್ರಾನ್ಸಿನ ದೊರೆ ರಾಷ್ಟ್ರೀಯ ಅಧಿಪತಿಯಾದನು. ಫ್ರಾನ್ಸ್ ರಾಷ್ಟ್ರಪ್ರಭುತ್ವವಾಯಿತು. ವಿಜೇತ ವಿಲಿಯಂ (William the Conqueror)ನು 11ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಬಲವಾದ ರಾಜ ಪ್ರಭುತ್ವವನ್ನು ಸ್ಥಾಪಿಸಿದನು. 16ನೇ ಶತಮಾನದಲ್ಲಿ ಟ್ಯೂಡರ್ (Tudor) ರಾಜಮನೆತನದ ಆಳ್ವಿಕೆಯಲ್ಲಿ ಇಂಗ್ಲಿಷ್ ರಾಜ ಪ್ರಭುತ್ವವು ಬಲಿಷ್ಠವಾಯಿತು. ಅಂತೆಯೆ ಸ್ಪೆಯಿನ್, ಪೋರ್ಚುಗಲ್, ಹಾಲೆಂಡ್ ದೇಶಗಳು ಪ್ರಭುತ್ವಗಳಾಗಿ ಪ್ರಗತಿ ಹೊಂದಿದವು. ಆದರೆ ಇಟಲಿ ಮತ್ತು ಜರ್ಮನಿಗಳು 19ನೇ ಶತಮಾನದವರೆಗೆ ಏಕೀಕೃತವಾಗಲಿಲ್ಲ.

ತುರ್ಕಿಯರಿಗೂ ಮತ್ತು ಪ್ರೊಟೆಸ್ಟೆಂಟ್ ಮತವಾದಿಗಳಿಗೂ ನಡೆದ ಹೋರಾಟದಿಂದ ಆಸ್ಟ್ರಿಯಾದಲ್ಲಿ ರಾಷ್ಟ್ರೀಯತೆ ಮತ್ತು ನಿರಂಕುಶ ರಾಜಪ್ರಭುತ್ವ ಬಲಿಷ್ಠಗೊಂಡಿತು. ಆಸ್ಟ್ರಿಯಾದ ದೊರೆಗಳು ಉದಾರ ವಾದದ ಬೆಳವಣಿಗೆಯ ವಿರುದ್ಧವೂ ಹೋರಾಡಿದರು. ಮರಿಯಾ ಥೆರೇಸಾ (Maria Theresa) (1745–1780), ಎರಡನೇ ಜೋಸೆಫ್ (1790ರಲ್ಲಿ ನಿಧನ) ಈ ರಾಜರು ಆದರ್ಶ ಮತ್ತು ಸಮರ್ಥ ಆಡಳಿತಗಳಿಗೆ ಮಾದರಿ ಎನಿಸಿದರು. ಅವರು ಕಲಾ ಪೋಷಕರಾಗಿದ್ದಲ್ಲದೆ ಸಮಗ್ರ ಶಿಕ್ಷಣ ಪದ್ಧತಿಯನ್ನೇ ಪುನರ್ ವ್ಯವಸ್ಥೆಗೊಳಿಸಿದರು. ಪ್ರಷ್ಯಾದ ಫ್ರೆಡರಿಕ್ ಮಹಾಶಯನು (1740–1786) ಮತ್ತೊಬ್ಬ ಪ್ರಬುದ್ಧ ನಿರಂಕುಶ ದೊರೆಯಾಗಿದ್ದನು. ಅವನು ಸೇನಾ ಚತುರನೂ, ದಕ್ಷ ಆಡಳಿತಗಾರನೂ, ಸಮರ್ಥ ರಾಜಕಾರಣಿಯೂ ಆಗಿದ್ದನು. ಕಲೆ, ವಿಜ್ಞಾನ ಮತ್ತು ತತ್ವಶಾಸ್ತ್ರಗಳನ್ನು ಪ್ರೋತ್ಸಾಹಿಸಿದನು.

ರಷ್ಯಾದಲ್ಲಿ ಪೀಟರ್ ಮಹಾಶಯನು ಸಶಕ್ತ ನಿರಂಕುಶ ರಾಜನಾಗಿ, ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಆ ಮೂಲಕ ಪಾಶ್ಚಾತ್ಯ ವಿಚಾರಗಳನ್ನು ರಷ್ಯಾದ ಜನತೆಗೆ ಪರಿಚಯಿಸಿದನು. ಬೃಹತ್ ಪ್ರಮಾಣದ ಸೈನ್ಯವನ್ನು ಕಟ್ಟಿ, ರಷ್ಯಾ ಯೂರೋಪಿನಲ್ಲಿ ಪ್ರಬಲ ರಾಷ್ಟ್ರವಾಗುವಂತೆ ಮಾಡಿದನು. ಸಾಂಪ್ರದಾಯಿಕ ಕ್ರೈಸ್ತ ಚರ್ಚಿನ ನಾಯಕನಾಗಿ ಜನಗಳ ಮೇಲೆ ಅಧಿಕಾರ ನಡೆಸಿದನು. ರಷ್ಯಾದ ಕ್ಯಾಥರಿನ್ ರಾಣಿ (1762–1796) ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಿದ್ದಲ್ಲದೆ ಕಲೆ–ವಿಜ್ಞಾನ ಮೊದಲಾದವುಗಳ ಬೆಳವಣಿಗೆಯಲ್ಲಿ ಅಪಾರ ಆಸಕ್ತಿಯನ್ನು ತಳೆದಳು.

**ವಿರೋಧಗಳು**

ಬಲವತ್ತರವಾದ ರಾಷ್ಟ್ರೀಯತಾ ವಾದ ಯೂರೋಪಿನ ರಾಷ್ಟ್ರಗಳ ನಡುವೆ ಸಂಘರ್ಷವನ್ನೂ, ಶತ್ರುತ್ವವನ್ನೂ ಉಂಟುಮಾಡಿತು. ಏಷ್ಯಾ, ಆಫ್ರಿಕಾ ಮತ್ತು ಅಮೆರಿಕಾಗಳಲ್ಲಿ ವಸಾಹತುಗಳನ್ನು ಪಡೆದುಕೊಳ್ಳುವುದೇ ಈ ಸಂಘರ್ಷಗಳಿಗೆ ಮೂಲಕಾರಣವೆನಿಸಿತ್ತು. 17, 18, 19ನೇ ಶತಮಾನಗಳ ಉದ್ದಕ್ಕೂ ವಸಾಹತುಶಾಹಿ ಸಮರಗಳು ನಡೆದು ಜಗತ್ತಿನ ಎಲ್ಲೆಡೆಯ ಜನಗಳಿಗೆ ಅಪಾರ ದುರಂತಗಳನ್ನು ತಂದೊಡ್ಡಿದವು.

**ಸಾಧನೆಗಳು**

ಬಲಿಷ್ಠ ರಾಜರ ಆಳ್ವಿಕೆಯಲ್ಲಿ ರಾಷ್ಟ್ರಪ್ರಭುತ್ವಗಳು ಹಲವಾರು ವಿಕ್ರಮಗಳನ್ನು ಸಾಧಿಸಿವೆ. ಊಳಿಗಮಾನ್ಯ ಪದ್ಧತಿಯ ಯುಗದಲ್ಲಿ ಉಂಟಾಗಿದ್ದ ಅರಾಜಕತೆಯನ್ನು ಹೋಗಲಾಡಿಸಿ, ಶಾಂತಿ ಮತ್ತು ರಾಜಕೀಯ ಸುವ್ಯವಸ್ಥೆಯನ್ನು ತಂದದ್ದು ಈ ಕಾಲದ ರಾಜರ ಪ್ರಮುಖ ಸಾಧನೆಗಳಲ್ಲಿ ಒಂದಾಗಿದೆ. ಅಲ್ಲದೆ ಅನೇಕ ದೇಶಗಳಲ್ಲಿ ಜೀತಪದ್ಧತಿ ರದ್ದಾಯಿತು ಮತ್ತು ಆರ್ಥಿಕ ಪ್ರಗತಿಗೆ ಅವಕಾಶವಾಯಿತು. ರಾಷ್ಟ್ರಪ್ರಭುತ್ವಗಳಲ್ಲಿ ಇದ್ದ ಪ್ರಜೆಗಳಿಗೆ ತಮ್ಮ ತಮ್ಮ ಪ್ರದೇಶಗಳಲ್ಲಿ ತಮ್ಮದೇ ಆದ ಭಾಷೆಗಳನ್ನು ಮತ್ತು ವಿಶಿಷ್ಟ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಸದವಕಾಶ ದೊರಕಿತು.

## ಅಭ್ಯಾಸ

**I. ಸಂಕ್ಷೇಪವಾಗಿ ಉತ್ತರಿಸಿ.**

1. ವಾಸ್ಕೋಡಗಾಮ ಕ್ಯಾಲಿಕಟ್ ತಲುಪಿದ್ದು ಹೇಗೆ ?
2. ಕೊಲಂಬಸನ ನೌಕಾಯಾತ್ರೆಯನ್ನು ವಿವರಿಸಿ.
3. ಮೆಗಲನ್ನನ ಅನ್ವೇಷಣೆಯ ಮಹತ್ವವೇನು ?

**II. ಇವುಗಳನ್ನು ಹೊಂದಿಸಿ.**

| | |
|---|---|
| ಮಾರ್ಕೊಪೋಲೊ | ಫಿಲಿಪ್ಪೈನ್ಸ್ |
| ಝಮೊರಿನ್ | ಹದಿಮೂರನೇ ಶತಮಾನ |
| ರಾಣಿ ಇಸಾಬೆಲ್ಲಾ | ವಾಸ್ಕೋಡಗಾಮ |
| ಹೊಸ ಜಗತ್ತು | ಸ್ಪೇನ್ |
| ಮೆಗಲನ್ | ಅಮೆರಿಗೊ ವೆಸ್ ಪುಚ್ಚಿ |

**III. ಭರ್ತಿ ಮಾಡಿ.**

1. ಶಾಂತಸಾಗರವನ್ನು ಕಂಡುಹಿಡಿದವನು......
2. ವ್ಯಾಪಾರದ ನಂತರ ಬಂದದ್ದು........

**IV. ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ.**

1. ಪುನರುಜ್ಜೀವನ ಎಂದರೇನು ?

2. ಕಾನ್‌ಸ್ಟಾಂಟಿನೋಪಲ್ಲಿನ ಪತನವು ಜ್ಞಾನಪ್ರಸಾರಕ್ಕೆ ಹೇಗೆ ಸಹಾಯಕವಾಯಿತು ?
3. ಪುನರುಜ್ಜೀವನ ಯುಗದಲ್ಲಿ ಮಾನವೀಯತೆಯನ್ನು ಪ್ರತಿಪಾದಿಸಿದವನಾರು ?
4. ಇಲಿಯಡ್ ಮತ್ತು ಒಡಿಸ್ಸಿಗಳನ್ನು ಲ್ಯಾಟಿನ್ ಭಾಷೆಗೆ ಅನುವಾದಿಸಿದವರು ಯಾರು ?
5. ಪುನರುಜ್ಜೀವನ ಯುಗದ ಪ್ರಮುಖ ಪ್ರಯೋಜನಗಳಾವುವು ? ಮಹತ್ವದ ಕೃತಿಗಳಾವುವು ?
6. ಮತ ಸುಧಾರಣೆ ಎಂದರೇನು ? (ಪ್ರೊಟೆಸ್ಟೆಂಟಿಸಮ್) ಪ್ರತಿಭಟನಾವಾದಿ ಗುಂಪಿನ ಮುಖಂಡನು ಯಾರು ?
7. ಪ್ರತಿ ಸುಧಾರಣಾವಾದವು (ಕೌಂಟರ್ ರೆಫರ್ಮೇಷನ್) ರೋಮನ್ ಕ್ಯಾಥೊಲಿಕ್ ಚರ್ಚನ್ನು ಬಲಪಡಿಸುವುದರಲ್ಲಿ ಹೇಗೆ ಸಹಾಯಕವಾಯಿತು ?
8. 'ರಾಜರ ದೈವದತ್ತ ಹಕ್ಕು' ತತ್ವವನ್ನು ಇಂಗ್ಲೆಂಡಿನಲ್ಲಿ ಪುರಸ್ಕರಿಸಿದವನು ಯಾರು ?
9. ರಾಷ್ಟ್ರೀಯತೆಯನ್ನು ಬೆಳಗಿಸಿದ ಆಸ್ಟ್ರಿಯನ್ ರಾಜರುಗಳ ಹೆಸರೇನು ?

**V. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ವೈಜ್ಞಾನಿಕ ಅನ್ವೇಷಣೆಯಲ್ಲಿ ಕೆಳಕಂಡ ವಿಜ್ಞಾನಿಗಳ ಕೊಡುಗೆ ಏನು ?
   ಅ) ಕೊಪರ್ನಿಕಸ್
   ಆ) ಕೆಪ್ಲರ್
   ಇ) ಗೆಲಿಲಿಯೋ
   ಈ) ಐಸಾಕ್ ನ್ಯೂಟನ್
   ಉ) ವಿಲಿಯಮ್ ಹಾರ್ವೆ
2. ಮತಸುಧಾರಣಾ ಚಳುವಳಿಗೆ ಕಾರಣಗಳಾವುವು ?
3. ಯೂರೋಪಿನಲ್ಲಿ ಊಳಿಗಮಾನ್ಯ ಪದ್ಧತಿ (ಸರಂಜಾಮೀ ಪದ್ಧತಿ) ಯ ಅವನತಿಗೆ ಕಾರಣವಾದ ಅಂಶಗಳನ್ನು ನಿರೂಪಿಸಿ.
4. ಹದಿನೆಂಟನೆಯ ಶತಮಾನದಲ್ಲಿ ಪೀಟರ್ ಮಹಾಶಯನು ರಷ್ಯಾ ದೇಶವನ್ನು ಪ್ರಬಲ ರಾಷ್ಟ್ರವಾಗಿ ಮಾಡಿದ್ದು ಹೇಗೆ ?

**VI. ಎರಡನ್ನು ಹೊಂದಿಸಿ.**

| ಅ | ಆ |
|---|---|
| ಎರಾಸ್ಮಸ್ | ಮತಸುಧಾರಣೆ |
| ಐಸಾಕ್ ನ್ಯೂಟನ್ | ಕ್ರೈಸ್ತರು |
| ಜಾನ್‌ವೈಕ್ಲಿಫ್ | ಉಟೋಪಿಯಾ |
| ಧರ್ಮಯುದ್ಧ | ಗುರುತ್ವಾಕರ್ಷಣ |
| | ಡಚ್ ಬರಹಗಾರ |

VII. **ಇವುಗಳನ್ನು ಭರ್ತಿ ಮಾಡಿ.**

1. ಪುನರುಜ್ಜೀವನ ತತ್ವವನ್ನು ಇಟಲಿಯಲ್ಲಿ ಹರಡಿದ ಮೊದಲ ಸ್ಥಳವೆಂದರೆ.........
2. ಪ್ರತಿಸುಧಾರಣಾ ವಾದದ ಮುಖಂಡನಾರೆಂದರೆ.....
3. ಹನ್ನೊಂದನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಪ್ರಬಲ ರಾಜ್ಯಾಡಳಿತವನ್ನು ಸ್ಥಾಪಿಸಿದವನು ........
4. ನೂರು ವರ್ಷಗಳ ಯುದ್ಧ ನಡೆದದ್ದು........ ಮತ್ತು....... ದೇಶಗಳ ನಡುವೆ.
5. ನೂರು ವರ್ಷಗಳ ಯುದ್ಧದ ನಂತರ........ ತಮ್ಮ ಪರಮಾಧಿಕಾರವನ್ನು ಸ್ಥಾಪಿಸಿದರು.

# 4. ಮಧ್ಯಕಾಲೀನ ಭಾರತ

## ಮಹಮದ್ ಘಜ್ನಿ ಮತ್ತು ಮಹಮದ್ ಘೋರಿ – ಇವರ ದಂಡಯಾತ್ರೆಗಳು

ಮುಸ್ಲಿಂ ಸಾಮ್ರಾಜ್ಯ ಸ್ಥಾಪನೆಗೆ ಮುಂಚೆ ಭಾರತವು ವಾಯವ್ಯ ಭಾಗದಿಂದ ಹಲವಾರು ಆಕ್ರಮಣಗಳಿಗೆ ಒಳಗಾಯಿತು. ಮಹಮದ್ ಘಜ್ನಿಯ ಹಾಗೂ ಮಹಮದ್ ಘೋರಿಯ ದಂಡಯಾತ್ರೆಗಳು ಭಾರತದಲ್ಲಿ ಮುಸ್ಲಿಂ ಆಧಿಪತ್ಯಕ್ಕೆ ತಳಹದಿಯನ್ನು ಹಾಕಿಕೊಟ್ಟವು.

ಮಹಮದ್ ಘಜ್ನಿ ಕ್ರಿ.ಶ. 997ರಲ್ಲಿ ಆಫ್‌ಘಾನಿಸ್ತಾನದಲ್ಲಿ ಪಟ್ಟಕ್ಕೆ ಬಂದನು. ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ನಂತರ ಕ್ರಿ.ಶ. 1000ರಿಂದ 1027ರ ಅವಧಿಯಲ್ಲಿ ಅವನು ಹದಿನೇಳು ಬಾರಿ ಭಾರತದ ಮೇಲೆ ಆಕ್ರಮಣ ನಡೆಸಿದನು.

ಕೆಲವು ಪ್ರಮುಖ ದಂಡಯಾತ್ರೆಗಳು ಇಂತಿವೆ:

### ಜಯಪಾಲನ ವಿರುದ್ಧ ಯುದ್ಧ

1001ರಲ್ಲಿ ಮಹಮದ್ ಘಜ್ನಿಯು ಜಯಪಾಲನ ವಿರುದ್ಧ ದಂಡೆತ್ತಿ ಬಂದನು. ಜಯಪಾಲನ ಮಗನಾದ ಆನಂದಪಾಲನು ಉಜ್ಜಯಿನಿ, ಗ್ವಾಲಿಯರ್, ಕಲಿಂಜರ್, ಕನೋಜ್, ದೆಹಲಿ ಮತ್ತು ಅಜ್ಮೀರ್‌ಗಳ ರಜಪೂತ ರಾಜರುಗಳೊಂದಿಗೆ ಸೇರಿ ಯುದ್ಧ ಮಾಡಿದನು. ಆದರೆ ಈ ಸಂಯುಕ್ತ ಸೇನೆಯನ್ನು ದಾಳಿಕಾರ ಮಹಮದ್ ಘಜ್ನಿ ಕ್ರಿ.ಶ. 1008ರಲ್ಲಿ ಧೂಳೀಪಟ ಮಾಡಿದನು.

### ಕಾಂಗ್ರಾ ಮುತ್ತಿಗೆ

ಕ್ರಿ.ಶ. 1009ರಲ್ಲಿ ಮಹಮದ್ ಘಜ್ನಿಯು ಲಾಹೋರಿನ ಬಳಿ ಇರುವ ಕಾಂಗ್ರಾ (ನಾಗರ ಕೋಟೆ)ಗೆ ಮುತ್ತಿಗೆ ಹಾಕಿ ಅಲ್ಲಿಯ ಸಂಪದ್ಭರಿತ ದೇವಾಲಯಗಳನ್ನು ಲೂಟಿ

ಮಾಡಿದನು. ತನ್ನ ಸಂಪತ್ತಿನ ದಾಹವನ್ನು ತಣಿಸಿಕೊಳ್ಳಲು ಕ್ರಿ.ಶ. 1009 ರಿಂದ 1019ರವರೆಗೆ ಅನೇಕ ದಂಡಯಾತ್ರೆಗಳನ್ನು ಮಾಡಿ ಯಶಸ್ವಿಯಾದನು. ಸ್ಥಾನೇಶ್ವರ, ಮಥುರಾ, ಕನೋಜ್‌ಗಳು ಅವನ ದಾಳಿಗೆ ತುತ್ತಾಗಿ ನೂರಾರು ದೇವಾಲಯಗಳು ನಾಶಹೊಂದಿದವು.

**ಕ್ರಿ.ಶ. 1024ರ ಸೋಮನಾಥ ದೇವಾಲಯದ ಮುತ್ತಿಗೆ**

ಮಹಮದ್ ಘಜ್ನಿಯ ಮಹತ್ವದ ದಾಳಿಗಳಲ್ಲಿ ಸೋಮನಾಥ ದೇವಾಲಯದ ದಾಳಿಯೂ ಒಂದು. ಕಾಥೇವಾಡದ ದಕ್ಷಿಣ ತುದಿಯಲ್ಲಿರುವ ಸೋಮನಾಥ ದೇವಾಲಯ ಅತ್ಯಂತ ಮಹತ್ವದ ಹಿಂದೂ ದೇವಾಲಯಗಳಲ್ಲಿ ಒಂದಾಗಿತ್ತು. ಅನುಪಮ ಸೌಂದರ್ಯದಿಂದಲೂ, ಅಪಾರ ಸಂಪತ್ತಿನಿಂದಲೂ ಕಂಗೊಳಿಸುತ್ತಿದ್ದ ದೇವಾಲಯ ಇದು. ಈ ದೇವಾಲಯವನ್ನು ಮುತ್ತಿ ಸಂಪತ್ತನ್ನು ಕೊಳ್ಳೆಹೊಡೆದ ಘಜ್ನಿಯು ದೇವಾಲಯದ ಮೂರ್ತಿಯನ್ನು ನಾಶಪಡಿಸಿದನು.

**ಮಹಮದ್ ಘಜ್ನಿಯ ಕೊನೆಯ ದಂಡಯಾತ್ರೆ (1026–27)**

ಈತನ ಕೊನೆಯ ಮುತ್ತಿಗೆ ನಡೆದದ್ದು ಪಂಜಾಬಿನ ಜಾಟರ ಮೇಲೆ, ಅಪಾರ ಸಂಖ್ಯೆಯ ಜಾಟರನ್ನು ಕೊಂದು ಹಾಕಿದನು. ಇದರೊಂದಿಗೆ ಮಹಮದ್ ಘಜ್ನಿಯ ಕೊಳ್ಳೆಯ ಕಾರ್ಯ ಮುಗಿಯಿತು. ಮೂರು ವರ್ಷಗಳ ನಂತರ ಕ್ರಿ.ಶ. 1030ರಲ್ಲಿ ತನ್ನ ಐವತ್ತೊಂಬತ್ತನೆಯ ವಯಸ್ಸಿನಲ್ಲಿ ಮಹಮದ್ ಘಜ್ನಿ ತೀರಿಕೊಂಡನು.

ಮಹಮ್ಮದ್ ಘಜ್ನಿಯ ಮುಖ್ಯ ಆಶಯವೆಂದರೆ ಭಾರತದ ಅಪಾರ ಸಂಪತ್ತನ್ನು ದೋಚುವುದೇ ಆಗಿತ್ತು. ಈತನ ದಾಳಿಯಿಂದಾಗಿ ಭಾರತದ ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಭಾರಿ ಹೊಡೆತ ಬಿದ್ದಿತು.

ಮಹಮದ್ ಘಜ್ನಿ ಒಬ್ಬ ಪ್ರಬಲ ಸೇನಾನಿಯಾಗಿದ್ದ. ಆತನಿಗೆ ಕಾವ್ಯ ಮತ್ತು ಸಂಗೀತಗಳಲ್ಲಿ ಅಪಾರ ಆಸಕ್ತಿಯಿತ್ತು. ಫಿರ್ದೌಸಿ, ಆಲ್ ಬೆರೂನಿ, ಬೈಹಾಕಿ ಮತ್ತು ಉನ್ ಸಾರಿ ಮೊದಲಾದ ವಿದ್ವಾಂಸರಿಗೆ ಈತನು ಆಶ್ರಯವಿತ್ತಿದ್ದನು. ಭಾರತದಿಂದ ಕೊಳ್ಳೆ ಹೊಡೆದು ತಂದ ಅಪಾರ ಸಂಪತ್ತಿನಿಂದ ಆತನು ಘಜ್ನಿಯಲ್ಲಿ ಅಪಾರ ಸಂಖ್ಯೆಯಲ್ಲಿ ಅರಮನೆಗಳನ್ನು, ಮಸೀದಿಗಳನ್ನು, ವಿದ್ಯಾಮಂದಿರಗಳನ್ನು ಕಟ್ಟಿಸಿದನು.

ಈತ ಸಾಮ್ರಾಜ್ಯವನ್ನು ಕಟ್ಟುವ ಮನೋಭಾವದವನಾಗಿರಲಿಲ್ಲ.

**ಮಹಮದ್ ಘೋರಿಯ ದಾಳಿಗಳು**

ಕ್ರಿ.ಶ. 1173ರಲ್ಲಿ ಮಹಮದ್ ಘೋರಿ ಎಂದು ಇತಿಹಾಸದಲ್ಲಿ ಪ್ರಖ್ಯಾತನಾಗಿರುವ ಮುಯಿಜುದೀನ್ ಮಹಮದ್ ಎಂಬುವನು ಘಜ್ನಿಯ ದೊರೆಯಾಗಿ ಪಟ್ಟಕ್ಕೆ ಬಂದನು. ಘಜ್ನಿ ಮಹಮದನು ಗೆದ್ದಿದ್ದ ಪಂಜಾಬ್ ಪ್ರಾಂತಕ್ಕೂ ತಾನೇ ಉತ್ತರಾಧಿಕಾರಿ ಎಂಬಂತೆ ವರ್ತಿಸಿದನು. ಭಾರತದ ವಾಯುವ್ಯದಲ್ಲಿರುವ ಊಚ್ ಎಂಬ ಭದ್ರನೆಲೆಯನ್ನು ವಶಪಡಿಸಿಕೊಂಡನು. ಅನ್ಹಿಲ್‌ವಾಡಕ್ಕೂ ಮುತ್ತಿಗೆ ಹಾಕಿದನು. ಆದರೆ ರಜಪೂತ ದೊರೆ ಇಮ್ಮಡಿ ಭೀಮದೇವನಿಂದ ಸೋಲನ್ನನುಭವಿಸಿದನು. ಸ್ವಲ್ಪ

ಕಾಲದಲ್ಲೇ ಸಾಧನ, ಸಂಪತ್ತಿಯನ್ನು ಕಲೆಹಾಕಿ ಖುಸ್ರೊಮಲ್ಲಿಕ್‌ನನ್ನು ಸೋಲಿಸಿ ಪೇಷಾವರ್‌ನ್ನು ಗೆದ್ದುಕೊಂಡನು. ಸಿಂಧ್ ಪ್ರಾಂತದ ಒಡೆಯನಾದನು. ಕ್ರಿ.ಶ. 1186ರಲ್ಲಿ ಖುಸ್ರೊ ಮಲ್ಲಿಕ್‌ನಿಂದ ಲಾಹೋರನ್ನು ಗೆದ್ದುಕೊಂಡನು. ಹೀಗೆ ಸಿಂಧ್ ಮತ್ತು ಮುಲ್ತಾನ್‌ಗಳ ಪ್ರಭುವಾಗಿ ಈ ರಾಜ್ಯಗಳಲ್ಲಿ ಸೈನಿಕ ಠಾಣೆಗಳನ್ನೂ ಸ್ಥಾಪಿಸಿದನು.

ದೆಹಲಿ, ಅಜ್ಮೀರಗಳ ಬಲಿಷ್ಠ ದೊರೆ ಪೃಥ್ವೀರಾಜ್ ಚೌಹಾನ್ ತನ್ನ ರಾಜ್ಯದ ಪಕ್ಕದಲ್ಲಿ ಶಕ್ತಿಯುತ ಇಸ್ಲಾಂ ರಾಜ್ಯದ ಉದಯವನ್ನು ಸಹಿಸಲಿಲ್ಲ. ಕ್ರಿ.ಶ. 1191ರಲ್ಲಿ ತರೈನಲ್ಲಿ ನಡೆದ ಮೊದಲ ಯುದ್ಧದಲ್ಲಿ ಅವನು ಮಹಮದ್ ಘೋರಿಯನ್ನು ಸೋಲಿಸಿದನು. ಮುಂದೆ ಒಂದು ವರ್ಷದಲ್ಲಿ ಘೋರಿಯು, ಭಾರಿ ಸೇನೆಯೊಂದಿಗೆ ಬಂದು ಕ್ರಿ.ಶ. 1192ರಲ್ಲಿ ಅದೇ ತರೈನಲ್ಲಿ ಪೃಥ್ವಿರಾಜನನ್ನು ಕೊಂದು ಅನೇಕ ದೇವಾಲಯಗಳನ್ನು ನಾಶಪಡಿಸಿದನು. ಅನಂತರ ತನ್ನ ನಿಷ್ಠಾವಂತ ಗುಲಾಮನಾದ ಕುತ್ಬುದೀನ್ ಐಬಕ್ ಎಂಬಾತನಿಗೆ ತಾನು ಗೆದ್ದ ರಾಜ್ಯಗಳ ನಿರ್ವಹಣೆಯ ಕೆಲಸವನ್ನು ಒಪ್ಪಿಸಿ ತನ್ನ ದೇಶಕ್ಕೆ ಹೊರಟುಹೋದನು. ಆ ಅವಧಿಯಲ್ಲಿ ಐಬಕನು ಮೀರಟ್, ಬರಾನ್, ಆಲಿಘಡ, ದೆಹಲಿಗಳನ್ನು ಗೆದ್ದುಕೊಂಡನು. ಮಹಮದ್ ಘೋರಿಯು 1194ರಲ್ಲಿ ಮತ್ತೆ ಭಾರತಕ್ಕೆ ಬಂದು ಕನೋಜಿನ ದೊರೆ ಜಯಚಂದ್ರನನ್ನು ಚಾಂದ್ವಾರದ ಯುದ್ಧದಲ್ಲಿ ಸೋಲಿಸಿದನು. ವಾರಾಣಾಸಿಯನ್ನು ಕೊಳ್ಳೆ ಹೊಡೆದು ಕನೋಜನ್ನು ಆಕ್ರಮಿಸಿದನು.

## ಗುಜರಾತ್ ಬುಂದೇಲ್‌ಖಂಡಗಳ ಮುತ್ತಿಗೆ

ಐಬಕ್ ಗುಜರಾತ್, ಬುಂದೇಲ್‌ಖಂಡಗಳ ವಿಜಯಯಾತ್ರೆಯ ಸಡಗರದಲ್ಲಿ ಇದ್ದಾಗ ಭಕ್ತಿಯಾರ್ ಖಿಲ್ಜಿ ಎಂಬ, ಘೋರಿಯ ಇನ್ನೊಬ್ಬ ದಂಡನಾಯಕನು ಪೂರ್ವದಲ್ಲಿ ಬಂಗಾಳ, ಬಿಹಾರಗಳನ್ನು ಗೆದ್ದುಕೊಂಡನು. ಈ ಘಟ್ಟದಲ್ಲಿ ಮುಸ್ಲಿಮರು ಉತ್ತರ ಭಾರತದ ನಿರ್ವಿವಾದಿತ ಪ್ರಭುಗಳಾಗಿ ಉಳಿದರು.

ಮಹಮದ್ ಘೋರಿ ಕ್ರಿ.ಶ. 1206ರಲ್ಲಿ ತೀರಿಕೊಂಡನು. ಇವನಿಗೆ ಗಂಡು ಸಂತಾನವಿಲ್ಲದುದರಿಂದ ಭಾರತದ ಪ್ರಭುತ್ವವು ಅವನ ಮಾಂಡಲಿಕ ಕುತ್ಬುದೀನನ ವಶಕ್ಕೆ ಬಂದಿತು. ಈತನಿಂದ ಗುಲಾಮೀ ಸಂತತಿ ಆರಂಭಗೊಂಡಿತು. ಮಹಮದ್ ಘೋರಿ ವಾಸ್ತವವಾಗಿ ಭಾರತದಲ್ಲಿ ಮುಸ್ಲಿಂ ಸಾಮ್ರಾಜ್ಯದ ಸಂಸ್ಥಾಪಕ. ಮುಸ್ಲಿಂ ಸಾಮ್ರಾಜ್ಯವನ್ನು ಸ್ಥಾಪಿಸುವುದೇ ಈತನ ಗುರಿಯಾಗಿತ್ತು. ಈತ ಕಾರ್ಯನಿರತ ಮುತ್ಸದ್ದಿಯಾಗಿದ್ದು ತನ್ನ ಎಲ್ಲ ಯೋಜನೆಗಳನ್ನು ಯಶಸ್ವಿಯಾಗಿ ನೆರವೇರಿಸಿದನು. ಈತನ ದಿಗ್ವಿಜಯದಿಂದಾಗಿ ಉತ್ತರ ಭಾರತದಲ್ಲಿ ಟರ್ಕಿಯರ ಆಡಳಿತಕ್ಕೆ ತಳಹದಿ ಹಾಕಿದಂತಾಯಿತು.

## ಅಭ್ಯಾಸ

**I. ಈ ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಿ.**

1. ಮಹಮದ್ ಘಸ್ನಿ ಯಾರು ?
2. ಮಹಮದ್ ಘಸ್ನಿಯ ಪ್ರಮುಖ ಸೇನಾ ದಾಳಿಗಳ ವಿಷಯವಾಗಿ ಬರೆಯಿರಿ.
3. ಮಹಮದ್ ಘೋರಿಯ ಪ್ರಮುಖ ಆಕ್ರಮಣಗಳು ಕುರಿತು ಬರೆಯಿರಿ.
4. ಮಹಮದ್ ಘಸ್ನಿ ಹಾಗೂ ಘೋರಿ ಇವರುಗಳ ಭಾರತದ ಆಕ್ರಮಣಗಳ ಫಲಿತಾಂಶವೇನು ? ಇದರಲ್ಲಿ ಕುತ್ಬುದೀನ್ ಐಬಕನ ಪಾತ್ರವೇನು ?

**II. ಹೊಂದಿಸಿ ಬರೆಯಿರಿ.**

| ಅ | ಆ |
|---|---|
| 1. ಸೋಮನಾಥ ದೇವಾಲಯ | 1. ಕ್ರಿ.ಶ. 1192 |
| 2. ಘಸ್ನಿ ಮಹಮದ್ | 2. ಕ್ರಿ.ಶ. 1024 |
| 3. ಒಂದನೇ ತರೈನ್ ಯುದ್ಧ | 3. ಕ್ರಿ.ಶ. 997 |
| 4. ಎರಡನೇ ತರೈನ್ ಯುದ್ಧ | 4. ಕ್ರಿ.ಶ. 1191 |
| | 5. ಕ್ರಿ.ಶ. 1009 |

**III. ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದ ತುಂಬಿರಿ.**

1. ಗುಲಾಮೀ ಸಂತತಿಯ ಸಂಸ್ಥಾಪಕ.....
2. ಮಹಮಡ್ ಘಸ್ನಿಯ ಮಗ ಭಾರತದ ಮೇಲೆ ...... ಬಾರಿ ಆಕ್ರಮಣ ನಡೆಸಿದನು
3. ತರೈನಿನ ಎರಡನೆಯ ಯುದ್ಧವು ನಡೆದದ್ದು ಕ್ರಿ.ಶ. ....... ರಲ್ಲಿ
4. ಘಸ್ನಿ ಮಹಮದನು...... ವರ್ಷದಲ್ಲಿ ಸೋಮನಾಥದ ಮೇಲೆ ದಂಡೆತ್ತಿ ಬಂದಿದ್ದನು.

# ರಜಪೂತರ ಉದಯ ಮತ್ತು ಅವರ ಕೊಡುಗೆ

ಕ್ರಿ.ಶ. 647ರಲ್ಲಿ ಹರ್ಷವರ್ಧನನು ಕಾಲವಾದ ಮೇಲೆ ಉತ್ತರ ಭಾರತದಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳು ಸ್ಥಾಪನೆಗೊಂಡವು. ಈ ರಾಜ್ಯಗಳೆಲ್ಲ ರಜಪೂತರೆಂದು ಹೆಸರು ಪಡೆದ ಕ್ಷತ್ರಿಯ ಯೋಧರ ನೆಲೆಗಳಾಗಿದ್ದವು. ಭಾರತದ ಇತಿಹಾಸದಲ್ಲಿ ಕ್ರಿ.ಶ. 647ರಿಂದ 1200ರ ಅವಧಿಯನ್ನು ರಜಪೂತ ಯುಗ ಎಂದು ಕರೆಯಲಾಗಿದೆ. ತಾವು ಯಜ್ಞಕುಂಡದಿಂದ ಬಂದವರೆಂದು ರಜಪೂತ ಶಾಖೆಯ ಕೆಲವರು ತಮ್ಮ ಮೂಲವನ್ನು ಗುರುತಿಸಿಕೊಳ್ಳುತ್ತಾರೆ. ಅವರು ತಮ್ಮನ್ನು ಅಗ್ನಿಕುಲ ರಜಪೂತರೆಂದು ಕರೆದುಕೊಳ್ಳುತ್ತಿದ್ದರು.

# 33

# ರಜಪೂತ ವಂಶಗಳು

## ದೆಹಲಿ ಮತ್ತು ಅಜ್ಮೀರಗಳ ಚೌಹಾನರು

ಮೂಲತಃ ಪೂರ್ವ ರಾಜಸ್ಥಾನದವರಾದ ಚೌಹಾನರು ದೆಹಲಿ ಅಜ್ಮೀರಗಳನ್ನು ಆಕ್ರಮಿಸಿಕೊಂಡರು. ಈ ಸಂತತಿಯ ಪ್ರಸಿದ್ಧ ಸಾಮ್ರಾಟನೆಂದರೆ ಪೃಥ್ವೀರಾಜ ಚೌಹಾನ. ತರೈನ್‌ನಲ್ಲಿ ನಡೆದ ಪ್ರಥಮ ಸಂಗ್ರಾಮದಲ್ಲಿ ಈತನು ಮಹಮ್ಮದ್ ಘೋರಿಯನ್ನು ಸೋಲಿಸಿದನು. 'ಪೃಥ್ವೀರಾಜ ರಾಸೊ' ಎಂಬ ಮಹಾಕಾವ್ಯದಲ್ಲಿ ಚಾಂದ್ ಬರ್ದಾಯ್ ಎಂಬ ಕವಿ ಪೃಥ್ವೀರಾಜನ ಸೇನಾ ಸಾಧನೆಗಳನ್ನು ವಿವರಿಸಿದ್ದಾನೆ. ಕ್ರಿ.ಶ. 1197ರಲ್ಲಿ ತರೈನ್‌ನಲ್ಲಿ ನಡೆದ ಎರಡನೆಯ ಸಂಗ್ರಾಮದಲ್ಲಿ ಮಹಮದ್ ಘೋರಿಯು ಈತನನ್ನು ಸೋಲಿಸಿ ಕೊಂದುಹಾಕಿದನು.

## ರಾಥೋಡರು ಅಥವಾ ಗಹದ್ವಾಲರು (ಕ್ರಿ.ಶ. 1090–1194)

ಕ್ರಿ.ಶ. 1090ರಲ್ಲಿ ಗಹದ್ವಾಲ ರಜಪೂತರು ಕನೋಜನ್ನು ಆಕ್ರಮಿಸಿದರು. ಮುಂದೆ ಅವರು ವಾರಾಣಸಿ, ದೆಹಲಿ, ಅಯೋಧ್ಯೆಗಳನ್ನು ತಮ್ಮ ಸಾಮ್ರಾಜ್ಯದೊಳಗೆ ಸೇರಿಸಿಕೊಂಡರು. ಕನೋಜ್ ಸಾಮ್ರಾಜ್ಯದ ವೈಭವವನ್ನು ಸ್ಥಾಪಿಸಿದವನೆಂದರೆ ಕ್ರಿ.ಶ. 1100 ರಲ್ಲಿ ಕನೋಜಿನ ಸಮ್ರಾಟನಾಗಿದ್ದ ಗೋವಿಂದ ಚಂದ್ರ ಎಂಬಾತ. ಈ ವಂಶದ ಕೊನೆಯ ಪ್ರಸಿದ್ಧ ದೊರೆಯೆಂದರೆ ಜಯಚಂದ್ರ. ಇವನ ಮಗಳು ಸಂಯುಕ್ತೆ. ಅಜ್ಮೀರದ ಪೃಥ್ವೀರಾಜ ಚೌಹಾನನು ಈಕೆಯನ್ನು ಅಪಹರಿಸಿಕೊಂಡು ಹೋಗಿದ್ದನು. ಕ್ರಿ.ಶ. 1194ರಲ್ಲಿ ಮಹಮದ್ ಘೋರಿಯು ಜಯಚಂದ್ರನನ್ನು ಸೋಲಿಸಿ, ಕೊಂದು ವಾರಾಣಾಸಿಯನ್ನು ಕೊಳ್ಳೆ ಹೊಡೆದನು.

## ಪರಮಾರರು

ಪರಮಾರರು ಮಾಳವದ ಅಧಿಪತಿಗಳು. ಈ ಸಂತತಿಯ ಪ್ರಸಿದ್ಧ ದೊರೆ ರಾಜಭೋಜ (ಕ್ರಿ.ಶ. 1018–1060). ಧಾರಾನಗರ ಈತನ ರಾಜಧಾನಿಯಾಗಿತ್ತು. ಈತ ಮಹಾಯೋಧನಾಗಿದ್ದನು. ಪ್ರಸಿದ್ಧವಾದ 'ಭೋಪಾಲ್' ನಗರದ ಸ್ಥಾಪಕ ಈತನೇ. ಭೋಜಪುರ ಸರೋವರವನ್ನು ಕಟ್ಟಿದ ಕೀರ್ತಿಯೂ ಇವನಿಗೇ ಸಲ್ಲುತ್ತದೆ. ಈತನು 108 ದೇವಾಲಯಗಳನ್ನು ಕಟ್ಟಿಸಿದನೆಂದು ಹೇಳಲಾಗಿದೆ. ಈತ ಪ್ರಸಿದ್ಧ ವಿದ್ವಾಂಸನಾಗಿದ್ದುದೇ ಅಲ್ಲದೆ ಅನೇಕ ವಿದ್ವಾಂಸರಿಗೆ ಆಶ್ರಯವಿತ್ತನು.

## ಚಾಂದೇಲರು

ಆರಂಭದಲ್ಲಿ ಇವರು ಛತ್ರಪುರದ ಪಾಳೆಯಗಾರರಾಗಿದ್ದರು. ಈ ಸಂತತಿಯಲ್ಲಿ ಢಂಗ ಎಂಬಾತ ಪ್ರಸಿದ್ಧ ದೊರೆ. ಜಗತ್ ಪ್ರಸಿದ್ಧವಾಗಿರುವ ಖಜುರಾಹೊ ದೇವಾಲಯವನ್ನು ಈತನೇ ಕಟ್ಟಿಸಿದನೆಂದು ಹೇಳಲಾಗಿದೆ. ಚಾಂದೇಲರು ಕುತ್ಬುದೀನ್ ಐಬಕ್‌ನಿಗೆ ಸೋತು ರಾಜ್ಯವನ್ನು ಕಳೆದುಕೊಂಡರು.

### ಬಂಗಾಳದ ಪಾಲರು

ಹರ್ಷವರ್ಧನನು ತೀರಿಕೊಂಡ ಒಂದು ನೂರು ವರ್ಷಗಳ ಬಳಿಕ ಪಾಲರು ಬಂಗಾಳದಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರು. ಗೋಪಾಲ (ಕ್ರಿ.ಶ. 750–770) ಈ ವಂಶದ ಸಂಸ್ಥಾಪಕ. ಈತನ ಮಗನಾದ ಧರ್ಮಪಾಲನು (ಕ್ರಿ.ಶ. 790–815) ಸಮಸ್ತ ಬಿಹಾರ್ ಹಾಗೂ ಬಂಗಾಳ ಪ್ರಾಂತಗಳನ್ನು ಗೆದ್ದನು. ಆದರೆ ಇವನ ಉತ್ತರಾಧಿಕಾರಿಯಾದ ದೇವಪಾಲನು (ಕ್ರಿ.ಶ. 815–855) ತುಂಬ ದುರ್ಬಲ ದೊರೆಯಾಗಿದ್ದನು. ಹನ್ನೊಂದನೆಯ ಶತಮಾನದ ಕೊನೆಯ ಹೊತ್ತಿಗೆ ಸೇನರು ಬಂಗಾಳವನ್ನು ಆಕ್ರಮಿಸಿದರು. ಮುಂದೆ ಮಹಮ್ಮದ್ ಘೋರಿಯ ದಂಡನಾಯಕನಾದ ಭಕ್ತಿಯಾರ್ ಖಿಲ್ಜಿ ಬಂಗಾಳವನ್ನು ಗೆದ್ದನು.

ಮೇಲೆ ಹೇಳಿದ ರಾಜ್ಯಗಳಲ್ಲದೆ ಉತ್ತರ ಭಾರತದ ಪರ್ವತ ಪ್ರಾಂತ್ಯಗಳಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳಿದ್ದುವು.

### ರಜಪೂತರ ಕೊಡುಗೆ

ರಾಜವಂಶದ ಸ್ತ್ರೀಯರು ಸ್ವಯಂವರ ಪದ್ಧತಿಯನ್ನನುಸರಿಸಿ ಗಂಡನ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಸ್ತ್ರೀಯರು ವಿದ್ಯಾವಂತರಾಗಿದ್ದುದೇ ಅಲ್ಲದೆ ಸಾರ್ವಜನಿಕ ಚಟುವಟಿಕೆಗಳಲ್ಲೂ ಭಾಗವಹಿಸುತ್ತಿದ್ದರು. ರಜಪೂತರ ಅವಧಿಯಲ್ಲಿ ಜಾತಿ ಪದ್ಧತಿ ಬಲವಾಗಿ ಬೇರೂರಿ ಕಟ್ಟುನಿಟ್ಟಿನಿಂದ ಕೂಡಿತ್ತು. ಅನೇಕ ಹೊಸ ಜಾತಿಗಳು ಹುಟ್ಟಿಕೊಂಡವು. ಸಮಾಜದಲ್ಲಿ ಬ್ರಾಹ್ಮಣರಿಗೆ ಹಾಗೂ ಕ್ಷತ್ರಿಯರಿಗೆ ಮಹತ್ವದ ಸ್ಥಾನವಿತ್ತು. ಶಿವ, ವಿಷ್ಣು, ದುರ್ಗೆ ಮತ್ತು ಇತರ ದೇವರುಗಳನ್ನು ಆರಾಧಿಸುತ್ತಿದ್ದರು. ದಸರಾ, ದೀಪಾವಳಿ, ಹೋಳಿ ಹಬ್ಬಗಳನ್ನು ಆಚರಿಸುತ್ತಿದ್ದರು. ರಜಪೂತರು ತಮ್ಮ ರಾಷ್ಟ್ರ ಮತ್ತು ಸಂಸ್ಕೃತಿಗಳ ನಿಷ್ಠಾವಂತ ಅನುಯಾಯಿಗಳಾಗಿದ್ದರು. ಅವರು ಧೀರ ಯೋಧರು. ಪತ್ನಿ ಸಹಗಮನ (ಜೌಹರ್) ಪದ್ಧತಿ ರೂಢಿಯಲ್ಲಿತ್ತು.

### ಸಾಹಿತ್ಯ

ಸಾಹಿತ್ಯರಂಗದಲ್ಲಿ ರಜಪೂತರ ಅವಧಿಯಲ್ಲಿ ಮಹತ್ವದ ಕೃತಿಗಳು ಬೆಳಕು ಕಂಡಿವೆ. ಮುಂಜ, ಭೋಜ, ಪೃಥ್ವೀರಾಜ ಮೊದಲಾದ ರಜಪೂತ ದೊರೆಗಳು ವಿದ್ವಾಂಸರೂ, ಪ್ರಸಿದ್ಧ ಬರಹಗಾರರೂ ಆಗಿದ್ದರು. ಒಂದು ಮಹತ್ವದ ನೀತಿಗ್ರಂಥವಾದ 'ಹಿತೋಪದೇಶ' ಈ ಅವಧಿಯಲ್ಲೇ ರಚಿಸಲ್ಪಟ್ಟಿತು. ಸೋಮದೇವನೆಂಬಾತ 'ಕಥಾ ಸರಿತ್ಸಾಗರ'ವನ್ನು ಬರೆದನು. ಜಯದೇವನ 'ಗೀತಗೋವಿಂದ'ವೂ ಈ ಅವಧಿಯಲ್ಲಿ ರಚಿತವಾಯಿತು. ರಜಪೂತ ಯುಗದಲ್ಲಿನ ಒಂದು ಐತಿಹಾಸಿಕ ಮಹತ್ವದ ಕೃತಿಯೆಂದರೆ ಕಲ್ಹಣನ ರಾಜತರಂಗಿಣಿ. ಈ ಅವಧಿಯಲ್ಲಿ ಪ್ರಾಂತೀಯ ಭಾಷೆಗಳಲ್ಲೂ ಸಾಹಿತ್ಯ ರೂಪುಗೊಳ್ಳಲಾರಂಭಿಸಿತು. 'ಪೃಥ್ವೀರಾಜರಾಸೊ' ಎಂಬ ಕೃತಿಯಲ್ಲಿ ಬರ್ದಾಯಿ ಎಂಬ ಕವಿ ಪೃಥ್ವೀರಾಜ ಚೌಹಾನ್‌ನ ಪರಾಕ್ರಮವನ್ನು ವರ್ಣಿಸಿದ್ದಾನೆ.

ನಳಂದ, ವಿಕ್ರಮಶಿಲೆ, ಕಾಶಿ, ಉಜ್ಜಯಿನಿಗಳು ಉನ್ನತ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು. ಹಿಂದೂ ಸಮಾಜದ ಮೇಲು ವರ್ಗದವರೂ, ಜೈನರೂ, ಬೌದ್ಧರು

ಉಚ್ಚ ಶಿಕ್ಷಣ ಪಡೆಯುತ್ತಿದ್ದರು. ತಾಂತ್ರಿಕ ಶಿಕ್ಷಣ ಮನೆಯಲ್ಲಿ ಪಾರಂಪರಿಕವಾಗಿ ದೊರೆಯುತ್ತಿತ್ತು.

**ಶಿಲ್ಪ ಮತ್ತು ವರ್ಣಚಿತ್ರ**

ರಜಪೂತರು ಕಟ್ಟಡ ಕಾರ್ಯದಲ್ಲಿ ತುಂಬ ಪ್ರಸಿದ್ಧರಾಗಿದ್ದವರು. ಅವರು ಅನೇಕ ದೇವಾಲಯಗಳನ್ನೂ, ಕೋಟೆಗಳನ್ನೂ ಕಟ್ಟಿದ್ದಾರೆ. ಇವರು ಕಟ್ಟಿಸಿದ ದೇವಾಲಯಗಳಲ್ಲಿ ಕೆಲವು ಒಪ್ಪ ಹಾಗೂ ವಿನ್ಯಾಸಗಳ ದೃಷ್ಟಿಯಿಂದ ಅದ್ಭುತವಾಗಿವೆ. ಅವರ ತಾಂತ್ರಿಕ ಹಾಗೂ ವಾಸ್ತು ಪರಿಣತಿಗಳಿಗೆ ಸಾಕ್ಷಿಯಾಗಿ ಅವರ ಕಾಲದ ನೀರಾವರಿ ಕಾರ್ಯ, ಸ್ನಾನಘಟ್ಟಗಳ ನಿರ್ಮಾಣ, ಜಲಾಶಯ ನಿರ್ಮಾಣಗಳನ್ನು ನೋಡಬಹುದು. ರಜಪೂತರ ವಾಸ್ತುಶಿಲ್ಪ ಕುಶಲತೆಯ ಸ್ಪಷ್ಟ ಸಾಕ್ಷಿಗಳಾಗಿ ಚಿತ್ತೂರು, ರಣಥಂಬೋರ್, ಮಂಡು ಮತ್ತು ಗ್ವಾಲಿಯರ್‌ನ ಭದ್ರಕೋಟೆಗಳಿವೆ. ಅಲ್ಲದೆ ಜಯಪುರದಲ್ಲಿ ಹವಾಮಹಲನ್ನು ನೋಡಬಹುದು. ಈ ಅವಧಿಯ ಶಿಲ್ಪ ಸಾಧನೆಯ ಜೀವಂತ ಉದಾಹರಣೆಗಳೆಂದರೆ ಖಜುರಾಹೋದ ಮಹಾದೇವ ದೇವಾಲಯ ಹಾಗೂ ಅಬುಪರ್ವತದ ಜೈನ ದೇವಾಲಯಗಳು. ರಜಪೂತ ದೊರೆಗಳು ವರ್ಣಚಿತ್ರ ರಚನೆಗೂ ಪ್ರೋತ್ಸಾಹವಿತ್ತಿದ್ದರು. ರಜಪೂತ ಕಿರು ಕಲಾ ಚಿತ್ರಗಳು ಮಹಾಕಾವ್ಯ, ಪುರಾಣ ಮತ್ತು ಸಮಕಾಲೀನ ಸಮಾಜ ಜೀವನ ದೃಶ್ಯಗಳನ್ನು ನೀಡಿವೆ.

## ಅಭ್ಯಾಸ

**I. ಈ ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಿ.**

1. ಪ್ರಸಿದ್ಧ ರಜಪೂತ ರಾಜಮನೆತನಗಳು ಯಾವುವು ?
2. ಅಜ್ಮೀರದ ರಾಜರುಗಳ ಬಗೆಗೆ ಸಂಕ್ಷೇಪವಾಗಿ ತಿಳಿಸಿ.
3. ಸಾಹಿತ್ಯ ಕ್ಷೇತ್ರಕ್ಕೆ ರಜಪೂತರ ಕೊಡುಗೆ ಏನು ?
4. ವಾಸ್ತುಶಿಲ್ಪ ಹಾಗೂ ವರ್ಣಚಿತ್ರ ಕ್ಷೇತ್ರಗಳಲ್ಲಿ ರಜಪೂತರ ಕೊಡುಗೆ ಏನು ?

**II. ಇವುಗಳನ್ನು ಹೊಂದಿಸಿ.**

| | |
|---|---|
| ಮಾಳವ | ಚಾಂದೇಲ |
| ಛತ್ರಾಪುರ | ಪರಮಾರರು |
| ಸೋಮದೇವ | ವಿಶ್ವವಿದ್ಯಾಲಯ |
| ನಳಂದ | ಕೋಟೆ |

**III. ಭರ್ತಿ ಮಾಡಿ.**

1. ಪೃಥ್ವೀರಾಜನು..... ನನ್ನು ಸೋಲಿಸಿದನು.
2. ಸೋಮದೇವನು..... ಬರೆದನು.
3. ಗೀತಗೋವಿಂದವನ್ನು ರಚಿಸಿದವನು......
4. ಹವಾಮಹಲ್...... ಲ್ಲಿದೆ.
5. ಮಹಮದ್ ಘೋರಿಯ ದಂಡನಾಯಕನಾಗಿದ್ದವನು.............................

# ದೆಹಲಿಯ ಸುಲ್ತಾನ ವಂಶ

ದೆಹಲಿಯ ಸುಲ್ತಾನ ವಂಶವು ಕ್ರಿ.ಶ. 1206ರಲ್ಲಿ ಕುತ್ಬುದಿನ್ ಐಬಕ್‌ನಿಂದ ಸ್ಥಾಪನೆಗೊಂಡಿತು. ಕ್ರಿ.ಶ. 1206ರಿಂದ ಕ್ರಿ.ಶ. 1526ರವರೆಗೆ ಒಟ್ಟು ಐದು ರಾಜವಂಶಗಳು ರಾಜ್ಯವನ್ನು ಆಳಿವೆ. ಅವುಗಳೆಂದರೆ ಗುಲಾಮಿ ಸಂತತಿ, ಖಿಲ್ಜಿ ಸಂತತಿ, ತುಘಲಕ್ ಸಂತತಿ, ಸೈಯದ್ ಸಂತತಿ ಮತ್ತು ಲೋದಿ ಸಂತತಿ.

## ಗುಲಾಮಿ ವಂಶ (1206–1290)

ಮಹಮದ್ ಘೋರಿಯು ತನ್ನ ದಂಡಯಾತ್ರೆಯ ಕಾಲದಲ್ಲಿ ಭಾರತದಲ್ಲಿ ಗೆದ್ದ ಭಾಗಗಳನ್ನು ನೋಡಿಕೊಳ್ಳಲು ತನ್ನ ಗುಲಾಮನಾಗಿದ್ದ ಕುತ್ಬುದಿನ್ ಐಬಕ್‌ನನ್ನು ಮಾಂಡಳಿಕನಾಗಿ ನೇಮಿಸಿ ಹೋಗಿದ್ದನು. ಘೋರಿ ಮಹಮದನು ಕಾಲವಾದ ನಂತರ ಕುತ್ಬುದೀನನು ತಾನೇ ದೆಹಲಿಯ ಸುಲ್ತಾನನೆಂದು ಘೋಷಿಸಿಕೊಂಡನು. ಈತ ಸಮರ್ಥ



ದಂಡನಾಯಕನಾಗಿದ್ದ. ತುಂಬ ನ್ಯಾಯಪರನೂ, ಉದಾರಿಯೂ ಹೌದು. ದೆಹಲಿಯಲ್ಲಿ ಕುತುಬ್‌ಮಿನಾರಿನ ಕಟ್ಟಡದ ಕೆಲಸ ಇವನ ಕಾಲದಲ್ಲಿ ಆರಂಭಗೊಂಡಿತು. ಇಲ್ತಮಿಷ್ ಎಂಬುವವನು ಐಬಕ್‌ನ ಉತ್ತರಾಧಿಕಾರಿ. ಈತ ತನ್ನ ರಾಜ್ಯವನ್ನು ವಿಸ್ತರಿಸಿದನು. ಗ್ವಾಲಿಯರ್, ರಣಥಂಬೋರ್ ಮತ್ತು ಉಜ್ಜಯಿನಿ ರಾಜ್ಯಗಳ ರಜಪೂತ ರಾಜರುಗಳನ್ನು ಸೋಲಿಸಿದನು. ಮಂಗೋಲಿಯನ್ನರ ದಾಳಿಯನ್ನು ಹಿಮ್ಮೆಟ್ಟಿಸಿದನು. ಕುತುಬ್‌ಮಿನಾರ್ ಕಟ್ಟಡವನ್ನು ಪೂರೈಸಿದ್ದೇ ಅಲ್ಲದೆ ಕುತುಬ್ ಕಟ್ಟಡ ಶ್ರೇಣಿಗೆ ಇನ್ನೂ ಕೆಲವನ್ನು ಸೇರಿಸಿದನು. ಅಜ್ಮೀರಿನಲ್ಲಿ ಒಂದು ಭವ್ಯ ಮಸೀದಿಯನ್ನು ಕಟ್ಟಿಸಿದನು.

ಕ್ರಿ.ಶ. 1236ರಲ್ಲಿ ಇಲ್ತಿಮಿಷ್‌ನ ಮಗಳಾದ ರಜಿಯಾ ದೆಹಲಿಯ ಸುಲ್ತಾನ ಪಟ್ಟಕ್ಕೆ ಏರಿದಳು. ದೆಹಲಿಯಲ್ಲಿ ಆಳಿದ ಏಕೈಕ ಮಹಿಳೆ ಈಕೆ. ಈಕೆ ಗಂಡಸರ ವೇಷ ಧರಿಸುತ್ತಿದ್ದಳು. ಉತ್ತಮ ಕಸುವುಳ್ಳ ರಾಣಿಯಾಗಿದ್ದಳು. ಸುಲ್ತಾನ್ ರಜಿಯಾ ಮಹತ್ವದ ಸಾಮ್ರಾಜ್ಞಿ. ಆಕೆ ಬುದ್ಧಿವಂತಳೂ, ನ್ಯಾಯಪರಳೂ, ಉದಾರಿಯೂ ಆಗಿದ್ದಳು. ರಾಜ್ಯಕ್ಕೆ ಮಂಗಳಕಾರಿಯಾಗಿದ್ದಳು. ಉತ್ತಮ ತೀರ್ಪುಗಾರಳಾಗಿದ್ದಳು, ಪ್ರಜಾಪಾಲಕಿಯಾಗಿದ್ದಳು, ಸೇನೆಯ ಒಡತಿಯಾಗಿದ್ದಳು. ಆದರೆ ಈಕೆ ಹೆಂಗಸಾಗಿದ್ದ ಕಾರಣದಿಂದ ಆಸ್ಥಾನದ ಅನೇಕ ಕುಲೀನರು ಅವಳನ್ನು ದ್ವೇಷಿಸುತ್ತಿದ್ದರು. ಮುಂದೆ ಅವರು ದಂಗೆಯೆದ್ದರು. ಕ್ರಿ.ಶ. 1240ರ ಕದನದಲ್ಲಿ ಆಕೆ ಸಾವನ್ನಪ್ಪಿದಳು.

ಮುಂದಿನ ಮುಖ್ಯ ಸುಲ್ತಾನ ಘಿಯಾಸುದೀನ್ ಬಲ್ಬನ್ (1266–86) ಮಂಗೋಲರ ದಾಳಿಯಿಂದ ತನ್ನ ಸಾಮ್ರಾಜ್ಯವನ್ನು ಉಳಿಸಿಕೊಂಡವನು. ಅವ್ಯವಸ್ಥೆಗಳನ್ನೆಲ್ಲ ತುಳಿದು ರಾಜ್ಯದಲ್ಲಿ ಶಾಂತಿ ಮತ್ತು ವ್ಯವಸ್ಥೆ ನೆಲೆಸುವಂತೆ ಮಾಡಿದವನು. ದರ್ಬಾರಿನಲ್ಲಿ ವೈಭವ ಮತ್ತು ಕಳೆಗಳನ್ನು ತಂದವನು. ಈತನಿಂದ ದೆಹಲಿ ನಗರ ತುಂಬಾ ಸುಂದರವಾಯಿತು.

**ಖಿಲ್ಜಿ ಸಂತತಿ (1290–1320)**

ಬಲ್ಬನ್ನನ ಉತ್ತರಾಧಿಕಾರಿಗಳು ದೆಹಲಿಯ ಸುಲ್ತಾನಗಿರಿಯನ್ನು ಉಳಿಸಿಕೊಳ್ಳುವಷ್ಟು ಬಲಿಷ್ಠರಾಗಿರಲಿಲ್ಲ. ಕೊನೆಗೆ ಕುಲೀನರಲ್ಲೊಬ್ಬನಾದ ಜಲಾಲುದ್ದೀನ್ ಖಿಲ್ಜಿಯು 1290ರಲ್ಲಿ ಸಿಂಹಾಸನವನ್ನು ಆಕ್ರಮಿಸಿದನು.

ಖಿಲ್ಜಿ ದೊರೆಗಳಲ್ಲಿ ತುಂಬ ಪ್ರಸಿದ್ಧನಾದವನೆಂದರೆ ಅಲಾವುದ್ದೀನ್ ಖಿಲ್ಜಿ. (1296–1316) ತನ್ನ ಚಿಕ್ಕಪ್ಪನೂ ಮಾವನೂ ಆದ ಜಲಾಲುದ್ದೀನನನ್ನು ಕೊಂದು ಇವನು ಗಾದಿಯನ್ನೇರಿದನು. ಈತ ಪ್ರಚಂಡ ಯೋಧ ಹಾಗೂ ಚತುರ ಆಡಳಿತಗಾರನಾಗಿದ್ದನು. ಈತನ ಕಾಲದಲ್ಲಿ ಮಂಗೋಲಿಯನ್ನರು ಮತ್ತೆ ಮತ್ತೆ ಭಾರತದ ಮೇಲೆ ದಾಳಿ ಮಾಡಿದರು. ಪ್ರತಿಬಾರಿಯೂ ಅವರನ್ನು ಓಡಿಸಲಾಯಿತು. ಅಲಾವುದ್ದೀನನು ಗುಜರಾತ್, ರಣಥಂಬೋರ್, ಚಿತ್ತೋರು ಮೊದಲಾದ ಅನೇಕ ರಾಜ್ಯಗಳನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಆದರೆ ರಜಪೂತರು ಬಹಳ ಕಾಲ ಮುಸ್ಲಿಮರ ಅಧೀನದಲ್ಲಿ ಉಳಿಯಲಿಲ್ಲ.

ಅಲಾವುದ್ದೀನನಿಗೆ ಈ ಗೆಲುವುಗಳಿಂದ ತೃಪ್ತಿಯಾಗಲಿಲ್ಲ. ದಕ್ಷಿಣವನ್ನು ಅಧೀನಕ್ಕೆ

ತೆಗೆದುಕೊಳ್ಳುವುದು ಇವನ ಅಭಿಲಾಷೆಯಾಗಿತ್ತು. ಇವನ ದಂಡನಾಯಕನಾಗಿದ್ದ ಮಲ್ಲಿಕಾಫರನು ದಕ್ಷಿಣದ ದಂಡಯಾತ್ರೆಯನ್ನು ಕೈಗೊಂಡು ಯಶಸ್ವಿಯಾದನು. ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ದ್ವಾರಸಮುದ್ರದ ಹೊಯ್ಸಳರು, ಮಧುರೆಯ ಪಾಂಡ್ಯರು ಎಲ್ಲರೂ ಇವನ ದಾಳಿಗೆ ತುತ್ತಾದರು. ಅಲಾವುದೀನನು ಈ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲಿಲ್ಲ. ರಾಜರುಗಳಿಂದ ಕಪ್ಪಕಾಣಿಕೆ ವಸೂಲು ಮಾಡುತ್ತಿದ್ದನು.

ಅಲಾವುದ್ದೀನ್ ಸಮರ್ಥ ಆಡಳಿತಗಾರ. ರಾಜನ ಸೇನೆ ತುಂಬ ಶಿಸ್ತಿನಿಂದ ಕೂಡಿದ್ದು ಬೊಕ್ಕಸದಿಂದಲೇ ಅವರಿಗೆ ಸಂಬಳ ಪಾವತಿಯಾಗುತ್ತಿತ್ತು. ವ್ಯಾಪಾರ ನಿಬಂಧನೆಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದು ಪದಾರ್ಥಗಳ ಬೆಲೆಯನ್ನು ನಿರ್ಧರಿಸಲಾಯಿತು. ಕುತ್ಬಿ ಮಸೀದಿಯನ್ನು ವಿಸ್ತರಿಸಿದ ಅಲಾವುದ್ದೀನನು ಅಲಾಯ್ ದರ್ವಾಜಾ ಎಂಬ ದ್ವಾರವನ್ನು ನಿರ್ಮಿಸಿದನು. ಪ್ರಸಿದ್ಧ ಕವಿ ಅಮೀರ ಖುಸ್ರೂವಿಗೆ ಅಲಾವುದ್ದೀನ್ ಆಶ್ರಯದಾತನಾಗಿದ್ದನು. ಈತನ ಮರಣಾನಂತರ ಖಿಲ್ಜಿ ಸಂತತಿ ಅವನತಿ ಹೊಂದಿತು.

**ತುಘಲಕ್ ವಂಶ (1320–1414)**

ಕ್ರಿ.ಶ. 1320ರಲ್ಲಿ ಘಿಯಾಸುದ್ದೀನ್ ಎಂಬಾತ ಖಿಲ್ಜಿ ವಂಶದ ಕೊನೆಯ ರಾಜನನ್ನು ಕೊಂದು ಸುಲ್ತಾನ ಪದವಿಗೇರಿದನು. ಈತ ಒಬ್ಬ ದಕ್ಷ ಆಡಳಿತಗಾರ. ಈತನ ಮರಣಾನಂತರ ಇವನ ಮಗ ಮಹಮದ್ ಬಿನ್ ತುಘಲಕ್ (1325–1351) ದೆಹಲಿಯ ಸುಲ್ತಾನನಾದನು. ಈತ ಒಬ್ಬ ಸುಸಂಸ್ಕೃತ ವಿದ್ವಾಂಸನಾಗಿದ್ದು ತತ್ವಜ್ಞಾನ, ಇತಿಹಾಸ, ಗಣಿತ ಮೊದಲಾದ ಅನೇಕ ವಿಷಯಗಳಲ್ಲಿ ಆಸಕ್ತನಾಗಿದ್ದನು. ಸುಂದರವಾದ ಕೈಬರಹ ಹೊಂದಿದ್ದುದೇ ಅಲ್ಲದೆ ಉತ್ತಮ ವಾಗ್ಮಿಯೂ ಆಗಿದ್ದನು. ಈತ ಪ್ರತಿಭಾವಂತನಾಗಿದ್ದು ಆಡಳಿತದಲ್ಲಿ ಅದ್ಭುತ ಚಿಂತನೆಗಳನ್ನು ಹೊಂದಿದವನಾಗಿದ್ದನು. ಈತ ಅನೇಕ ಭೂಸುಧಾರಣೆಗಳನ್ನು ಮಾಡಿದನು. ದೊ ಆಬ್ ಪ್ರದೇಶದಲ್ಲಿ ತೆರಿಗೆಗಳನ್ನು ಹೆಚ್ಚಿಸಿದನು. ಪರರ ಆಕ್ರಮಣ ದೃಷ್ಟಿಯಿಂದ ದೆಹಲಿಗಿಂತಲೂ ಕ್ಷೇಮಕರ ಸ್ಥಾನದಲ್ಲಿರುವ ದೇವಗಿರಿಗೆ ತನ್ನ ರಾಜಧಾನಿಯನ್ನು ಬದಲಾಯಿಸಲು ಪ್ರಯತ್ನಿಸಿದನು. ದೆಹಲಿಯಿಂದ ಒಂದು ಸಾವಿರ ಕಿಲೋ ಮೀಟರಿಗೂ ದೂರದಲ್ಲಿದ್ದ ದೇವಗಿರಿಗೆ ದೆಹಲಿಯವರೆಲ್ಲ ಹೋಗಲೇಬೇಕೆಂದು ಒತ್ತಾಯ ಮಾಡಿದನು. ಪ್ರಯಾಣದ ಅವಧಿಯಲ್ಲೇ ಅಸಂಖ್ಯಾತ ಜನರು ಸತ್ತರು. ಮುಂದೆ ತಾನು ಮಾಡಿದ್ದು ತಪ್ಪೆಂದು ಅರಿವಾದಾಗ ಜನರನ್ನೆಲ್ಲ ದೆಹಲಿಗೆ ಹಿಂದಿರುಗಲೇಬೇಕೆಂದು ಆಜ್ಞೆ ಮಾಡಿದನು. ಹೀಗೆ ದೆಹಲಿಯ ನಾಗರೀಕರಿಗೆ ಪಡಬಾರದ ಯಾತನೆ ಉಂಟಾಯಿತು. ಮಂಗೋಲರು ಭಾರತದ ಮೇಲೆ ನುಗ್ಗಿ ಬಂದಾಗ ಹೋರಾಡುವುದರ ಬದಲಿಗೆ ಅವರಿಗೆ ಲಂಚವನ್ನು ಕೊಟ್ಟು ಕಳಿಸಿದನು. ಇದರ ಪರಿಣಾಮವಾಗಿ ಅವರು ಮತ್ತೆ ಮತ್ತೆ ಬರತೊಡಗಿದರು.

ಮಹಮದ್ ಬಿನ್ ತುಘಲಕ್, ಚೈನಾದ ಮೇಲೆ ಒಂದು ಸೈನ್ಯವನ್ನು ಕಳುಹಿಸಿದನು. ಹಿಮಾಲಯದ ಹಿಮಾಚ್ಛಾದಿತ ರಸ್ತೆಗಳಲ್ಲಿ ಸೈನಿಕರು ಸತ್ತರು. ಇದೇ

ಬಗೆಯಲ್ಲಿ ಪರ್ಷಿಯಾ ಮತ್ತು ಮಧ್ಯಏಷ್ಯಾಗಳನ್ನು ಗೆಲ್ಲಲು ಭಾರೀ ಸನ್ನಾಹಗಳನ್ನು ಮಾಡಿದನು. ಅವೂ ಸೋಲನ್ನಪ್ಪಿದವು. ಆರ್ಥಿಕ ಸುಧಾರಣೆ ತರಲು ಸಾಂಕೇತಿಕ ನಾಣ್ಯವನ್ನು ಜಾರಿಗೆ ತಂದನು. ಆದರೆ ಆ ಪ್ರಯತ್ನವೂ ಸೋತಿತು. ಸಾಮ್ರಾಜ್ಯ ಬಾರಿ ಪ್ರಮಾಣದಲ್ಲಿ ಗೊಂದಲಮಯವಾಯಿತು. ಸಾಮ್ರಾಜ್ಯದ ನಾನಾ ಭಾಗಗಳಲ್ಲಿ ದಂಗೆಗಳು ಆರಂಭವಾದವು. ಸುಲ್ತಾನನು 1351ರಲ್ಲಿ ತೀರಿಕೊಂಡನು.

ಮಹಮದ್ ಬಿನ್ ತುಘಲಕ್ ನಿಸ್ಸಂಶಯವಾಗಿ ದೆಹಲಿಯ ಸಮರ್ಥ ಸುಲ್ತಾನರಲ್ಲಿ ಒಬ್ಬನಾಗಿದ್ದನು. ಆದರೆ ಅವನಿಗೆ ಸದುದ್ದೇಶ, ಉತ್ತಮ ಚಿಂತನೆಗಳೆಲ್ಲ ಇದ್ದರೂ ಸಂಯಮವಿರಲಿಲ್ಲ. ಈತನನ್ನು ದ್ವಂದ್ವಗಳಿಂದ ಕೂಡಿದವನೆಂದೂ, ಅಸಂಬದ್ಧತೆಗಳ ಕಂತೆಯೆಂದೂ ವರ್ಣಿಸಲಾಗಿದೆ.

**ಫಿರೋಜ್ ಷಾ ತುಘಲಕ್ (1351–1388)**

ಈತ ಸಮರ್ಥನಾದ ಒಬ್ಬ ಬಲಶಾಲೀ ದೊರೆ. ಈತನ ಆಡಳಿತ ಶಾಂತಿಯುತವಾಗಿತ್ತು. ಸಾರ್ವಜನಿಕ ಕಲ್ಯಾಣದ ಅನೇಕ ವಿಧಿಗಳನ್ನು ಜಾರಿಗೆ ತಂದನು. ಯಮುನಾ ಮತ್ತು ಸಟ್ಲೆಜ್ ನದಿಗಳಿಂದ ಜನರಿಗೆ ನೀರೊದಗಿಸುವುದಕ್ಕಾಗಿ ಅವುಗಳಿಗೆ ಅನೇಕ ಕಾಲುವೆಗಳನ್ನು ತೋಡಿಸಿದನು. ಬಂಜರು ಭೂಮಿಯನ್ನು ಕೃಷಿಯೋಗ್ಯ ಭೂಮಿಯಾಗಿ ಪರಿವರ್ತಿಸಲಾಯಿತು. ಜಹಗೀರು ಪದ್ಧತಿಯನ್ನು ಮತ್ತೆ ಬಳಕೆಗೆ ತಂದನು. ಗುಲಾಮೀ ಪದ್ಧತಿಯನ್ನು ಬೆಂಬಲಿಸಿದನು. ದೆಹಲಿಯ ಬಳಿ ಹೊಸ ರಾಜಧಾನಿಯನ್ನು ಕಟ್ಟಿ ಅದಕ್ಕೆ ಫಿರೋಜಾಬಾದ್ ಎಂದು ಹೆಸರಿಟ್ಟನು. ಹಿಸ್ಸಾರ್, ಫತೇಹಾಬಾದ್, ಜೋನಪುರಗಳನ್ನು ನಿರ್ಮಿಸಿದನು. ಫಿರೋಜ್ ಷಾ ತುಘಲಕನ ಮರಣಾನಂತರ ಸುಲ್ತಾನ ಸಂತತಿ ಕ್ಷೀಣಿಸತೊಡಗಿತು.

ಸಮರ್‌ಖಂಡ್‌ನ ಮಂಗೋಲ್ ನಾಯಕನಾದ ಅಮೀರ್ ತೈಮೂರ್, ತುಘಲಕ್ ವಂಶದ ಕೊನೆಯ ಅರಸನಾದ ಮಹಮದ್ ತುಘಲಕ್‌ನ ಕಾಲದಲ್ಲಿ ಭಾರತದ ಮೇಲೆ ದಾಳಿ ನಡೆಸಿದನು. ತೈಮೂರನು ದೆಹಲಿಯನ್ನೂ, ಅನೇಕ ನಗರಗಳನ್ನೂ, ಹಳ್ಳಿಗಳನ್ನೂ ಲೂಟಿಮಾಡಿ ಅಪಾರ ಸಂಪತ್ತನ್ನು ದೋಚಿಕೊಂಡು ಹೋದನು.

ಅಂತಿಮವಾಗಿ ತುಘಲಕ್ ಸಂತತಿಯ ನಂತರ ಸೈಯದ್ ಸಂತತಿ, ಅನಂತರ ಲೋದಿ ಸಂತತಿಗಳು ಬಂದವು. ಲೋದಿ ವಂಶದ ಕೊನೆಯ ದೊರೆ ಇಬ್ರಾಹಿಂ ಲೋದಿ. ಈತನನ್ನು ಕ್ರಿ.ಶ. 1526ರಲ್ಲಿ ಬಾಬರನು ಪಾಣಿಪತ್ ಯುದ್ಧದಲ್ಲಿ ಸೋಲಿಸಿದನು.

## ಸುಲ್ತಾನ್ ಸಾಮ್ರಾಜ್ಯದ ವಿಘಟನೆ

ದೆಹಲಿ ಸುಲ್ತಾನರ ಆಳ್ವಿಕೆ ಕ್ರಿ.ಶ. 1206ರಿಂದ 1526ರವರೆಗೆ ಮೂರು ಶತಮಾನ ಬದುಕಿ ಬಾಳಿತು. ಅನಂತರ ಸಾಮ್ರಾಜ್ಯ ಒಡೆದುಹೋಯಿತು. ಈ ವಿಘಟನೆಗೆ ಅನೇಕ ಕಾರಣಗಳಿವೆ.

1. ಉತ್ತರಾಧಿಕಾರಿಯ ನೇಮಕಕ್ಕೆ ಸಂಬಂಧಿಸಿದಂತೆ ಖಚಿತ ಕಾನೂನುಗಳಿರಲಿಲ್ಲ.

ಆದುದರಿಂದ ಪ್ರತಿಯೊಬ್ಬ ಸುಲ್ತಾನನು ತೀರಿಕೊಂಡಾಗಲೂ ಘರ್ಷಣೆ, ಒಳಯುದ್ಧಗಳು ಆರಂಭವಾಗಲು ಅವಕಾಶ ಮಾಡಿಕೊಟ್ಟಂತಾಯಿತು.

2. ಶ್ರೀಮಂತ ವರ್ಗಗಳು ರಾಜನ ನೇಮಕದಲ್ಲಿ ತಲೆ ಹಾಕಿ ದುರ್ಬಲ ರಾಜರುಗಳನ್ನು ತನ್ನ ಕೈಯಲ್ಲಿರಿಸಿಕೊಂಡರು.
3. ಗುಲಾಮೀ ಪದ್ಧತಿ ರಾಜಕೀಯ ವ್ಯವಸ್ಥೆಯ ಬಲವನ್ನು ಕುಗ್ಗಿಸಿತು.
4. ಜಹಗೀರು ಪದ್ಧತಿ ಸಾಮ್ರಾಜ್ಯದ ವಿಭಜನೆಗೆ ಕಾರಣವಾಯಿತು. ಏಕೆಂದರೆ ಇದರಿಂದ ಅಲ್ಲಲ್ಲಿ ಪ್ರಬಲರು ಹುಟ್ಟಿಕೊಳ್ಳುವಂತಾಯಿತು. ಕೇಂದ್ರಾಡಳಿತ ಶಕ್ತಿ ಕುಗ್ಗಿತು.
5. ತೈಮೂರನ ದಂಡಯಾತ್ರೆಯಿಂದ ದೆಹಲಿ ಸುಲ್ತಾನರಿಗೆ ಸಿಡಿಲು ಬಡಿದಂತಾಯಿತು. ತೈಮೂರ್ ಹಾಗೂ ಬಾಬರನ ದಾಳಿ ಮೊದಲೇ ಅವನತಿಯ ಹಾದಿಯಲ್ಲಿದ್ದ ರಾಜ್ಯಕ್ಕೆ ಮಂಗಳ ಹಾಡಿತು.

## ಅಭ್ಯಾಸ

**I. ಈ ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಿ.**

1. ಗುಲಾಮೀ ಸಂತತಿಯ ಸ್ಥಾಪಕನು ಯಾರು ?
2. ಖಿಲ್ಜಿ ಸಂತತಿಯ ಪ್ರಸಿದ್ಧ ದೊರೆ ಯಾರು ?
3. ಮಹಮ್ಮದ್ ಬಿನ್ ತುಘಲಕನನ್ನು 'ದ್ವಂದ್ವಗಳ ಮಿಶ್ರಣ' ಎಂದು ಏಕೆ ಕರೆಯಲಾಗಿದೆ ?

**II. ಭರ್ತಿ ಮಾಡಿ.**

1. ಫಿರೋಜಾಬಾದ್ ನಗರವನ್ನು ಕಟ್ಟಿದವನು......
2. ಅಲಾವುದ್ದೀನ್ ಖಿಲ್ಜಿ ನಿರ್ಮಿಸಿದ ಪ್ರವೇಶದ್ವಾರಕ್ಕೆ....... ಎಂದು ಹೆಸರು.

# ದೆಹಲಿಯ ಸುಲ್ತಾನರು

## ಧರ್ಮ ಕಲೆಗಳಲ್ಲಿ ಸಾಂಸ್ಕೃತಿಕ ಸಮನ್ವಯ

ಅರಬ್ಬರ ಸಿಂಧ್ ದಾಳಿಯ ನಂತರ ಕ್ರಿ.ಶ. 1206ರಲ್ಲಿ ಕುತ್ಬುದೀನ್ ಐಬಕನಿಂದ ಸುಲ್ತಾನ್ ಸಂತತಿ ಆರಂಭಗೊಂಡಿತು. ಸುಲ್ತಾನರು 1206ರಿಂದ 1526ರವರೆಗೆ ದೆಹಲಿಯಲ್ಲಿ ಆಳಿದರು. ಜಾತಿಯ ಹಾಗೂ ಸಂಸ್ಕೃತಿಯ ವಿಭಿನ್ನತೆಯಿಂದಾಗಿ ಮೊದಮೊದಲು ಹಿಂದೂ, ಮುಸ್ಲಿಮರಲ್ಲಿ ಹೊಂದಾಣಿಕೆಯಿರಲಿಲ್ಲ. ಹೀಗಾಗಿ ಎರಡು ಜನಾಂಗಗಳೂ ಒಬ್ಬರನ್ನೊಬ್ಬರು ಮೆಚ್ಚುವುದಕ್ಕೆ ಅವಕಾಶವಾಗಲಿಲ್ಲ. ಆಕ್ರಮಣಕಾರರು ಮತ್ತು ಸೋತವರು ಇವರ ನಡುವಣ ಸೌಹಾರ್ದರಹಿತ ಸಂಬಂಧದಿಂದಾಗಿ ಸಮಸ್ಯೆ ಇನ್ನಷ್ಟು ಜಟಿಲವಾಗಿತ್ತು. ಆದರೆ ಹಿಂದೂಗಳ ಸಹಕಾರವಿಲ್ಲದೆ ಸುಲ್ತಾನರು ಸಮರ್ಥ

ಆಡಳಿತ ಒದಗಿಸಲು ಸಾಧ್ಯವಾಗುತ್ತಿರಲಿಲ್ಲ. ಇದರಿಂದಾಗಿ ತಮ್ಮ ತಮ್ಮ ಭಿನ್ನತೆಗಳನ್ನು ತೊರೆದು ಪರಸ್ಪರ ಸಹಿಸಿಕೊಳ್ಳಬೇಕೆಂಬ ಭಾವನೆಗೆ ಇಂಬು ದೊರೆಯಿತು. ಸುಲ್ತಾನರು ತಮ್ಮ ವಜೀರರ ಹಾಗೂ ಅಧಿಕಾರಿಗಳ ವಿರೋಧವನ್ನು ಲೆಕ್ಕಿಸದೆ ಹಿಂದೂಗಳ ಸಹಕಾರವನ್ನು ಸ್ವೀಕರಿಸಿದರು. ಹಿಂದೂ, ಮುಸ್ಲಿಮರಿಬ್ಬರೂ ಶಾಂತಿಯುತ ಸಹಬಾಳ್ವೆಯ ಅಗತ್ಯತೆಯನ್ನು ಮನಗಂಡರು. ಇದರಿಂದಾಗಿ ಸಾಂಸ್ಕೃತಿಕ ಸಮನ್ವಯದ ಅರಿವು ಮೂಡಿತು. ಹಿಂದೂ ಪಂಗಡದ ಮೇಲ್ವರ್ಗದವರು ಮುಸ್ಲಿಮರ ವೇಷಭೂಷಣ ಆಹಾರ-ಪದ್ಧತಿ ಮತ್ತು ಸಾಮಾಜಿಕ ನಡವಳಿಕೆಯಿಂದ ಪ್ರಭಾವಿತರಾದರು. ಇಸ್ಲಾಂ ಧರ್ಮ ತಳವೂರಿದ ಕಾರಣದಿಂದಾಗಿ ಬುಖಾರಾ, ಸಮರ್ಖಂಡ್, ಬಾಲ್ಖ್, ಖುರಾಸಾನ್, ಇರಾನ್ ಮೊದಲಾದ ಪ್ರದೇಶಗಳಿಂದ ಅಪಾರ ಸಂಖ್ಯೆಯಲ್ಲಿ ವಿದ್ವಾಂಸರು, ವಣಿಕರು ಮೊದಲಾದವರು ಭಾರತಕ್ಕೆ ವಲಸೆ ಬಂದರು. ಇದರಿಂದ ಸಾಂಸ್ಕೃತಿಕ ಸಂಪರ್ಕ ಹೆಚ್ಚಲು ಕಾರಣವಾಯಿತು.

## ಧರ್ಮ

ಎರಡೂ ಧರ್ಮಗಳ ಅನೇಕ ಸಜ್ಜನರು ತಮ್ಮ ಧರ್ಮದ ಅನುಯಾಯಿಗಳಿಗೆ ಪರಸ್ಪರ ವೈಷಮ್ಯವನ್ನು ಮರೆಯಬೇಕೆಂದೂ ಈ ಜಗತ್ತನ್ನು ಉಳಿಸಿ ಕಾಪಾಡುತ್ತಿರುವ ಭಗವಂತನು ಒಬ್ಬನೇ ಎಂದು ಮನಗಾಣಬೇಕೆಂದೂ ಬೋಧಿಸಿದರು.

ಪರಸ್ಪರ, ಮೂಲಭೂತ ವ್ಯತ್ಯಾಸಗಳಿದ್ದರೂ ಹಿಂದೂ, ಮುಸ್ಲಿಮರಲ್ಲಿ ಸಹನೆ ಮತ್ತು ಸಹಬಾಳ್ವೆಗಳ ಮನೋಧರ್ಮ ಮೂಡಿ ಬಂದಿತು. ಕಲೆ ಮತ್ತು ಶಿಲ್ಪಗಳಲ್ಲಿ ಮುಸ್ಲಿಮ್ ದೊರೆಗಳು ಭಾರತೀಯ ಶೈಲಿಯನ್ನು ಸ್ವೀಕರಿಸಿದರು. ವರ್ಣಚಿತ್ರ, ಸಂಗೀತ, ನೃತ್ಯಗಳ ರಂಗದಲ್ಲೂ ಹೀಗೆಯೇ ಆಯಿತು. ಹಿಂದೂಸ್ತಾನಿ ಸಂಗೀತ ಹಾಗೂ ಕಥಕ್ ಶೈಲಿಗಳು ಈ ಅವಧಿಯಲ್ಲಿ ಮೂಡಿಬಂದವು.

ಇಸ್ಲಾಂನಿಂದಾಗಿ ಕಮಾನು, ಗುಂಬಜ ಮೊದಲಾದ ವಾಸ್ತುರಚನೆಗಳು ಭಾರತದಲ್ಲಿ ಕಾಣಿಸಿಕೊಂಡವು. ಏಕರೂಪತೆ ಮತ್ತು ಪ್ರಮಾಣಬದ್ಧತೆಗಳಿಗೆ ಇಸ್ಲಾಂ ಕಟ್ಟಡಗಳಲ್ಲಿ ಪ್ರಾಮುಖ್ಯ ಹೆಚ್ಚೇ ಹೊರತು ಅಲಂಕಾರಗಳಿಗೆ ಅಲ್ಲ.

ಸೂಫಿ ಸಂತರುಗಳು ತಮ್ಮದೇ ಆದ ಸಂಗೀತ ಪದ್ಧತಿಯನ್ನು ಭಾರತಕ್ಕೆ ತಂದರು. ಅಲ್ಲದೆ ಅವರು ಪ್ರೀತಿ ಮತ್ತು ಅರಿತುಕೊಳ್ಳುವಿಕೆಯ ಸಂದೇಶಗಳನ್ನು ತಂದರು. ಇಲ್ತಮಷ್‌ನ ಆಸ್ಥಾನದಲ್ಲಿ ಹಾಡಲು ಅವಕಾಶ ಸಿಕ್ಕಿದ ಸಂಗೀತಗಾರನೆಂದರೆ ಹಮೀನುದೀನ್. ಅಮೀರ್ ಖುಸ್ರು, ಖಡೀಬೋಲಿ (ದೋಹರ್) ಕಾವ್ಯದ ಜನಕ. ಈತ ಖವಾಲಿ ಮತ್ತು ತರಾನಾಗಳನ್ನು ಪರಿಚಯಿಸಿಕೊಟ್ಟ. ಅಲ್ಲದೆ ಜಿಲುಫ್, ಸಪರ್ದ, ಸಾಜ್‌ಗಿರಿ ಮೊದಲಾದ ರಾಗಗಳನ್ನು ಪರಿಚಯಿಸಿದ. ತಬಲಾ ಮತ್ತು ಸಿತಾರ್ ವಾದ್ಯಗಳನ್ನು ಸೃಷ್ಟಿಸಿದವನೂ ಈತನೇ. ವರ್ಣಚಿತ್ರ ಕಲೆ ಈ ಅವಧಿಯಲ್ಲಿ ಹೊಸ ರೂಪ ತಾಳಿತು. ಮುಸ್ಲಿಮರು ಸುಂದರ ಬರಹದ ಕಲೆಯನ್ನು ಪರಿಚಯಿಸಿದರು. ಸುಲ್ತಾನರ ಕಾಲದ ನಾಣ್ಯಗಳಲ್ಲಿ ಹಿಂದೂ, ಮುಸ್ಲಿಂ ಸಮನ್ವಯವನ್ನು ಕಾಣಬಹುದಾಗಿದೆ. ಆರಂಭದ ಮುಸ್ಲಿಂ ನಾಣ್ಯಗಳು ನಾಗರೀ ಲಿಪಿಯನ್ನು ಹೊಂದಿವೆ.

**ಉರ್ದು ಸಾಹಿತ್ಯದ ವಿಕಾಸ**

ಮಧ್ಯಯುಗದ ಭಾರತದಲ್ಲಿ ಸಾಹಿತ್ಯ ಕ್ಷೇತ್ರದ ಒಂದು ಸಾಧನೆ ಎಂದರೆ ಉರ್ದು ಭಾಷೆಯ ಉದಯ. ಪರ್ಷಿಯನ್, ಅರಾಬಿಕ್, ಟರ್ಕಿ ಮತ್ತು ಸಂಸ್ಕೃತ ಶಬ್ದಗಳ ಮಿಶ್ರಣದಿಂದಾಗಿ ಹುಟ್ಟಿದ ಭಾಷೆ ಉರ್ದು. ಉರ್ದುವಿನ ಭಾಷಾ ರಚನೆ ಬಲುಮಟ್ಟಿಗೆ ಹಿಂದಿಯನ್ನು ಹೋಲುವಂಥದಾಗಿದೆ. ಅನೇಕ ಅಗತ್ಯಗಳು (ಮುಖ್ಯವಾಗಿ ಸೈನಿಕ ಅಗತ್ಯ) ಕೂಡಿಕೊಂಡು ಹಿಂದೂ, ಮುಸ್ಲಿಮರು ಉಭಯತರಿಗೆ ಹೊಂದುವ ಒಂದು ಭಾಷೆಯನ್ನು ರೂಢಿಸಿಕೊಂಡರು. ಮುಂದೆ ಕಾಲಾಂತರದಲ್ಲಿ ಉರ್ದು ಅನೇಕ ಲಕ್ಷಣಗಳನ್ನು ಪಡೆದುಕೊಂಡಿತು. ಕವಿಗಳು, ಬರಹಗಾರರು, ಇತಿಹಾಸಕಾರರು ತಮ್ಮ ರಚನೆಗಳಿಂದ ಆ ಭಾಷೆಯ ಸಂಪತ್ತನ್ನು ಹೆಚ್ಚಿಸಿದರು. ಹೀಗೆ ಉರ್ದು ಭಾಷೆ ಉಭಯ ಜನಾಂಗಗಳ ಸಮನ್ವಯ ಚಿಂತನೆಯ ಫಲವಾಗಿ ಹುಟ್ಟಿದ ಭಾಷೆ ಎಂದು ಹೇಳಬಹುದು.

## ಅಭ್ಯಾಸ

**I. ಈ ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಿ.**

1. ಹಿಂದೂ ಧರ್ಮದ ಮೇಲೆ ಇಸ್ಲಾಂನ ಪ್ರಭಾವವೇನು ?
2. ಭಕ್ತಿಪಂಥ, ಧರ್ಮಸಮನ್ವಯಕ್ಕೆ ಹೇಗೆ ಕಾರಣವಾಯಿತು ?
3. ಉರ್ದು ಆರಂಭಗೊಂಡದ್ದು ಹೇಗೆ ?

**II. ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಕುತ್ಬುದ್ದೀನ್ ಐಬಕ್ | ದೋಹಗಳು |
| 2. ಅಮೀರ್ ಖುಸ್ರು | ಸಂತರು |
| 3. ಕಮಾನು | ಖವಾಲಿ |
| 4. ಸೂಫಿ | ಇಸ್ಲಾಂ ವಾಸ್ತುಶಿಲ್ಪ |
| | ಸುಲ್ತಾನ್ ಸಂತತಿ |

**III. ಭರ್ತಿ ಮಾಡಿ.**

1. ಇಲ್ತಮಷ್‌ನ ಆಸ್ಥಾನದಲ್ಲಿ ಹಾಡಲು ಅನುಮತಿ ದೊರಕಿಸಿಕೊಂಡ ಮೊದಲನೆಯ ಸಂಗೀತಗಾರನೆಂದರೆ......
2. ಸಿತಾರನ್ನು ಕಂಡುಹಿಡಿದವನು........

# 43

# ಸುಲ್ತಾನರ ಪತನಾನಂತರ ಉತ್ತರ ಭಾರತದಲ್ಲಿ ರಾಜ್ಯಗಳ ಉದಯ

ಕ್ರಿ.ಶ. 1526ರಲ್ಲಿ ಬಾಬರನ ದಾಳಿಯ ಸಮಯದಲ್ಲಿ ಭಾರತವು ಅನೇಕ ಕಿರು ರಾಜ್ಯಗಳಾಗಿ ಒಡೆದು ಹೋಗಿತ್ತು. ರಾಜರುಗಳು ಸದಾ ಹೋರಾಟದಲ್ಲಿ ಇರುತ್ತಿದ್ದರು. ಮೇಲ್ಮೆ ಸಾಧಿಸಲು ಪರಸ್ಪರ ಹೋರಾಟ ಸಾಗಿತ್ತು. ಈ ಕಾರಣದಿಂದ ಹೊರಗಿನ ದಾಳಿಯ ಸಂದರ್ಭದಲ್ಲಿ ಅವರು ಸಂಯುಕ್ತವಾಗಿ ಹೋರಾಡುವ ಸ್ಥಿತಿಯಲ್ಲಿ ಇರಲಿಲ್ಲ.

## ದೆಹಲಿ ಸಾಮ್ರಾಜ್ಯ

ದೆಹಲಿಯ ಸುಲ್ತಾನ ಬಲಶಾಲಿಯಾಗಿರಲಿಲ್ಲ. ಪಂಜಾಬ್, ದೋ ಆಬ್, ಜೋಧಪುರ, ಔಧ್ ಮತ್ತು ಬಿಹಾರದ ಒಂದು ಭಾಗ ಇಷ್ಟಕ್ಕೇ ಆತನ ರಾಜ್ಯ ಸೀಮಿತಗೊಂಡಿತ್ತು. ಬಹಲುಲ್ ಖಾನ್ ಒಬ್ಬ ಆಫ್‌ಘನ್ ಆಗಿದ್ದ. ದೆಹಲಿಯ ಸುಲ್ತಾನನಾಗಿದ್ದ ಈತ ಲಾಹೋರ್ ಮತ್ತು ಸರ್‌ಹಿಂದ್‌ಗಳ ರಾಜ್ಯಪಾಲನಾಗಿ ತನ್ನ ಅಧಿಕಾರವನ್ನು ಆರಂಭಿಸಿದ್ದ. ಇವನ ನಂತರ ಬಂದ ಸಿಕಂದರ್ ಒಬ್ಬ ಸಮರ್ಥ ರಾಜನಾಗಿದ್ದ. ಈತನ ಸಮಕಾಲೀನರು ಸಿಕಂದರ್ ಒಬ್ಬ ವಿವೇಕಿಯೂ, ಹೃದಯವಂತಿಕೆ ಉಳ್ಳವನೂ ಆದ ದೊರೆಯೆಂದು ಪ್ರಶಂಸಿಸಿದ್ದಾರೆ.

ಬಹಲುಲ್‌ಖಾನ್ ಯಾವಾಗಲೂ ತನ್ನ ಶ್ರೀಮಂತ ಜನಾಂಗದ ವಿಧೇಯತೆಯ ಆಧಾರದಿಂದ ರಾಜ್ಯವನ್ನು ಕಟ್ಟಲು ಪ್ರಯತ್ನಿಸಿದ. ಹೀಗಾಗಿ ಅವರುಗಳ ಆಕಾಂಕ್ಷೆಗೆ ತಕ್ಕಂತೆ ವರ್ತಿಸಲು ಪ್ರಯತ್ನಿಸಿದ. ಎಲ್ಲ ಕುಲೀನರೂ ಅವನ ಬೆನ್ನಿಗಿದ್ದರೆಂಬುದೇನೂ ಆಶ್ಚರ್ಯದ ಸಂಗತಿಯಲ್ಲ. ಆದರೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುವುದಕ್ಕಾಗಿ ಶ್ರೀಮಂತ ವರ್ಗದವರ ಮೇಲೆ ದಮನಕಾರಿ ಕ್ರಮಗಳನ್ನು ಕೈಗೊಂಡು ಅವರ ಪ್ರಭಾವವನ್ನು ಕುಗ್ಗಿಸಲು ನೋಡಿದ. ಇದೇ ಕೊನೆಗೆ ಅವನ ಸಾಮ್ರಾಜ್ಯದ ಪತನಕ್ಕೆ ಕಾರಣವಾಯಿತು.

## ಮೇವಾಡ

ಮೇವಾಡ ಇನ್ನೊಂದು ಮುಖ್ಯ ರಾಜ್ಯ. ರಾಣಾಸಂಗ ಇದನ್ನು ಆಳುತ್ತಿದ್ದ. ಚಿತ್ತೂರು ಅವನ ರಾಜಧಾನಿಯಾಗಿತ್ತು. ರಾಣಾಸಂಗನು ಮಾಳವ ದೊರೆಗಳ ಮೇಲೆ ಹಲವಾರು ಯುದ್ಧಗಳನ್ನು ಮಾಡಿದ್ದ. ಬಿಲ್ಸಾ, ಚಾಂದೇರಿ ಮತ್ತು ರಣಥಂಭೋರ್‌ಗಳು ಅವನ ವಶದಲ್ಲಿದ್ದವು, ಗ್ವಾಲಿಯರ್, ಅಜ್ಮೀರ್ ಹಾಗೂ ರಾಯ್ ಸೇನ್ ರಾಜ್ಯಗಳು ಇವನ ಪರಮಾಧಿಕಾರವನ್ನು ಒಪ್ಪಿಕೊಂಡು ಕಪ್ಪಕಾಣಿಕೆ ಒಪ್ಪಿಸುತ್ತಿದ್ದವು.

ರಾಣಾಸಂಗ, ರಜಪೂತರ ನಾಯಕ. ಈತ ಶಕ್ತಿಶಾಲಿ, ಘನತೆವಂತ, ಯಾವುದೇ ಸವಾಲನ್ನು ಎದುರಿಸುವ ಶಕ್ತಿ ಇದ್ದವನು. ತನ್ನ ರಾಜ್ಯದ ಅಕ್ಕಪಕ್ಕದ ರಾಜ್ಯಗಳಾದ ದೆಹಲಿ ಅಜ್ಮೀರ್‌ಗಳ ಮೇಲೆ ದಾಳಿ ನಡೆಸುವುದು ಅವನ ಆಶಯವಾಗಿತ್ತು. ಆದುದರಿಂದ ಲೋದಿಯ ಅಧಿಕಾರಿಗಳಾದ ದೌಲತ್‌ಖಾನ್ ಹಾಗೂ ಆಲಂಖಾನ್ ದೆಹಲಿಯನ್ನು ಗೆಲ್ಲಲು ಬಾಬರನನ್ನು ಆಹ್ವಾನಿಸಿದರು.

**ಖಾನ್ ದೇಶ**

ಇದು ತಪತೀ ನದಿಯ ಕಣಿವೆಯಲ್ಲಿದ್ದ ರಾಜ್ಯ. ಹದಿನಾಲ್ಕನೆಯ ಶತಮಾನದಿಂದಲೂ ಇದು ಒಂದು ಸ್ವತಂತ್ರ ರಾಜ್ಯವಾಗಿತ್ತು. ಮಾಲಿರಾಜಾ ಫರೂಕ್ ಈ ರಾಜ್ಯವನ್ನು ಸ್ಥಾಪಿಸಿದ್ದನು. ಆದರೆ ಗುಜರಾತಿನ ದೊರೆಗಳು ಖಾನ್ ದೇಶದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಬೇಕೆಂಬ ಸಂಕಲ್ಪವುಳ್ಳವರಾಗಿದ್ದರು. ಈ ಕಾರಣದಿಂದ ಈ ಎರಡು ರಾಜ್ಯಗಳೂ ನಿರಂತರ ಹೋರಾಟದಲ್ಲಿ ತೊಡಗಿದ್ದುವು. ಕ್ರಿ.ಶ. 1508ರ ನಂತರ ಖಾನ್ ದೇಶದಲ್ಲಿ ಪಟ್ಟಕ್ಕಾಗಿ ಘರ್ಷಣೆ ಆರಂಭವಾದುದರಿಂದ ಗೊಂದಲವೆದ್ದಿತು. ಆದರೆ ದೆಹಲಿ, ಖಾನ್ ದೇಶಗಳ ನಡುವೆ ತುಂಬ ದೂರವಿದ್ದುದರಿಂದ ದೆಹಲಿಯ ಸುಲ್ತಾನರ ಮೇಲೆ ಖಾನ್ ದೇಶದ ರಾಜಕೀಯವು ಯಾವ ಪರಿಣಾಮವನ್ನೂ ಮಾಡಿರಲಿಲ್ಲ.

**ಕಾಶ್ಮೀರ**

ಕ್ರಿ.ಶ. 1339ರಲ್ಲಿ ಷಾ ಮಿರ್ಜಾ, ಕಾಶ್ಮೀರವೆಂಬ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ. ಇವರಲ್ಲಿ ಜೈನ್ ಉಲ್ ಆಬ್‌ದಿನ್ ತುಂಬ ಪ್ರಭಾವಶಾಲಿಯೂ, ಉದಾರಿಯೂ ಆದ ದೊರೆ. ಸಹನಶೀಲ ಧೋರಣೆಯುಳ್ಳ ಈತ ಸಂಸ್ಕೃತಕ್ಕೆ ತುಂಬ ಪ್ರೋತ್ಸಾಹವನ್ನು ಕೊಟ್ಟಿದ್ದ.

ಇವನ ಕಾಲದಲ್ಲಿ ಸಂಸ್ಕೃತದ 'ಮಹಾಭಾರತ' ಹಾಗೂ ಕಲ್ಹಣನ 'ರಾಜತರಂಗಿಣಿಗಳು' ಪರ್ಷಿಯನ್ ಭಾಷೆಗೆ ಅನುವಾದಿಸಲ್ಪಟ್ಟವು. ಕ್ರಿ.ಶ. 1470ರಲ್ಲಿ ಈತ ತೀರಿಕೊಂಡಾಗ ರಾಜ್ಯದಲ್ಲಿ ಅರಾಜಕತೆ ಉಂಟಾಯಿತು. ಕ್ರಿ.ಶ. 1530ರಲ್ಲಿ ಮಿರ್ಜಾಹೈದರ್ ಎಂಬ ಹೆಸರಿನ, ಹುಮಾಯೂನ್‌ನ ಸಂಬಂಧಿ ಕಾಶ್ಮೀರವನ್ನು ಗೆದ್ದುಕೊಂಡನು.

**ಒರಿಸ್ಸಾ**

ಒರಿಸ್ಸಾ ಯಾವ ಮುಸ್ಲಿಂ ದೊರೆಯ ಅಧೀನಕ್ಕೂ ಸಿಗದ ಒಂದು ಹಿಂದೂ ರಾಜ್ಯವಾಗಿತ್ತು. ಬಂಗಾಳವು ದಕ್ಷಿಣದವರೆಗೆ ವಿಸ್ತರಣಗೊಳ್ಳುವುದನ್ನು ತಪ್ಪಿಸುವ ಪ್ರಬಲ ತಡೆಯನ್ನು ಒಡ್ಡಿತ್ತು. ಆದರೆ ಈ ರಾಜ್ಯವು ಉತ್ತರ ಭಾರತದ ರಾಜಕೀಯದ ಮೇಲೆ ಯಾವ ಹೆಚ್ಚಿನ ಪ್ರಭಾವವನ್ನೂ ಬೀರಲಿಲ್ಲ.

**ಗುಜರಾತ್**

ಕ್ರಿ.ಶ. 1401ರಲ್ಲಿ ಜಾಫರ್ ಖಾನನ ಆಳ್ವಿಕೆಯಲ್ಲಿ ಈ ರಾಜ್ಯ ಸ್ವತಂತ್ರವಾಯಿತು. ಗುಜರಾತಿನ ಅತ್ಯಂತ ಪ್ರಸಿದ್ಧ ದೊರೆಗಳಲ್ಲಿ ಒಬ್ಬನೆಂದರೆ ಮಹಮದ್ ಬೇಘ್ರ (1458–1511). ಪೋರ್ಚುಗೀಸರು ಪ್ರಬಲರಾಗುತ್ತಿದ್ದುದನ್ನು ಈತ ಸಹಿಸಲಿಲ್ಲ. ಆರಂಭದಲ್ಲಿ ಅವರ ಮೇಲೆ ಕೆಲವು ಯಶಸ್ವೀ ದಾಳಿಗಳನ್ನು ಮಾಡಿದ. ಆದರೆ ಅಂತ್ಯದಲ್ಲಿ ಪೋರ್ಚುಗೀಸರು ಇವನನ್ನು ಸೋಲಿಸಿದರು. ಮಹಮದ್ ಬೇಘ್ರನ ನಂತರ ಮುಜಾಫರ್ ಷಾ II ಪಟ್ಟಕ್ಕೆ ಬಂದ. ಈತ ತನ್ನ ಜೀವಮಾನವನ್ನೆಲ್ಲ ಹೋರಾಟದಲ್ಲೇ ಕಳೆಯಬೇಕಾಯಿತು. ಕೊನೆಗೆ ಮೇವಾಡದ ರಾಣಾಸಂಗ ಈತನನ್ನು ಸೋಲಿಸಿದ. ಬೇಘ್ರನ

ಮಗ ಬಹದ್ದೂರ್ 1526ರಲ್ಲಿ ಪಟ್ಟಕ್ಕೆ ಬಂದ. ಈತ ತನ್ನ ರಾಜ್ಯವನ್ನು ಮೇವಾರದವರೆಗೂ ವಿಸ್ತರಿಸಿ ಕ್ರಿ.ಶ. 1534ರಲ್ಲಿ ಚಿತ್ತೂರಿನ ಮೇಲೆ ಹಠಾತ್ತನೆ ದಾಳಿ ಮಾಡಿದ. ಈತ ಪೋರ್ಚುಗೀಸರ ವಿರುದ್ಧವೂ ಹೋರಾಡಬೇಕಾಯಿತು. ಈತನ ಮರಣಾನಂತರ ರಾಜ್ಯದಲ್ಲಿ ಸಂಪೂರ್ಣ ಅರಾಜಕತೆ ಮೂಡಿ ಪತನ ಸನ್ನಿಹಿತವಾಯಿತು.

**ಮಾಳವ**

ಫಿರೂಜ್ ತುಘಲಕನ ಕಾಲದಿಂದ ಇದು ಸ್ವತಂತ್ರ ರಾಜ್ಯವಾಗಿತ್ತು. ಮಾಳವದ ಘೋರಿ ಸಂತತಿಯು ಟರ್ಕಿಯ ಖಿಲ್ಜಿವಂಶದ ಮಹಮೂದ್ ಖಾನನ ಕಾಲದಲ್ಲಿ ನಿರ್ಮೂಲಗೊಂಡಿತು. ಮಹಮೂದ್ ಖಾನನ ನಂತರ ಘಿಯಾಸುದೀನ್ ಮತ್ತು ನಾಸಿರುದೀನ್ ಅವರು ಕ್ರಮವಾಗಿ ರಾಜ್ಯವಾಳಿದರು. ಈ ವಂಶದ ಕೊನೆಯ ದೊರೆ ಎರಡನೇ ಮಹಮೂದ್. ಚಾಂದೇರಿಯ ರಜಪೂತ ದೊರೆ ಮೇದಿನಿ ರಾಯ್ ಈತನನ್ನು ಸೋಲಿಸಿದ. ಮುಸ್ಲಿಂ ಕುಲೀನರ ಸ್ಥಾನದಲ್ಲಿ ರಜಪೂತ ಕುಲೀನರನ್ನು ಸ್ಥಾಪಿಸಲಾಯಿತು. ತನ್ನ ವಿರುದ್ಧ ಬಂಡೆದ್ದ ಮುಸ್ಲಿಂ ಕುಲೀನರನ್ನು ರಾಯ್ ಹತ್ತಿಕ್ಕಿದನು. ಕ್ರಿ.ಶ. 1531ರಲ್ಲಿ ಗುಜರಾತಿನ ಬಹದೂರ್ ಷಾ ಮಾಳವವನ್ನು ಗೆದ್ದುಕೊಂಡ.

**ಬಂಗಾಳ**

ಫಿರೋಜ್ ತುಘಲಕನ ಕಾಲದಿಂದ ಬಂಗಾಳವು ಒಂದು ಸ್ವತಂತ್ರ ರಾಜ್ಯವಾಗಿತ್ತು. ಈತನ ರಾಜಸಂತತಿಯನ್ನು ಹುಸೇನೀ ಸಂತತಿ ಎಂದು ಕರೆಯುತ್ತಾರೆ. ಅಲಾವುದ್ದೀನ್ ಹುಸೇನ ಈ ವಂಶದ ಪ್ರಥಮ ರಾಜ. ಈತನಿಗೂ ಸಿಕಂದರ್ ಲೋದಿಗೂ ಘರ್ಷಣೆಯುಂಟಾಗಿತ್ತು. ಸಂಧಾನಕ್ಕೆ ಮಣಿದು ಅಲಾವುದ್ದೀನನು ಬಿಹಾರದ ಪೂರ್ವಪ್ರಾಂತಗಳನ್ನು ಗೌರವಿಸಿದ. ಈತನ ಮಗ ನುಸರತ್ ಷಾ ಬಂಗಾಳಿ ಸಾಹಿತ್ಯದ ಪೋಷಕನಾಗಿದ್ದ. ಈತನ ಅಪ್ಪಣೆಯಂತೆ ಮಹಾಭಾರತವನ್ನು ಬಂಗಾಳಿಗೆ ಅನುವಾದಿಸಲಾಯಿತು. ಈತನ ಆಳ್ವಿಕೆಯಲ್ಲಿ ರಾಜ್ಯದಲ್ಲಿ ಶಾಂತಿಯಿತ್ತು, ಏಳಿಗೆಯಿತ್ತು.

**ಸಿಂಧ್**

ಮಹಮದ್ ಬಿನ್ ತುಘಲಕನ ಆಳ್ವಿಕೆಯ ಕೊನೆಯ ಅವಧಿಯಲ್ಲಿ ಸಿಂಧ್ ಒಂದು ಸ್ವತಂತ್ರ ಸಂಸ್ಥಾನವಾಗಿತ್ತು. ಆದರೆ ಹದಿನಾರನೇ ಶತಮಾನದ ಆರಂಭದಲ್ಲಿ ರಾಜ್ಯದಲ್ಲಿ ಗೊಂದಲ, ಸ್ವಚ್ಛಂದತೆ ಹೆಚ್ಚಿತ್ತು. ಸುಮಾರಾ ವಂಶವು ಪತನಮುಖಿಯಾಗಿತ್ತು. ಈ ಸಂದರ್ಭದಲ್ಲಿ ಕಾಂದಹಾರದ ರಾಜ್ಯಪಾಲನಿಗೆ ಈ ದೇಶದ ಮೇಲೆ ಒಂದು ಕಣ್ಣಿತ್ತು. ಕ್ರಿ.ಶ. 1510ರಲ್ಲಿ ಷಾ ಬೇಗ್ ಎಂಬಾತನು ಸುಬ್ರಾನನ್ನು ಸೋಲಿಸಿ ಸಿಂಧ್ ಪ್ರಾಂತವನ್ನು ಆಕ್ರಮಿಸಿಕೊಂಡನು. ಈತನ ಮಗ ಷಾ ಹುಸೇನ್ ಮುಲ್ತಾನನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು.

ಬಾಬರನ ದಾಳಿಯ ಸಮಯದಲ್ಲಿ ಆಫ್‌ಘನರ ಅಧಿಕಾರ ತನ್ನ ಅತ್ಯುನ್ನತ ನೆಲೆಯಲ್ಲಿತ್ತು. ತನ್ನ ನೆನಪಿನ ಕಥನ 'ತುಜುಖಿ ಬಾಬರಿ'ಯಲ್ಲಿ ಬಾಬರನೇ ಸ್ವತಃ ಭಾರತದ ಸ್ಥಿತಿಗತಿಗಳನ್ನು ವಿವರಿಸಿದ್ದಾನೆ.

## ಅಭ್ಯಾಸ

**I. ಸಂಕ್ಷೇಪವಾಗಿ ಉತ್ತರಿಸಿ.**

1. ಬಾಬರನ ದಾಳಿಯ ಸಮಯದಲ್ಲಿ ಭಾರತದ ಸ್ಥಿತಿ ಹೇಗಿತ್ತು?
2. ಈ ಅವಧಿಯ ಉತ್ತರ ಭಾರತದ ಯಾವುದಾದರೂ ಮೂರು ರಾಜ್ಯಗಳ ಬಗೆಗೆ ಟಿಪ್ಪಣಿ ಬರೆಯಿರಿ.

**II. ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| ಬಬ್ಬುಲ್ ಖಾನ್ | ಮೇವಾಡ |
| ತಪತಿ ನದಿ | ಕಲ್ಹಣ |
| ರಾಣಾಸಂಗ | ದೆಹಲಿ ರಾಜ್ಯ |
| ರಾಜತರಂಗಿಣಿ | ಖಾನ್‌ದೇಶ |

**III. ಭರ್ತಿ ಮಾಡಿ.**

1. ಗುಜರಾತ್ ಪ್ರಾಂತವು....... ಕಾಲದಲ್ಲಿ ಸ್ವತಂತ್ರವಾಯಿತು.
2. 1531ರಲ್ಲಿ ಮಾಳವವನ್ನು ಗೆದ್ದವನು.......
3. ಬಂಗಾಳದಲ್ಲಿ ಆಳುತ್ತಿದ್ದ ಸಂತತಿ ಯಾವುದೆಂದರೆ.......

## ವಿಜಯನಗರ ಸಾಮ್ರಾಜ್ಯ

ಕರ್ನಾಟಕದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಒಂದು ಮಹತ್ವದ ಘಟನೆಯಾಗಿದೆ. ವಿಜಯನಗರ ಸಾಮ್ರಾಜ್ಯಕ್ಕೆ ಪ್ರಾಮುಖ್ಯ ಬಂದಿರುವುದು ಎರಡು ಕಾರಣಗಳಿಂದ. ಒಂದು ಅದು ಭಾರತೀಯ ಸಂಸ್ಕೃತಿಯ ಪರಂಪರೆಯನ್ನು ಕಾಯ್ದುಕೊಂಡು ಬಂದದ್ದು. ಎರಡನೆಯದು ಅದು ಮುಸ್ಲಿಂ ಆಳ್ವಿಕೆಯ ಪ್ರಸರಣವನ್ನು ತಡೆಯುವ ಅಡ್ಡಗಟ್ಟೆಯಾಯಿತೆಂಬುದು. ಮೂರು ಶತಮಾನಗಳವರೆಗೆ ಹೀಗೆ ಅಭೇದ್ಯವಾಗಿ ನಿಂತ ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲಿ ಹಿಂದೂ ಸಂಸ್ಕೃತಿಯನ್ನು ರಕ್ಷಿಸಿತು.

ಹದಿನಾಲ್ಕನೆಯ ಶತಮಾನದಲ್ಲಿ ದೆಹಲಿಯ ಸುಲ್ತಾನರು ದಕ್ಷಿಣ ಭಾರತದ ಮೇಲೆ ಅಸಂಖ್ಯಾತ ದಾಳಿಗಳನ್ನು ಆರಂಭಿಸಿದರು. ಇವುಗಳ ಪರಿಣಾಮವಾಗಿ ದಕ್ಷಿಣ ಭಾರತದ ಅನೇಕ ರಾಜ್ಯಗಳು ಪತನ ಹೊಂದಿದವು. (ಯಾದವರು, ಕಾಕತೀಯರು, ಹೊಯ್ಸಳರು ಮತ್ತು ಪಾಂಡ್ಯರು) ಈ ಏರುಪೇರುಗಳಿಂದಾಗಿ ಒಂದು ರಾಜಕೀಯ ಶೂನ್ಯತೆ ಉಂಟಾಗಿ ಅದು ದಕ್ಷಿಣದಲ್ಲಿ ಒಂದು ಹಿಂದೂ ಸಾಮ್ರಾಜ್ಯದ ಉದಯಕ್ಕೆ ಅವಕಾಶವನ್ನು ಒದಗಿಸಿತು. ಈ ರಾಜಕೀಯ ಶೂನ್ಯವನ್ನು ತುಂಬುವುವಕ್ಕಾಗಿ ಕ್ರಿ.ಶ. 1336ರಲ್ಲಿ ವಿಜಯನಗರ ಸಾಮ್ರಾಜ್ಯ ಆರಂಭಗೊಂಡಿತು.

ಕ್ರಿ.ಶ. 1336ರಿಂದ 1546ರವರೆಗೆ ನಾಲ್ಕು ಸಂತತಿಗಳು ವಿಜಯನಗರವನ್ನು ಆಳಿವೆ. ಅವು ಕ್ರಮವಾಗಿ ಸಂಗಮ, ಸಾಳ್ವ, ತುಳುವ ಹಾಗೂ ಆರವೀಡು ಸಂತತಿಗಳು. ವಿಜಯನಗರದ ಸಂಸ್ಥಾಪಕರು ಸಂಗಮ ವಂಶದ ಸೋದರರಾದ ಹಕ್ಕ ಬುಕ್ಕರು. ಸಂಗಮ ವಂಶದ ಮೊದಲ ದೊರೆ ಒಂದನೇ ಹರಿಹರ. ತುಂಗಭದ್ರಾ ನದಿಯ ದಕ್ಷಿಣ ದಂಡೆಯಲ್ಲಿ ಈತ ವಿಜಯನಗರವನ್ನು ಸ್ಥಾಪಿಸಿದ. ಈತನ ನಂತರ ಬಂದ ಒಂದನೇ ಬುಕ್ಕನು ಒಬ್ಬ ವೀರಾಗ್ರಣಿಯಾಗಿದ್ದ. ಈತನು ಮಧುರೆಯ ಸುಲ್ತಾನನನ್ನು ಕಿತ್ತೆಸೆದು ದಕ್ಷಿಣಾಂತ ಪ್ರದೇಶದಲ್ಲಿ ಮುಸ್ಲಿಂ ರಾಜ್ಯವೇ ಇರದಂತೆ ಮಾಡಿದ. ಸಂಗಮ ವಂಶದ ಇನ್ನೊಬ್ಬ ಪ್ರಸಿದ್ಧ ದೊರೆ ಎರಡನೆಯ ದೇವರಾಯ. ದೂರದ ಸಿಲೋನ್ ದ್ವೀಪದ ದೊರೆ ಕೂಡ ಈತನಿಗೆ ಕಪ್ಪವನ್ನು ಕೊಡುತ್ತಿದ್ದ. ಈತ ಸಾಹಿತ್ಯಕ್ಕೂ ಪ್ರೋತ್ಸಾಹವನ್ನು ನೀಡಿದನು. ಈ ದೊರೆ ಬಹಮನೀ ಸುಲ್ತಾನರ ವಿರುದ್ಧ ಹೋರಾಟವನ್ನು ಮುಂದುವರಿಸಿದನು. ವಿಜಯನಗರದ ದೊರೆಗಳ ಮತ್ತು ಬಹುಮನಿ ಸುಲ್ತಾನರ ನಡುವಣ ಹೋರಾಟ ವಿಜಯನಗರ ಸಾಮ್ರಾಜ್ಯದ ಅವಧಿಯ ಉದ್ದಕ್ಕೂ ನಡೆದುಕೊಂಡೇ ಬಂದಿದೆ. ಕೃಷ್ಣಾ, ತುಂಗಭದ್ರಾ ನದಿಗಳ ನಡುವಣ ಫಲವತ್ತಾದ ಭೂಮಿಯುಳ್ಳ ರಾಯಚೂರು ಪ್ರದೇಶ ಈ ಎರಡು ಸಾಮ್ರಾಜ್ಯಗಳ ಹೋರಾಟದ ಪ್ರತಿಷ್ಠಾ ಕೇಂದ್ರವಾಗಿತ್ತು. ಸಂಗಮ ವಂಶದ ಕೊನೆಯ ದೊರೆಗಳು ದುರ್ಬಲರು.

ಕ್ರಿ.ಶ. 1485ರಲ್ಲಿ ತಿರುಪತಿಯ ಸಮೀಪದ ಚಂದ್ರಗಿರಿಯ ಮಹಾ ಮಂಡಲೇಶ್ವರನಾಗಿದ್ದ ಸಾಳುವ ನರಸಿಂಹನು ವಿಜಯನಗರದ ಮೇಲೆ ತನ್ನ ಆಧಿಪತ್ಯವನ್ನು ಸ್ಥಾಪಿಸಿದನು. ಸಾಳುವ ಮನೆತನವು ಕ್ರಿ.ಶ. 1505ರವರೆಗೆ ವಿಜಯನಗರವನ್ನು ಆಳಿತು.

ತುಳುವ ವಂಶಕ್ಕೆ ಸೇರಿದ ಕೃಷ್ಣದೇವರಾಯನು ವಿಜಯನಗರದ ಚಕ್ರವರ್ತಿಗಳಲ್ಲಿ ಅತ್ಯಂತ ಪ್ರಬಲನಾದವನು. ಈತ 1509ರಲ್ಲಿ ಗದ್ದುಗೆ ಏರಿ 1530ರವರೆಗೆ ರಾಜ್ಯವನ್ನು ಆಳಿದನು. ಈತ ಒಬ್ಬ ಮಹಾ ದಿಗ್ವಿಜಯಿ. ಅನೇಕ ಯುದ್ಧಗಳನ್ನು ಮಾಡಿ ವಿಜಯನಗರ ಸಾಮ್ರಾಜ್ಯದ ಗಡಿಗಳನ್ನು ವಿಸ್ತರಿಸಿದವನು. ಈತನು ರಾಯಚೂರು ದೋ ಆಬ್ ಪ್ರದೇಶವನ್ನು ತನ್ನ ವಶಕ್ಕೆ ತೆಗೆದುಕೊಂಡನು. ಆದಿಲ್ ಷಾಹಿಗಳ ರಾಜಧಾನಿ ಬಿಜಾಪುರವನ್ನು ವಿಜಯಶಾಲಿಯಾಗಿ ಪ್ರವೇಶಿಸಿ ಅಲ್ಲಿ ನಾಲ್ಕು ದಿನ ತಂಗಿದನು. ಕಲ್ಬುರ್ಗಿಯ ಬಹಮನಿ ಸುಲ್ತಾನನನ್ನು ಸೋಲಿಸಿ ಅವನ ಮಗ ಎರಡನೇ ಸುಲ್ತಾನ್ ಮಹಮದ್ ಷಾನನ್ನು ಗದ್ದುಗೆಗೇರಿಸಿದನು. ವಿಜಯದ ಸ್ಮಾರಕವಾಗಿ ಯವನರಾಜ್ಯ ಸ್ಥಾಪನಾಚಾರ್ಯ ಎಂಬ ಬಿರುದನ್ನು ಪಡೆದ.

ಕೃಷ್ಣದೇವರಾಯನು ಒರಿಸ್ಸಾದ ದೊರೆ ಗಜಪತಿಯನ್ನು ಸೋಲಿಸಿದನು. ಬಂಡೆದ್ದ ಉಮ್ಮತ್ತೂರಿನ ಪಾಳೆಯಗಾರನಾದ ಗಂಗರಾಜನನ್ನು ಗೆದ್ದು ಶಿವನ ಸಮುದ್ರ ಮತ್ತು ಶ್ರೀರಂಗಪಟ್ಟಣಗಳನ್ನು ವಶಪಡಿಸಿಕೊಂಡನು.

ಕೃಷ್ಣದೇವರಾಯನು ತನ್ನ ರಾಜ್ಯದ ಎಲ್ಲೆಗಳನ್ನು [illegible] ಗೋವೆಯವರೆಗೆ, ಪೂರ್ವದಲ್ಲಿ ವಿಶಾಖಪಟ್ಟಣದವರೆಗೆ ಮತ್ತು [illegible] ಕನ್ಯಾಕುಮಾರಿಯವರೆಗೆ ವಿಸ್ತರಿಸಿದನು.

ಕೃಷ್ಣದೇವರಾಯ ಅತಿ ಸಮರ್ಥ ಆಡಳಿತಗಾರನಾಗಿದ್ದನು. ಆತನು ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ತಂದನು. ''ಪಟ್ಟಕ್ಕೆ ಬಂದ ದೊರೆ ಸದಾ ಧರ್ಮತತ್ಪರನಾಗಿ ರಾಜ್ಯವಾಳಬೇಕು.'' ಎಂಬ ಮಾತಿನಲ್ಲಿ ಅವನಿಗೆ ನಂಬಿಕೆಯಿತ್ತು. ವಾಣಿಜ್ಯ ವ್ಯವಹಾರಗಳಿಗೆ ಆತನು ಅಪಾರ ಪ್ರೋತ್ಸಾಹವನ್ನು ನೀಡಿದನು. ಪೋರ್ಚುಗೀಸರೊಂದಿಗೆ ಅನೇಕ ವ್ಯವಹಾರದ ಒಪ್ಪಂದಗಳನ್ನು ಮಾಡಿಕೊಂಡನು. ತನ್ನ ರಾಜ್ಯದ ಬಂದರುಗಳನ್ನು ಉತ್ತಮ ಪಡಿಸಿದನು. ವಿದೇಶೀ ನಾವಿಕರಿಗೆ ಸೌಲಭ್ಯಗಳನ್ನು ಒದಗಿಸಿಕೊಟ್ಟನು. ಈ ಕ್ರಮಗಳಿಂದಾಗಿ ಸಾಮ್ರಾಜ್ಯದ ಸಂಪತ್ತು ಹೆಚ್ಚಿತು.

ಕೃಷ್ಣದೇವರಾಯನು ಸಾಹಿತ್ಯಕ್ಕೆ ಅಪಾರ ಪ್ರೋತ್ಸಾಹವನ್ನು ನೀಡಿದನು. ಆತನ ಆಸ್ಥಾನದಲ್ಲಿ ಹಲವಾರು ಕವಿಗಳಿದ್ದರು. ಅಲ್ಲಸಾನಿ ಪೆದ್ದನ್ನನು ದೊಡ್ಡ ಆಸ್ಥಾನ ಕವಿಯಾಗಿದ್ದನು. ಸ್ವಯಂ ರಾಜನೇ ದೊಡ್ಡ ವಿದ್ವಾಂಸನಾಗಿದ್ದನು. 'ಆಮುಕ್ತಮಾಲ್ಯದ' ''ಜಾಂಬವತೀ ಕಲ್ಯಾಣ' ಇವು ಕ್ರಮವಾಗಿ ಆತನು ಬರೆದ ತೆಲುಗು ಮತ್ತು ಸಂಸ್ಕೃತ ಕಾವ್ಯಗಳು.

ಈತನ ಅವಧಿಯಲ್ಲಿ ಹಂಪೆಯಲ್ಲಿ ಪ್ರಸಿದ್ಧವಾದ ಕೃಷ್ಣಸ್ವಾಮಿ ಮತ್ತು ವಿಠ್ಠಲ ಸ್ವಾಮಿ ದೇವಾಲಯಗಳು ನಿರ್ಮಾಣಗೊಂಡವು.

ಕೃಷ್ಣದೇವರಾಯನು ಒಬ್ಬ ವಿಶಿಷ್ಟ, ಪ್ರತಿಭಾವಂತ ವ್ಯಕ್ತಿ ಎಂಬುದರಲ್ಲಿ ಸಂದೇಹವಿಲ್ಲ. ಈತನ ಅವಧಿಯಲ್ಲಿ ವಿಜಯನಗರ ಸಾಮ್ರಾಜ್ಯವು ತನ್ನ ವೈಭವದ ಶಿಖರವನ್ನು ಮುಟ್ಟಿತು. ಕೃಷ್ಣದೇವರಾಯನು 1530ರಲ್ಲಿ ತೀರಿಕೊಂಡನು.

ಕೃಷ್ಣದೇವರಾಯನ ಉತ್ತರಾಧಿಕಾರಿಗಳು ದುರ್ಬಲರಾಗಿದ್ದರು. ಈ ಕಾರಣದಿಂದ ಅಧಿಕಾರವು ಅಳಿಯ ರಾಮರಾಯನಿಗೆ ಬಂದಿತು. ಈತನು 1551ರಲ್ಲಿ ಅಧಿಕಾರಕ್ಕೆ ಬಂದನು. ಈತನು ಬಹಮನಿ ರಾಜ್ಯಗಳಾದ ಬಿಜಾಪುರ, ಗೋಲ್ಕೊಂಡ, ಅಹಮದ್‌ನಗರ ಮತ್ತು ಬೀದರ್‌ಗಳ ಮುಸ್ಲಿಂ ದೊರೆಗಳ ಆಂತರಿಕ ವ್ಯವಹಾರದಲ್ಲಿ ತಲೆ ಹಾಕಿದನು. ಈತನ ಈ ನೀತಿಯಿಂದಾಗಿ ಕುಪಿತರಾದ ದಖನ್ನಿನ ಮುಸ್ಲಿಂ ದೊರೆಗಳೆಲ್ಲ ಒಂದಾಗಿ ವಿಜಯನಗರದ ವಿರುದ್ಧ ನಿಂತರು. ಅವರ ಸಂಯುಕ್ತ ದಾಳಿ ವಿಜಯನಗರದ ಮೇಲೆ ನಡೆಯಿತು. ಕ್ರಿ.ಶ. 1565ರಲ್ಲಿ ರಕ್ಕಸತಂಗಡಿ ಎಂಬಲ್ಲಿ ಒಂದು ನಿರ್ಣಾಯಕ ಯುದ್ಧ ನಡೆಯಿತು. ವಿಜಯನಗರದ ಸೇನೆ ಸೋತು ಹೋಯಿತು. ವಿಜೇತ ಸುಲ್ತಾನರ ಸೇನೆಗಳು ವಿಜಯನಗರದ ರಾಜಧಾನಿ ಹಂಪೆಯನ್ನು ಹಲವಾರು ವಾರಗಳವರೆಗೆ ಕೊಳ್ಳೆಹೊಡೆದವು. ಹಂಪೆಯ ಸಂಪತ್ತುಗಳನ್ನೆಲ್ಲ ವಿಜೇತ ಸುಲ್ತಾನರು ಕೊಂಡೊಯ್ದರು. ಹೀಗೆ ವಿಜಯನಗರದ ವೈಭವ ಮಣ್ಣುಗೂಡಿತು.

ಅನಂತರ ವಿಜಯನಗರ ಸಾಮ್ರಾಜ್ಯವು ತುಂಡು ತುಂಡಾಯಿತು. ಸಂತತಿಯವರು ಮೊದಲು ಪೆನುಗೊಂಡದಲ್ಲಿ ಅನಂತರ ಚಂದ್ರಗಿರಿಯಲ್ಲಿ ರಾಜ್ಯ ಸ್ಥಾಪನೆ ಮಾಡಿದರು. ಆರವೀಡು ವಂಶದ ಕೊನೆಯ ದೊರೆ ಮೂರನೇ ಶ್ರೀರಂಗ. ಈತನ ರಾಜಧಾನಿ ವೆಲ್ಲೂರು. ಬಿಜಾಪುರ ಮತ್ತು ಗೋಲ್ಕೊಂಡಗಳ ಜಂಟಿಸೇನೆಯು ವೆಲ್ಲೂರಿಗೆ ಮುತ್ತಿಗೆ ಹಾಕಿದಾಗ ದೊರೆ ಶ್ರೀರಂಗನು ಬೇಲೂರಿಗೆ ಓಡಿಹೋಗಿ ಕೆಳದಿಯ ಶಿವಪ್ಪನಾಯಕನ ಆಶ್ರಯವನ್ನು ಪಡೆದನು.

**ಆಡಳಿತ ವ್ಯವಸ್ಥೆ**

ವಿಜಯನಗರದ ಅರಸರು ಬಹಳ ದಕ್ಷ ಆಡಳಿತ ವ್ಯವಸ್ಥೆ ಹೊಂದಿದ್ದರು. ವಿಸ್ತಾರವಾದ ಸಾಮ್ರಾಜ್ಯವನ್ನು ನಿಯಂತ್ರಿಸುವುದಕ್ಕಾಗಿ ಆಡಳಿತ ವ್ಯವಸ್ಥೆಯಲ್ಲಿ ಹಲವಾರು ಸುಧಾರಣೆಗಳನ್ನು ಮಾಡಿದರು. ಪ್ರಧಾನ ಮಂತ್ರಿ ಹಾಗೂ ಹಲವಾರು ಮಂತ್ರಿಗಳುಳ್ಳ ಮಂತ್ರಿ ಮಂಡಲದ ನೆರವಿನಿಂದ ದೊರೆ ಆಡಳಿತವನ್ನು ನಿರ್ವಹಿಸುತ್ತಿದ್ದನು. ಎಲ್ಲ ಮಂತ್ರಿಗಳೂ ದಂಡನಾಯಕರಾಗಿದ್ದರು.

ವಿಜಯನಗರ ಸಾಮ್ರಾಟರು ಒಂದು ಭಾರಿಯ ಸೇನೆಯನ್ನು ಸಜ್ಜುಗೊಳಿಸಿದ್ದರು. ಸೇನೆಯು ಒಂದು ಲಕ್ಷ ಸೈನಿಕರು, ಇಪ್ಪತ್ತು ಸಾವಿರ ಕುದುರೆಗಳು, ಒಂಬತ್ತು ಸಾವಿರ ಆನೆಗಳುನ್ನು ಹೊಂದಿತ್ತು. ಯುದ್ಧ ಸಮಯದಲ್ಲಿ ಸಾಮಂತ ನಾಯಕರೂ ಸೇನಾ ಪಡೆಗಳನ್ನು ಒದಗಿಸುತ್ತಿದ್ದರು.

ಕೆಲವು ಸಾಮಂತ ನಾಯಕರು ತಮ್ಮದೇ ಸಂಸ್ಥಾನಗಳನ್ನು ಹೊಂದಿದ್ದರು. ಅವರನ್ನು ರಾಜನು ಮಾನ್ಯ ಮಾಡಿದ್ದನು. ಈ ಪದ್ಧತಿಯನ್ನು 'ನಾಯಕರ ವ್ಯವಸ್ಥೆ' ಎಂದು ಕರೆಯಲಾಗಿದೆ.

ಸಾಮ್ರಾಜ್ಯವನ್ನು ಆಡಳಿತ ಸೌಕರ್ಯದ ದೃಷ್ಟಿಯಿಂದ ರಾಜ್ಯ, ವಿಷಯ, ನಾಡು, ಕಂಪಣ, ಗ್ರಾಮ ಎಂದು ವಿಭಜಿಸಲಾಗಿತ್ತು.

ರಾಜ್ಯದ ಆದಾಯದ ಮುಖ್ಯ ಭಾಗ ಭೂಕಂದಾಯದಿಂದ ಬರುತ್ತಿದ್ದಿತು. ಬೇರೆ ಆದಾಯದ ಬಾಬುಗಳೆಂದರೆ ಮನೆಗಂದಾಯ, ಅಂಗಡಿ ಕಂದಾಯ, ವೃತ್ತಿತೆರಿಗೆ ಸುಂಕ ಇತ್ಯಾದಿ. ರಾಜರು ಚಿನ್ನದ, ಬೆಳ್ಳಿಯ ಹಾಗೂ ತಾಮ್ರದ ನಾಣ್ಯಗಳನ್ನು ಟಂಕಿಸುತ್ತಿದ್ದರು. ಗದ್ಯಾಣ ಅಥವಾ ವರಾಹ ಎಂಬ ಚಿನ್ನದ ನಾಣ್ಯ ಮುಖ್ಯ ನಾಣ್ಯವಾಗಿತ್ತು.

ವಿಜಯನಗರದಲ್ಲಿ ಮತೀಯ ಭೇದಭಾವ ಇರಲಿಲ್ಲ. ಬಾರ್ಬೋಸಾ ಎಂಬ ಪೋರ್ಚುಗೀಸ್ ಯಾತ್ರಿಕ ಹೀಗೆ ಹೇಳಿದ್ದಾನೆ. "ಚಕ್ರವರ್ತಿ ಎಲ್ಲರಿಗೂ ಸ್ವಾತಂತ್ರ್ಯ ನೀಡಿದ್ದಾನೆ. ಈ ರಾಜ್ಯದಲ್ಲಿ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಜ್ಯೂ ಯಾರೇ ಆಗಲಿ ಯಾವುದೇ ಕಿರುಕುಳಕ್ಕೆ ಒಳಗಾಗದೆ ಜೀವಿಸಬಹುದು." ಚಕ್ರವರ್ತಿಗಳು, ಸಾಮಂತನಾಯಕರು ಮತ್ತು ವಣಿಕರು ದೇವಾಲಯ, ಮಠ ಮತ್ತು ಇತರ ಧಾರ್ಮಿಕ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು.

**ಸಾಮಾಜಿಕ ಸ್ಥಿತಿಗತಿಗಳು**

ವಿಜಯನಗರದ ರಾಜರುಗಳು ವರ್ಣಾಶ್ರಮ ಧರ್ಮವನ್ನು ಪ್ರೋತ್ಸಾಹಿಸಿದರು. ಜಾತಿ ನಿಯಮವನ್ನು ಕಟ್ಟುನಿಟ್ಟಾಗಿ ಅನುಸರಿಸಲಾಗುತ್ತಿತ್ತು. ಯುದ್ಧದಲ್ಲಿ ಪರಾಕ್ರಮ ತೋರಿದವರಿಗೆ ಜಾತಿ ಭೇದ ಮಾಡದೆ ಸೇನಾನಿ, ಪಾಳೆಗಾರರಾಗಿ ನೇಮಿಸುತ್ತಿದ್ದರು. ಗುಲಾಮಗಿರಿಯು ಬಳಕೆಯಲ್ಲಿತ್ತು. ಸ್ತ್ರೀಯರಿಗೆ ಸಾಕಷ್ಟು ಸ್ವಾತಂತ್ರ್ಯವಿತ್ತು.

ಸತೀ ಪದ್ಧತಿ, ಬಾಲ್ಯವಿವಾಹ, ದೇವದಾಸಿ ಪದ್ಧತಿ ಮೊದಲಾದ ಸಾಮಾಜಿಕ ಪದ್ಧತಿಗಳು ಆಚರಣೆಯಲ್ಲಿದ್ದವು. ಮಹಾನವಮಿ, [illegible], ಹೋಳಿ ಮತ್ತು ವಸಂತೋತ್ಸವ ಮೊದಲಾದ ಹಬ್ಬಗಳನ್ನು ಜನರು [illegible].

ಈ ಅವಧಿಯಲ್ಲಿ ಮಹಾನವಮಿಯನ್ನು ಒಂದು ರಾಷ್ಟ್ರೀಯ ಉತ್ಸವವಾಗಿ ಆಚರಿಸಲಾಗುತ್ತಿತ್ತು. ರಾಜಧಾನಿಯಲ್ಲಿ ಈ ಉತ್ಸವವನ್ನು ಅದ್ದೂರಿಯಾಗಿ, ವೈಭವಯುತವಾಗಿ ನಡೆಸಲಾಗುತ್ತಿತ್ತು.

**ಆರ್ಥಿಕ ಸ್ಥಿತಿ**

ವಿಜಯನಗರ ಸಾಮ್ರಾಟರು ರೈತರಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿದ್ದರು. ಎರಡನೆಯ ಹರಿಹರನ ಕಾಲದಲ್ಲಿ ಪೆನುಗೊಂಡೆಗೆ ನೀರು ಸರಬರಾಜು ಮಾಡಲು ನದಿಗೆ ಕಾಲುವೆಯನ್ನು ತೋಡಲಾಗಿತ್ತು. ರಾಜರು ವಾಣಿಜ್ಯ, ವ್ಯವಹಾರ, ಕೈಗಾರಿಕೆ ಮತ್ತು ಕುಶಲಕಲೆಗಳಿಗೆ ಪ್ರೋತ್ಸಾಹ ನೀಡಿದರು. ರಾಜಧಾನಿಯೇ ಒಂದು ಚುರುಕಿನ ವ್ಯಾಪಾರ ಕೇಂದ್ರವಾಗಿತ್ತು. ಅನೇಕ ಖಂಡಗಳ ವ್ಯಾಪಾರಿಗಳನ್ನು ಅದು ಆಕರ್ಷಿಸಿತ್ತು. ಬಾರ್ಬೋಸಾ ಹೇಳುವಂತೆ "ವಿಜಯನಗರವು ಚುರುಕಿನ ವಾಣಿಜ್ಯ ಕ್ಷೇತ್ರವಾಗಿತ್ತು. ಪೆಗುವಿನಿಂದ ವಜ್ರ ವೈಡೂರ್ಯಗಳು, ಚೈನಾ, ಅಲೆಗ್ಸಾಂಡ್ರಿಯಾಗಳಿಂದ ರೇಷ್ಮೆ, ಮಲಬಾರಿನಿಂದ ರಸಗಂಧಕ, ಕರ್ಪೂರ, ಕಸ್ತೂರಿ, ಮೆಣಸು, ಶ್ರೀಗಂಧ ಇವುಗಳನ್ನು ಅಲ್ಲಿ ತರಿಸಲಾಗುತ್ತಿತ್ತು."

**ಧರ್ಮ ನೀತಿ**

ವಿಜಯನಗರದ ಅರಸರಿಗೆ ಎಲ್ಲ ಮತಧರ್ಮಗಳ ಬಗೆಗೆ ಸಹಾನುಭೂತಿಯಿತ್ತು. ರಾಜರು, ಅಧಿಕಾರಿಗಳು ಮತ್ತು ವರ್ತಕರು ಅನೇಕ ಮಠ ಮಾನ್ಯಗಳಿಗೂ, ದೇವಾಲಯ ಮತ್ತಿತರ ಧರ್ಮಸಂಸ್ಥೆಗಳಿಗೂ ಪ್ರೋತ್ಸಾಹ ನೀಡುತ್ತಿದ್ದರು. ಭಕ್ತಿ ಸಂಪ್ರದಾಯವು ಮಹತ್ವವನ್ನು ಪಡೆದಿತ್ತು. ಜೈನಧರ್ಮ, ಇಸ್ಲಾಂಧರ್ಮ, ಕ್ರೈಸ್ತಧರ್ಮಗಳಿಗೂ ರಾಜರ ಪ್ರೋತ್ಸಾಹ ರಕ್ಷಣೆಗಳಿದ್ದವು. ರಾಜರಿಗೆ 'ಹಿಂದೂ ರಾಯ ಸುರತ್ರಾಣ' 'ವೈದಿಕ ಮಾರ್ಗ ಸಂಸ್ಥಾಪನಾಚಾರ್ಯ' ಮೊದಲಾದ ಬಿರುದುಗಳಿದ್ದವು.

**ಸಾಹಿತ್ಯ**

ವಿಜಯನಗರ ಯುಗದಲ್ಲಿ ಸಾಹಿತ್ಯವು ಪ್ರಚಂಡ ಮುನ್ನಡೆಯನ್ನು ಸಾಧಿಸಿತು. ರಾಜರು ಸಂಸ್ಕೃತ, ತೆಲುಗು, ಕನ್ನಡ ಮತ್ತು ತಮಿಳು ಸಾಹಿತ್ಯಗಳನ್ನು ಪೋಷಿಸಿದರು. ವೇದ ಸಾಹಿತ್ಯಕ್ಕೆ ಭಾಷ್ಯಗಳು ರಚಿತವಾದುವು. ರಾಜನಾಥ ಡಿಂಡಿನ ಎಂಬ ವಿದ್ವಾಂಸ 'ಸಾಳುವಾಭ್ಯುದಯ'ವನ್ನು ರಾಜನಾಥ ಡಿಂಡಿನ II ಎಂಬುವರು "ಅಚ್ಯುತಾಭ್ಯುದಯ"ವನ್ನು ರಚಿಸಿದರು. ವಿದ್ಯಾರಣ್ಯರು 'ಶಂಕರ ವಿಜಯ'ವನ್ನು ರಚಿಸಿದರು. ಗಂಗಾಂಬಿಕೆ "ಮಧುರಾವಿಜಯಂ" ಎಂಬ ಸಂಸ್ಕೃತ ಕಾವ್ಯವನ್ನು ಬರೆದಳು.

ಕೃಷ್ಣದೇವರಾಯನ ಆಸ್ಥಾನದಲ್ಲಿ ಅನೇಕ ತೆಲುಗು ಕವಿಗಳು ಇದ್ದರು. ಅಲ್ಲಸಾನಿ ಪೆದ್ದನ್ನನು "ಮನುಚರಿತ್ರಮು" ಬರೆದಿದ್ದಾನೆ. ಕೃಷ್ಣದೇವರಾಯನೇ ಸ್ವತಃ "ಆಮುಕ್ತಮಾಲ್ಯದ"ವನ್ನು ತೆಲುಗಿನಲ್ಲಿ ರಚಿಸಿದ. ಈತನ ಆಸ್ಥಾನದಲ್ಲಿ ತಿಮ್ಮಣ್ಣನೆಂಬ ಕನ್ನಡ ಕವಿಯಿದ್ದನು. ಕುಮಾರವ್ಯಾಸ, ಚಾಮರಸ, ರತ್ನಾಕರವರ್ಣಿ ಮೊದಲಾದವರು ಈ ಅವಧಿಯ ಪ್ರಸಿದ್ಧ ಕನ್ನಡ ಕವಿಗಳು. ಪುರಂದರದಾಸ ಮತ್ತು ಕನಕದಾಸರು

ಭಕ್ತಿಪಂಥವನ್ನು ಜನಪ್ರಿಯಗೊಳಿಸಲು ಸೊಗಸಾದ ಭಕ್ತಿಗೀತೆಗಳನ್ನು ರಚಿಸಿದರು. ವೀರಶೈವ ಸಾಹಿತ್ಯಕ್ಕೂ ಅಪಾರವಾದ ಪ್ರೋತ್ಸಾಹ ಸಿಕ್ಕಿತು.

**ಕಲೆ ಮತ್ತು ವಾಸ್ತುಶಿಲ್ಪ**

ವಿಜಯನಗರಧ ರಾಜರು ಒಂದು ಹೊಸ ವಾಸ್ತುಶಿಲ್ಪ ಶೈಲಿಯನ್ನು ಬೆಳೆಸಿದರು. ಭದ್ರ ಪ್ರಾಕಾರಗಳಿರುವ ದೇವಾಲಯಗಳನ್ನು ಕಟ್ಟಿಸಿದರು. ಇವಕ್ಕೆ ದೊಡ್ಡ ಪ್ರವೇಶದ್ವಾರವೂ, ಎತ್ತರದ ಗೋಪುರವೂ ಇರುತ್ತಿದ್ದುವು. ಕಟ್ಟಲು ಶಿಲ್ಪಿಗಳು ಗಟ್ಟಿಯಾದ ಗ್ರಾನೈಟ್ ಕಲ್ಲುಗಳನ್ನು ಬಳಸಿದರು. ಅಲಂಕಾರಮಯವಾದ ಭಾರಿ ಸ್ತಂಭಗಳನ್ನು ಬಳಸಿರುವುದು ದೇವಾಲಯ ಶಿಲ್ಪದ ಇನ್ನೊಂದು ವೈಶಿಷ್ಟ್ಯ. ಹಂಪೆಯಲ್ಲಿರುವ ವಿಠ್ಠಲಮಂದಿರವು ವಿಜಯನಗರದ ವಾಸ್ತುಶಿಲ್ಪದ ಶೈಲಿಗೆ ಒಂದು ಅದ್ಭುತ ಮಾದರಿ. ಹಜಾರ ರಾಮಸ್ವಾಮಿ ದೇವಾಲಯವು ಇನ್ನೊಂದು ಗಣ್ಯ ರಚನೆ.

ವಿಜಯನಗರ ಸಾಮ್ರಾಜ್ಯದ ಮಹತ್ವದ ಅಂಶವೆಂದರೆ ಮೂರು ಶತಮಾನಗಳವರೆಗೆ ಅದು ವ್ಯವಸ್ಥಿತವಾದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪ್ರಗತಿಗೆ ಸೊಂಟ ಕಟ್ಟಿ ನಿಂತಿತು ಮತ್ತು ಪರಕೀಯ ಶಕ್ತಿಗಳ ಪ್ರವಾಹದೊಳಗೆ ಸೇರದಂತೆ ರಕ್ಷಿಸಿತು.

## ಅಭ್ಯಾಸ

**I. ಭರ್ತಿ ಮಾಡಿ.**

1. ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿದವರು ಸಂಗಮ ಸೋದರರಾದ...... ಮತ್ತು............
2. ಕೃಷ್ಣದೇವರಾಯನು...... ಸಂತತಿಗೆ ಸೇರಿದವನು.
3. ಹಂಪೆಯಲ್ಲಿ ಕೃಷ್ಣಸ್ವಾಮಿ ದೇವಾಲಯವನ್ನು ಕಟ್ಟಿಸಿದ ದೊರೆ.........
4. ರಕ್ಕಸತಂಗಡಿಯ ಯುದ್ಧ ನಡೆದದ್ದು........ ನೇ ವರ್ಷದಲ್ಲಿ.

**II. ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| ಒಂದನೇ ಬುಕ್ಕ | ಯವನ ರಾಜ್ಯ ಪ್ರತಿಷ್ಠಾಪನಾಚಾರ್ಯ |
| ಆರವೀಡು | ವಿಜಯನಗರದ ಅನಂತರದ ರಾಜಧಾನಿ |
| ಕೃಷ್ಣದೇವರಾಯ | ವಿಜಯನಗರದ ಕೊನೆಯ ಸಂತತಿ |
| ಪೆನುಗೊಂಡ | ಮಧುರೆ ಗೆದ್ದುದು |

**III. ಇವುಗಳಿಗೆ ಉತ್ತರಿಸಿ.**

1. ವಿಜಯನಗರದ ಸಂಸ್ಥಾಪಕರು ಯಾರು ?
2. ಎರಡನೇ ದೇವರಾಯನ ಆಳ್ವಿಕೆಯ ಮಹತ್ವವನ್ನು ವಿವರಿಸಿ.

3. ಕೃಷ್ಣದೇವರಾಯನ ದಂಡಯಾತ್ರೆಗಳನ್ನು ವಿವರಿಸಿ. ಅವನ ಸಾಮ್ರಾಜ್ಯದ ವಿಸ್ತಾರವನ್ನು ಗುರುತಿಸಿ.
4. ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಕಲೆ ಶಿಲ್ಪ ಮತ್ತು ಸಾಹಿತ್ಯಗಳಿಗೆ ಪ್ರೋತ್ಸಾಹ ದೊರೆತ ಬಗೆಯನ್ನು ವಿವರಿಸಿ.

## ಬಹಮನಿ ರಾಜ್ಯ

ಬಹಮನಿ ಸುಲ್ತಾನರು ಕರ್ನಾಟಕದ ಉತ್ತರ ಭಾಗವನ್ನು ಆಳುತ್ತಿದ್ದರು. ತುಘಲಕ್ ಸಾಮ್ರಾಜ್ಯವನ್ನು ಒಡೆದು ಹಾಕಲು ನಡೆದ ಅನೇಕ ದಂಗೆಗಳ ಸಂದರ್ಭದಲ್ಲಿ ಬಹಮನಿ ಸಾಮ್ರಾಜ್ಯ ಹುಟ್ಟಿಕೊಂಡಿತ್ತು. ಇದರ ಸಂಸ್ಥಾಪಕ ಜಫರ್ ಖಾನ್.



ಮಹಮದ್ ಬಿನ್ ತುಘಲಕನ ವಿರುದ್ಧ ಬಂಡೆದ್ದ ಕುಲೀನ ವರ್ಗದ ನಾಯಕ ಈತ. ಅಲ್ಲಾವುದ್ದೀನ್ ಬಹಮನ್ ಷಾ ಎಂಬ ಹೆಸರಿನಿಂದ ಕ್ರಿ.ಶ. 1347ರಲ್ಲಿ ತಾನೇ ದಖನ್ನಿನ ರಾಜನೆಂದು ಸ್ವಯಂ ಘೋಷಿಸಿಕೊಂಡನು. ಈತನ ಸಾಮ್ರಾಜ್ಯವು ಪೇಣ್‌ಗಂಗಾ ನದಿಯಿಂದ ಕೃಷ್ಣಾನದಿಯವರೆಗೆ ಮತ್ತು ತೆಲಂಗಾಣದಿಂದ ಅರಬ್ಬೀ ಸಮುದ್ರದವರೆಗೆ ಹರಡಿಕೊಂಡಿತ್ತು. ಈತನ ನಂತರ ಮಗನಾದ ಮಹಮದ್ ಷಾ ಪಟ್ಟಕ್ಕೆ ಬಂದನು. ಈತನು ಒಂದು ಸಂವಿಧಾನವನ್ನು ರಚಿಸಿ ಎಂಟು ಮಂತ್ರಿಗಳ ಒಂದು ಸಚಿವ ಸಂಪುಟವನ್ನು ನೇಮಿಸಿದನು. ವಾರಂಗಲ್ ಮತ್ತು ವಿಜಯನಗರಗಳ ವಿರುದ್ಧ ಹೋರಾಡಿದನು. ಈತನು ಗುಲ್ಬರ್ಗದ ಖ್ಯಾತ ಜಾಮಿ ಮಸೀದಿ ಕಟ್ಟಿಸಿದನು.

### ಫಿರೋಜ್ ಷಾ (1397–1422)

ಬಹಮನಿ ಸುಲ್ತಾನರ ಪೀಳಿಗೆಯಲ್ಲಿ ಎಂಟನೆಯವನಾದ ಫಿರೋಜ್ ಷಾ ಬಹಳ ಪ್ರಸಿದ್ಧನಾದ ದೊರೆ. ಈತ ವಿಜಯನಗರದ ವಿರುದ್ಧ ಮೂರು ಬಾರಿ ಯುದ್ಧ ಮಾಡಿದನು. ತನ್ನ ರಾಜ್ಯದ ಉತ್ತರ ಗಡಿಯ ರಾಜ್ಯಗಳೊಡನೆಯೂ ಯುದ್ಧ ಮಾಡಿದನು. ಈತ ಧರ್ಮಿಷ್ಠನೂ, ವಿದ್ವಾಂಸನೂ ಆಗಿದ್ದ. ಅನೇಕ ವಿದ್ವಾಂಸರು ಮತ್ತು ಕವಿಗಳು ಈತನ ಆಶ್ರಯದಲ್ಲಿದ್ದರು. ತನ್ನ ಪ್ರಜೆಗಳಿಗೆ ಉತ್ತಮ ಶಿಕ್ಷಣ ನೀಡಲು ತುಂಬ ಕಷ್ಟಪಟ್ಟನು.

ಮುಂದಿನ ದೊರೆ ಅಹಮದ್ ಷಾ (1422–1425) ಕೂಡ ಒಬ್ಬ ಯೋಧನಾಗಿದ್ದನು. ಈತ ತನ್ನ ರಾಜ್ಯದ ಉತ್ತರದ ಗಡಿರಾಜ್ಯದೊಂದಿಗೆ ಅನೇಕ ಯುದ್ಧಗಳನ್ನು ಮಾಡಿದನು. ಈ ಘಟ್ಟದಲ್ಲಿ ತನ್ನ ರಾಜ್ಯದ ಕೆಲವು ಭಾಗ ಕೈ ಬಿಟ್ಟಿತಾದರೂ ಈತ ಉತ್ತರ ಗಡಿಯನ್ನು ಭದ್ರಪಡಿಸಿದನು. ರಾಜಧಾನಿಯನ್ನು ಕಲ್ಬುರ್ಗಿಯಿಂದ ಬೀದರಿಗೆ ವರ್ಗಾಯಿಸಿದನು. ಈತನ ಆಳ್ವಿಕೆಯ ಅವಧಿಯಲ್ಲಿ ಟರ್ಕಿ, ಪರ್ಷಿಯಾಗಳ ವಿದೇಶಿ ಅಧಿಕಾರಿಗಳ ಹಾಗೂ ದಖನ್ನಿನ ಮುಸ್ಲಿಮ್ ಅಧಿಕಾರಿಗಳ ನಡುವೆ ಇದ್ದ ವೈಷಮ್ಯದಿಂದಾಗಿ ಇವನ ರಾಜ್ಯವು ಕ್ಷೀಣಿಸುತ್ತ ಬಂದಿತು.

### ಮೂರನೇ ಮಹಮದ್ ಷಾ

ಈತನ ಆಳ್ವಿಕೆಯ ಅವಧಿಯಲ್ಲಿ ಬಹಮನಿ ಸಾಮ್ರಾಜ್ಯವು ತನ್ನ ವೈಭವದ ತುದಿಯನ್ನು ತಲುಪಿತು. ರಾಜ್ಯದ ಮಂತ್ರಿ ಮಹಮದ್ ಗವಾನ್ ವಿಜಯನಗರದ ವಿರುದ್ಧ ಹೋರಾಟ ನಡೆಸಿದನು. ಈತ ಗೋವಾ ದೇಶವನ್ನು ಗೆದ್ದುಕೊಂಡು ಕಂಚಿಯನ್ನು ಕೊಳ್ಳೆ ಹೊಡೆದನು. ಆಂಧ್ರ, ಒರಿಸ್ಸಾಗಳ ಮೇಲೆ ಹೋರಾಟ ನಡೆಸಿ ಯಶಸ್ಸು ಗಳಿಸಿದನು. ಬೀದರಿನಲ್ಲಿ ಒಂದು ಮದರಸಾವನ್ನು (ಕಾಲೇಜು) ಆರಂಭಿಸಿದನು. ಈತ ಇರಾನಿನ ನಿವಾಸಿಯಾದ ವಿದೇಶೀಯನಾಗಿದ್ದನು. ದಖನ್ನಿನ ಮುಸ್ಲಿಮರಿಗೆ ಈತನ ಬಗೆಗೆ ಅಸೂಯೆ ಇತ್ತು. ಆತನ ವಿರುದ್ಧ ಒಳ ಸಂಚು ಹೂಡಿದರು. ದೇಶದ್ರೋಹದ ಆಪಾದನೆಯನ್ನು ಹೊರಿಸಿದರು. ರಾಜನು ಈ ಸಮರ್ಥ ಆಡಳಿತಗಾರನನ್ನು ಕೊಲ್ಲುವಂತೆ ಆಜ್ಞೆ ಮಾಡಿದನು. ಮುಂದೆ ರಾಜನಿಗೆ ತನ್ನ ತಪ್ಪು ತಿಳಿಯಿತು. ಆದರೆ ತಡವಾಗಿ ಹೋಗಿತ್ತು.

ಮಹಮದ್ ಗವಾನನ ಮರಣಾನಂತರ ಬಹಮನಿ ಸಾಮ್ರಾಜ್ಯವು

ದುರ್ಬಲವಾಯಿತು. ಒಬ್ಬರಾದ ಮೇಲೊಬ್ಬರು ದುರ್ಬಲ, ಅಸಮರ್ಥ ದೊರೆಗಳು ಪಟ್ಟಕ್ಕೆ ಬರುತ್ತಿದ್ದರು. ಸ್ವಲ್ಪಕಾಲದಲ್ಲಿ ವಿಸ್ತಾರವಾದ ಬಹಮನಿ ಸಾಮ್ರಾಜ್ಯವು ಒಡೆದು ಐದು ಹೋಳಾಯಿತು. ಈ ಐದು ಷಾಹಿ ರಾಜ್ಯಗಳಿಗೆ ಕ್ರಮವಾಗಿ ಬಿಜಾಪುರದ ಆದಿಲ್ ಷಾಹಿ, ಬೀದರಿನ ಇಮಾದ್ ಷಾಹಿ, ಅಹಮದ್ ನಗರದ ನಿಜಾಂಷಾಹಿ, ಗೋಲ್ಕೊಂಡಾದ ಕುತುಬ್ ಷಾಹಿ ಮತ್ತು ಬೀದರಿನ ಬರೀದ್ ಷಾಹಿ ಎಂಬ ಹೆಸರುಗಳಿದ್ದವು. ಮುಂದೆ ಬೀರಾರ್ ಅಹಮದ್ ನಗರದ ಒಂದು ಭಾಗವಾಯಿತು. ಬೀದರ್ ಬಿಜಾಪುರದ ಒಂದು ಭಾಗವಾಯಿತು. ಹೀಗೆ ಸ್ವಲ್ಪ ಕಾಲ ಮೂರು ರಾಜ್ಯಗಳು (ಅಹಮದ್ ನಗರ, ಗೋಲ್ಕಾಂಡಾ, ಬಿಜಾಪುರ) ಇದ್ದವು. ಅಂತಿಮವಾಗಿ ಇವೆಲ್ಲ ಸೋತು, ಮೊಗಲ್ ಸಾಮ್ರಾಜ್ಯಕ್ಕೆ ಸೇರಿಹೋದವು.

ಸುಲ್ತಾನರು ನಿರಂಕುಶ ಪ್ರಭುಗಳಾಗಿದ್ದರು. ಡಚ್ ಹಾಗೂ ಪೋರ್ಚುಗೀಸರೊಂದಿಗೆ ವ್ಯವಹಾರ ಸಂಬಂಧವನ್ನು ಇರಿಸಿಕೊಂಡಿದ್ದರು. ಪರ್ಷಿಯನ್ ಅಧಿಕೃತ ಭಾಷೆಯಾಗಿತ್ತಾದರೂ ಕನ್ನಡ, ಮರಾಠಿಗಳೂ ಬಳಕೆಯಲ್ಲಿದ್ದುವು. ಫರಿಷ್ತಾ ಮತ್ತು ಶಿರಾಜಿ ಎಂಬ ಇಬ್ಬರು ಪರ್ಷಿಯನ್ ಭಾಷೆಯಲ್ಲಿ ಗ್ರಂಥ ರಚನೆ ಮಾಡಿದರು.

ಬಹಮನಿ ರಾಜರು ಇಂಡೋಮುಸ್ಲಿಂ ಶೈಲಿಗಳ ವಾಸ್ತುಶಿಲ್ಪವನ್ನು ಪ್ರೋತ್ಸಾಹಿಸಿದರು. ಇದು ಹಿಂದೂ ಮುಸ್ಲಿಂ ಶೈಲಿಗಳ ಸಮನ್ವಯ. ಬಿಜಾಪುರದ ಆದಿಲ್ ಷಾಹಿಗಳ ಅವಧಿಯಲ್ಲಿ ಇದರ ವೈಭವ ಕೀರ್ತಿಗೇರಿತು. ಬಹಮನಿ ಅರಸರು ಅನೇಕ ಮಸೀದಿಗಳನ್ನು, ಅರಮನೆಗಳನ್ನು, ಸಮಾಧಿ ಮಂದಿರಗಳನ್ನು ಕಟ್ಟಿಸಿದರು. ಗುಲ್ಬರ್ಗದ ಜಾಮಿ ಮಸೀದಿ ಹಾಗೂ ಬೀದರ್‌ನ ಗವಾವನ ಮದರಸ ಇವುಗಳು ಮುಖ್ಯವಾದವು. ಆದಿಲ್ ಷಾಹಿ ವಾಸ್ತುಕಲೆಯ ಉತ್ತಮ ಉದಾಹರಣೆಗಳೆಂದರೆ ಬಿಜಾಪುರದ ಗೋಲ್ ಗುಂಬಜ್ ಹಾಗು ಇಬ್ರಾಹಿಂ ರೋಜಾಗಳು. ಮಹಮದ್ ಆದಿಲ್ ಷಾನ ಸಮಾಧಿಯನ್ನು ಗೋಲ್ ಗುಂಬಜ್ ಎನ್ನುತ್ತಾರೆ. ಇದರ ಗುಮ್ಮಟ ಜಗತ್ತಿನಲ್ಲಿ, ಗಾತ್ರದಲ್ಲಿ ನಾಲ್ಕನೆಯದು. ಕಲ್ಬುರ್ಗಿಯಲ್ಲಿ ಮಹಮದ್ ಷಾ 1369ರಲ್ಲಿ ಕಟ್ಟಿಸಿದ ಮಸೀದಿಯು ಒಂದು ಭವ್ಯ ಸ್ಮಾರಕವಾಗಿದೆ. ಇದರ ಒಳಭಾಗವು ಸಂಪೂರ್ಣವಾಗಿ ಛಾವಣಿ ಹೊಂದಿದೆ.

## ಅಭ್ಯಾಸ

**I. ಭರ್ತಿ ಮಾಡಿ.**

1. ಬಹಮನಿ ಸಾಮ್ರಾಜ್ಯವು........ ವರ್ಷದಲ್ಲಿ ಸ್ಥಾಪನೆಗೊಂಡಿತು.
2. ಜಫರ್ ಖಾನನು....... ಸುಲ್ತಾನನ ವಿರುದ್ಧ ನಡೆದ ದಂಗೆಯ ಮುಂದಾಳಾಗಿದ್ದನು.
3. ಅಹಮದ್ ಷಾ ತನ್ನ ರಾಜಧಾನಿಯನ್ನು ಕಲ್ಬುರ್ಗಿಯಿಂದ......ಗೆ ಸ್ಥಳಾಂತರಿಸಿದನು.
4. ಬೀದರಿನಲ್ಲಿ ಮದರಸವನ್ನು ನಿರ್ಮಿಸಿದವನು.......

**II. ಹೊಂದಿಸಿ ಬರೆಯಿರಿ.**

| ಎ | ಬಿ |
| --- | --- |
| ಅ) ಇಬ್ರಾಹಿಂ ರೋಜ | ಬೀದರ್ |
| ಆ) ಮದರಸಾ | ಬಿಜಾಪುರ |
| ಇ) ಗೋಲ್ ಗುಂಬಜ್ | ಮಹಮದ್ ಗವಾನ್ |
| ಈ) ಬಾರಿದ್ ಷಾಹಿಗಳು | ಮಹಮದ್ ಆದಿಲ್ ಷಾ |
| ಉ) ಫರಿಷ್ತಾ | ಪರ್ಷಿಯನ್ ಸಾಹಿತ್ಯ |

**III. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಬಹಮನಿ ಸಾಮ್ರಾಜ್ಯದ ಸ್ಥಾಪನೆಗೆ ಪ್ರೇರಕವಾದ ಸಂದರ್ಭಗಳು ಯಾವುವು ?
2. ಮಹಮದ್ ಗವಾನನ ಸಾಧನೆಗಳನ್ನು ವಿವರಿಸಿ.
3. ವಾಸ್ತುಶಿಲ್ಪಕ್ಕೆ ಬಹಮನಿ ಸಾಮ್ರಾಜ್ಯದ ಕಾಣಿಕೆ ಏನು ?
4. ಗೋಲ್ ಗುಂಬಜ್ ಏಕೆ ಪ್ರಸಿದ್ಧಿ ಹೊಂದಿದೆ ?

**IV. ಟಿಪ್ಪಣಿ ಬರೆಯಿರಿ.**

ಬಹಮನಿ ಷಾ, ಮಹಮದ್ ಷಾ III, ಬಿಜಾಪುರದ ಆದಿಲ್ ಷಾಹಿಗಳು.

## ಧಾರ್ಮಿಕ ಚಿಲುಮೆ – ಆಚಾರ್ಯರು

ಹಿಂದೂ ಧರ್ಮವು ತನ್ನ ಆಚಾರ ವಿಚಾರಗಳಲ್ಲಿ ವೈದಿಕ ಕಾಲದಿಂದ ಹಿಡಿದು ಉದ್ದಕ್ಕೂ ಅನೇಕ ಬದಲಾವಣೆಗಳನ್ನು ಕಂಡಿದೆ. ಈ ಕಾಲಾವಧಿಯಲ್ಲಿ ಕುರುಡು ನಂಬಿಕೆಗಳೂ, ದುಷ್ಟ ಆಚಾರಗಳೂ ಇದರಲ್ಲಿ ಸೇರಿಕೊಂಡವು. ಹಿಂದೂ ಧರ್ಮವನ್ನು ಸುಧಾರಿಸುವುದಕ್ಕೆ ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಹಾಗೂ ಬಸವಣ್ಣನವರು ಮೊದಲಾದ ಅನೇಕ ಸಾಧು ಸಂತರು ಪ್ರಯತ್ನಿಸಿದ್ದಾರೆ.

### ಶಂಕರಾಚಾರ್ಯ

ಕೇರಳದ ಕಾಲಡಿ ಎಂಬಲ್ಲಿ ಶಿವಗುರು ಮತ್ತು ಆರ್ಯಾಂಬಾ ಎಂಬ ನಂಬೂದಿರಿ ಬ್ರಾಹ್ಮಣ ಮನೆತನದ ದಂಪತಿಗಳ ಮಗನಾಗಿ ಶಂಕಾರಾಚಾರ್ಯರು ಕ್ರಿ.ಶ. 788 ರಲ್ಲಿ ಜನಿಸಿದರು. ಹನ್ನೆರಡನೆಯ ವಯಸ್ಸಿಗೆ ಇವರು ವೈದಿಕ ಗ್ರಂಥಗಳ ಮೇಲೆ ಪ್ರಭುತ್ವವನ್ನು ಸಂಪಾದಿಸಿದ್ದರು. ಸನ್ಯಾಸಿಯಾಗಲು ಬಯಸಿದ ಶಂಕರರು, ಗೌಡಪಾದ ಹಾಗೂ ಗೋವಿಂದ ಭಗವತ್‌ಪಾದರ ಶಿಷ್ಯರಾಗಿದ್ದರು.

### ಶಂಕರಾಚಾರ್ಯರ ಕೃತಿಗಳು ಮತ್ತು ಬೋಧನೆ

ಶಂಕಾರಾಚಾರ್ಯರು ಉಪನಿಷತ್ತುಗಳು, ಬ್ರಹ್ಮಸೂತ್ರ ಹಾಗೂ ಭಗವದ್ ಗೀತೆಗಳ ಮೇಲೆ ಭಾಷ್ಯಗಳನ್ನು ಬರೆದರು. 'ವಿವೇಕ ಚೂಡಾಮಣಿ' 'ಆತ್ಮಬೋಧ',

'ಸೌಂದರ್ಯಲಹರಿ', 'ಆನಂದಲಹರಿ'ಗಳು ಇವರ ಮಹತ್ವದ ಗ್ರಂಥಗಳು. 'ಭಜಗೋವಿಂದಂ' ಎಂಬುದು ಅವರ ಪ್ರಸಿದ್ಧ ಸ್ತೋತ್ರ ಪದ್ಯ.

ಜೀವಾತ್ಮ ಪರಮಾತ್ಮ ಎರಡೂ ಒಂದೇ ಎಂಬ ತತ್ವವನ್ನು ಪ್ರತಿಪಾದಿಸಿದರು. ಅವೆರಡರಲ್ಲಿ ಭಿನ್ನತೆಯಿಲ್ಲ ಎಂಬುದು ಅವರ ವಾದ. ತಮ್ಮ ಭಾಷ್ಯಗಳ ಮೂಲಕ ಉಪನಿಷತ್ತಿನ ಪ್ರಮುಖ ಘೋಷಣೆಯಾದ ಅಹಂಬ್ರಹ್ಮಾಸ್ಮಿ (ನಾನೇ ಬ್ರಹ್ಮ) ಎಂಬ ಸೂತ್ರವನ್ನು ಸಮರ್ಥಿಸಿದರು. ಬ್ರಹ್ಮವೊಂದೇ ಸತ್ಯ, ಈ ಜಗತ್ತು 'ಮಿಥ್ಯ' ಎಂದು ಪ್ರತಿಪಾದಿಸಿದರು. ಈ ಕಾರಣದಿಂದ ಇವರ ತತ್ವವನ್ನು ಅದ್ವೈತ ತತ್ವ ಎಂದು ಕರೆಯಲಾಗಿದೆ.

ಶಂಕರಾಚಾರ್ಯರು ಕಾಪಾಲಿಕರೊಂದಿಗೆ, ಶಾಕ್ತ ಅಥವಾ ಭೈರವರೊಂದಿಗೆ ಸಮರ್ಥವಾಗಿ ಸಂವಾದ ನಡೆಸಿದರು. ನರಹತ್ಯೆ, ಪ್ರಾಣಿಹತ್ಯೆ ಮೊದಲಾದ ಧಾರ್ಮಿಕ ದುಷ್ಟಪದ್ಧತಿಗಳನ್ನು ತಪ್ಪಿಸಿದರು. ದೇವರಿಗೆ ಮಾಂಸ, ಮದ್ಯಗಳನ್ನು ಅರ್ಪಿಸುವ ಪದ್ಧತಿಯನ್ನು ನಿಲ್ಲಿಸಿದರು. ಇಡೀ ಭರತಖಂಡದಲ್ಲಿ ಪ್ರವಾಸ ಮಾಡಿ ಶೃಂಗೇರಿ (ಕರ್ನಾಟಕ), ದ್ವಾರಕ (ಗುಜರಾತ್), ಪೂರಿ (ಒರಿಸ್ಸಾ) ಹಾಗೂ ಬದರಿ (ಉತ್ತರ ಪ್ರದೇಶ) ಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿದರು. ಹೀಗೆ ಶಂಕರಾಚಾರ್ಯರು ಮಹಾ ವಿದ್ವಾಂಸರೇ ಅಲ್ಲದೆ ಮಹಾ ಬ್ರಹ್ಮಜ್ಞಾನಿಯೂ, ಸುಧಾರಕರೂ ಆಗಿದ್ದರು. ಸುಮಾರು ಕ್ರಿ.ಶ. 820ರಲ್ಲಿ ತಮ್ಮ 32ನೆಯ ವಯಸ್ಸಿನಲ್ಲಿ ತೀರಿಕೊಂಡರು.

### ರಾಮಾನುಜಾಚಾರ್ಯ (ಕ್ರಿ.ಶ. 1017–1137)

ಕ್ರಿ.ಶ. 1017ರಲ್ಲಿ ಮದರಾಸಿನ ಸಮೀಪದ ಶ್ರೀಪೆರಂಬುದೂರಿನಲ್ಲಿ ಕೇಶವ ಸೋಮಯಾಜಿ ಮತ್ತು ಕಾಂತಿಮತಿ ಇವರ ಪುತ್ರನಾಗಿ ರಾಮಾನುಜಾಚಾರ್ಯರು ಜನಿಸಿದರು. ಚಿಕ್ಕಂದಿನಿಂದಲೇ ಈತ ಬುದ್ಧಿವಂತ ಹಾಗೂ ದೈವಭಕ್ತ. ಹದಿನಾರನೆಯ ವಯಸ್ಸಿನಲ್ಲಿ ಇವರಿಗೆ ಮದುವೆಯಾಯಿತು. ಉನ್ನತ ವಿದ್ಯಾಭ್ಯಾಸಕ್ಕಾಗಿ ಕಂಚೀಪುರದ ಯಾದವಪ್ರಕಾಶರ ಬಳಿಗೆ ಹೋದರು. ಯಾದವ ಪ್ರಕಾಶರು 'ಅದ್ವೈತ' ಬೋಧಕರಾಗಿದ್ದರು. ಅನಂತರ ರಾಮಾನುಜಾಚಾರ್ಯರು ಅನೇಕ ಗುರುಗಳ ಬಳಿ ಶಿಷ್ಯವೃತ್ತಿ ಮಾಡಿ ಧರ್ಮಗ್ರಂಥಗಳನ್ನು ಅರಗಿಸಿಕೊಂಡರು. ಮುಂದೆ ಅವರು ಸನ್ಯಾಸಿಯಾದರು.

ಶ್ರೀರಂಗದಲ್ಲಿದ್ದ ಯಾಮುನಾಚಾರ್ಯರೆಂಬ ಪ್ರಸಿದ್ಧ ವೈಷ್ಣವ ಗುರುಗಳಿಂದ ರಾಮಾನುಜರಿಗೆ ಕರೆ ಬಂತು. ಬಂದಾಗ ಯಾಮುನಾಚಾರ್ಯರ ದೇಹಾಂತದ ವಿಷಯ ರಾಮಾನುಜರಿಗೆ ತಿಳಿಯಿತು. ಶ್ರೀರಂಗದ ಭಕ್ತಮಂಡಲಿಯು ಯಾಮುನಾಚಾರ್ಯರ ಪೀಠದ ಉತ್ತರಾಧಿಕಾರಿಯಾಗಿರುವಂತೆ ರಾಮಾನುಜರನ್ನು ಪ್ರಾರ್ಥಿಸಿತು.

### ರಾಮಾನುಜಾಚಾರ್ಯರ ಕೃತಿಗಳು ಮತ್ತು ಬೋಧೆ

ರಾಮಾನುಜಾಚಾರ್ಯರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. 'ವೇದಾಂತ ಸೂತ್ರಂ', 'ವೇದಾಂತ ಸಂಗ್ರಹಂ', 'ವೇದಾಂತ ದೀಪಂ' ಇವು ತುಂಬ ಮಹತ್ವದವು. ಅಲ್ಲದೆ ರಾಮಾನುಜರು ಬ್ರಹ್ಮಸೂತ್ರ, ಭಗವದ್‌ಗೀತೆಗಳ ಮೇಲೆ ವ್ಯಾಖ್ಯಾನವನ್ನು

ಬರೆದಿದ್ದಾರೆ. ವೈಷ್ಣವ ಸಂತರಾದ ಆಳ್ವಾರರುಗಳನ್ನು ಕುರಿತು ತಮಿಳು ಹಾಡುಗಳನ್ನು ಬರೆದಿದ್ದಾರೆ.

ರಾಮಾನುಜಾಚಾರ್ಯರು ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸಿದರು. ದೇವರು ಸರ್ವಶಕ್ತ, ಸರ್ವವ್ಯಾಪಿ, ಸರ್ವಜ್ಞ, ಸದ್ಗುಣಶಾಲಿ ಹಾಗೂ ಸಮಸ್ತ ಬ್ರಹ್ಮಾಂಡಕ್ಕೆ ಆಧಾರ ಎಂದು ಅವರು ಬೋಧಿಸಿದರು. ದೇವರು ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕರ್ತೃವಾಗಿದ್ದಾನೆ ಎಂದಿದ್ದಾರೆ. ರಾಮಾನುಜರ ತತ್ವವನ್ನು 'ವಿಶಿಷ್ಟಾದ್ವೈತ' ಎಂದು ಕರೆಯುತ್ತಾರೆ.

ರಾಮಾನುಜರು ಎಲ್ಲ ಜಾತಿಯ ಜನರನ್ನೂ ಶಿಷ್ಯರಾಗಿ ಸ್ವೀಕರಿಸಿ ಬೋಧಿಸಿದ್ದಾರೆ. ಮೋಕ್ಷವನ್ನು ಪಡೆಯಬೇಕಾದರೆ ಪ್ರಪತ್ತಿ ಮಾರ್ಗ (ಅಂದರೆ ಸಂಪೂರ್ಣ ಶರಣಾಗತಿ) ಹಾಗೂ ಅಸೀಮ ದೈವಭಕ್ತಿ ಇರಬೇಕೆಂದು ಹೇಳಿದ್ದಾರೆ.

ಹೊಯ್ಸಳ ರಾಜ ವಿಷ್ಣುವರ್ಧನನ ಕಾಲದಲ್ಲಿ ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬಂದರು. ಇವರು ಬೇಲೂರು ಕೇಶವ ದೇವಾಲಯವನ್ನು ಕಟ್ಟಿಸುವಂತೆ ವಿಷ್ಣುವರ್ಧನನ ಮೇಲೆ ಪ್ರಭಾವ ಬೀರಿದರು. ಮೇಲುಕೋಟೆ ಎಂಬಲ್ಲಿ ನೆಲೆಸಿದರು. ಅದು ವೈಷ್ಣವ ಜ್ಞಾನಪೀಠವಾಯಿತು. ಎಲ್ಲ ಜಾತಿಯ ಜನರಿಗೂ ದೇವಾಲಯ ಪ್ರವೇಶವನ್ನು ದೊರಕಿಸಿದರು. ಅನಂತರ ಶ್ರೀರಂಗಂ ಕ್ಷೇತ್ರಕ್ಕೆ ಹಿಂದಿರುಗಿ ತಾವು ತೀರಿಕೊಳ್ಳುವವರೆಗೂ ಅಂದರೆ ಕ್ರಿ.ಶ. 1137ರ ವರೆಗೂ ಅಲ್ಲಿಯೇ ಉಳಿದರು.

**ಬಸವೇಶ್ವರ**

ಮಾದರಸ ಮಾದಲಾಂಬಿಕೆಯರ ಮಗನಾದ ಬಸವೇಶ್ವರರು ಬಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಕ್ರಿ.ಶ. 1131ರಲ್ಲಿ ಜನಿಸಿದರು. ಇವರ ಬಾಲ್ಯವು ಕಪ್ಪಡಿ ಕೂಡಲ ಸಂಗಮದಲ್ಲಿ ಕಳೆಯಿತು. ಜಾತವೇದಮುನಿ ಎಂಬ ಗುರುಗಳ ಬಳಿಯಲ್ಲಿ ಧರ್ಮಗ್ರಂಥಗಳ ಅಧ್ಯಯನ ಮಾಡಿದರು. ಮುಂದೆ ದೊರೆ ಬಿಜ್ಜಳನ ಸೇವೆಯಲ್ಲಿ ಸೇರಲು ಮಂಗಳವಾಡಕ್ಕೆ ಹೋದರು. ತಮ್ಮ ಬೌದ್ಧಿಕ ಶಕ್ತಿ ಹಾಗೂ ಪ್ರಾಮಾಣಿಕತೆಗಳಿಂದ ರಾಜ್ಯದ ಕೋಶಾಧಿಕಾರಿಗಳೂ ಮಂತ್ರಿಗಳೂ ಆದರು. ಇವರು ಸಂಗಮೇಶ್ವರನ ಭಕ್ತರಾಗಿದ್ದರು.

ಜಾತಿಭೇದ ಮತ್ತು ಕುರುಡು ಧಾರ್ಮಿಕ ಸಂಪ್ರದಾಯಗಳನ್ನು ವಿರೋಧಿಸಿ ಒಂದು ಹೊಸ ಸಾಮಾಜಿಕ ವ್ಯವಸ್ಥೆಯನ್ನು ತರಲು ಬಸವಣ್ಣನವರು ಪ್ರಯತ್ನಿಸಿದರು. ವೀರಶೈವ ಧರ್ಮವನ್ನು ಪುನರುಜ್ಜೀವಿಸಿದರು. ಅವರು ಆರಂಭಿಸಿದ ಭಕ್ತಿಪಂಥವು ಭಾರತದ ಎಲ್ಲ ಮೂಲೆಗಳಿಂದ ಭಕ್ತರನ್ನು ಆಕರ್ಷಿಸಿತು.

ದಯೆ, ಮಾನವೀಯತೆ, ಶುದ್ಧಿ, ಸಹನೆ, ಗಂಡು-ಹೆಣ್ಣುಗಳ ಸಮಾನತೆ ಮೊದಲಾದ ನೈತಿಕ ತತ್ವಗಳನ್ನು ಬಸವಣ್ಣನವರು ಬೋಧಿಸಿದರು. ದಲಿತವರ್ಗದವರನ್ನೆಲ್ಲ ವೈಯಕ್ತಿಕವಾಗಿ ಭೇಟಿ ಮಾಡಿ ಅವರುಗಳಲ್ಲಿ ಒಂದು ಹೊಸ ಧಾರ್ಮಿಕ ಜಾಗೃತಿಯನ್ನು ಮೂಡಿಸಿದರು. ಧಾರ್ಮಿಕ ವಿಧಿಗಳಲ್ಲಿ ಪ್ರಾಣಿಹತ್ಯೆಯನ್ನು ಪ್ರತಿಭಟಿಸಿದರು.

ಬಸವಣ್ಣನವರು ಕಾಯಕದ ಮಹತ್ವವನ್ನು ಬೋಧಿಸಿದರು. ಸಮಾಜ ಸೇವೆ

ಮಾಡುವುದಕ್ಕೆ ಮಹತ್ವದ ಸ್ಥಾನವನ್ನು ನೀಡಿದರು. ಅನುಭವ ಮಂಟಪ ಎಂಬ ಧಾರ್ಮಿಕ ಸಂಸ್ಥೆಯೊಂದನ್ನು ಕಟ್ಟಿದರು. ಅಲ್ಲಿ ಅಲ್ಲಮ, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದ ಶಿವಶರಣ ಶರಣೆಯರು ಸೇರಿ ತಮ್ಮ ತಮ್ಮ ಅನುಭವಗಳನ್ನು ವಿವರಿಸಿದರು. ಈ ಸಂವಾದದ ಪರಿಣಾಮವಾಗಿ ವಚನ ಸಾಹಿತ್ಯ ಎಂಬ ವಿಶಿಷ್ಟ ಸಾಹಿತ್ಯದ ಉದಯವಾಯಿತು. ಸಾಮಾನ್ಯ ಮನುಷ್ಯನಿಗೆ ಆವನಾಡುವ ಭಾಷೆಯಲ್ಲಿ ಆತ್ಮ ಶಿಕ್ಷಣವನ್ನೊದಗಿಸುವುದೇ ವಚನ ಸಾಹಿತ್ಯದ ಗುರಿಯಾಗಿತ್ತು. ಅನೇಕ ವಚನಕಾರರ ಕೃತಿಗಳನ್ನು ನಾಡಿನಲ್ಲೆಲ್ಲ ಶ್ರದ್ಧಾಭಕ್ತಿಗಳಿಂದ ಜನ ಈಗಲೂ ಹಾಡುತ್ತಾರೆ, ಓದುತ್ತಾರೆ.

ಬಸವಣ್ಣನವರು ಅಂತರ ಜಾತೀಯ ವಿವಾಹಗಳನ್ನು ಬೆಂಬಲಿಸಿದರು. ಒಬ್ಬಳು ಬ್ರಾಹ್ಮಣರ ಹುಡುಗಿ ಹಾಗೂ ದಲಿತ ವರ್ಗದ ಹುಡುಗ ಇವರಿಬ್ಬರ ಮದುವೆ ಬಸವಣ್ಣನವರ ನಿರ್ದೇಶನದಲ್ಲೇ ನಡೆಯಿತು. ಆದರೆ ಇದರಿಂದ ಜಾತಿಬದ್ಧ ಸಮಾಜದಲ್ಲಿ ಭಾರಿಯ ಕೋಲಾಹಲವುಂಟಾಗಿ ಕ್ರಾಂತಿಕಾರದ ಬದಲಾವಣೆಗಳಿಗೆ ಆಸ್ಪದವುಂಟಾಯಿತು.

ಬಸವಣ್ಣನವರು ಕ್ರಿ.ಶ. 1163ರಲ್ಲಿ ದೈವಾಧೀನರಾದರು.

## ಮಧ್ವಾಚಾರ್ಯ (ಕ್ರಿ.ಶ. 1238–1318)

ಮಧ್ವಗೇಹಭಟ್ಟ – ವೇದಾವತಿ ಇವರ ಮಗನಾಗಿ ಮಧ್ವಾಚಾರ್ಯರು ಕ್ರಿ.ಶ. 1238 ರಲ್ಲಿ ಉಡುಪಿಯ ಬಳಿಯ ಪಾಜಕ ಕ್ಷೇತ್ರದಲ್ಲಿ ಹುಟ್ಟಿದರು. ಇವರ ಪೂರ್ವಾಶ್ರಮದ ಹೆಸರು ವಾಸುದೇವ. ಬಾಲ್ಯದ ದಿನಗಳಲ್ಲೇ ತೀಕ್ಷ್ಣ ಬುದ್ಧಿಮತ್ತೆ ಮತ್ತು ದೇಹದಾರ್ಢ್ಯಗಳಿಂದ ಮಧ್ವಾಚಾರ್ಯರು ಪ್ರಸಿದ್ಧಿಗೆ ಪಾತ್ರರಾಗಿದ್ದರು. ಮುಂದೆ ಅವರಿಗೆ 'ಪೂರ್ಣಪ್ರಜ್ಞ' 'ಆನಂದ ತೀರ್ಥ' ಎಂಬ ಹೆಸರುಗಳೂ ಬಂದವು. ಅವರ ಅಪಾರ ಶಾಸ್ತ್ರಜ್ಞಾನ ಹಾಗೂ ಅಸೀಮ ದೈವಭಕ್ತಿಗಳ ಪರಿಣಾಮವಾಗಿ ಈ ಹೆಸರುಗಳು ಬಂದಿವೆ. ಉಡುಪಿಯಲ್ಲಿ ಅಚ್ಯುತಪ್ರೇಕ್ಷರೆಂಬ ಆಚಾರ್ಯರ ಬಳಿ ಸನ್ಯಾಸವನ್ನು ಸ್ವೀಕರಿಸಿ ಅವರ ಶಿಷ್ಯರಾದರು.

ಅಚ್ಯುತಪ್ರೇಕ್ಷರು ವಾಸುದೇವನಿಗೆ ಆ ಕಾಲದಲ್ಲಿ ಪ್ರಚಲಿತವಾಗಿದ್ದ ಅದ್ವೈತ ವೇದಾಂತವನ್ನು ಬೋಧಿಸಿದರು. ಆದರೆ ವಾಸುದೇವನಿಗೆ ಅದು ಹಿಡಿಸಲಿಲ್ಲ. ಮುಂದೆ ಮಧ್ವಾಚಾರ್ಯರು ತಮ್ಮದೇ ಆದ ದ್ವೈತ ತತ್ವವನ್ನು ಪ್ರತಿಪಾದಿಸಿದರು.

## ಮಧ್ವಾಚಾರ್ಯರ ಕೃತಿಗಳು ಮತ್ತು ಬೋಧೆ

ಮಧ್ವಾಚಾರ್ಯರು ಮಹಾ ಮೇಧಾವಿಗಳಾಗಿದ್ದುದರಿಂದ ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ ಗೀತೆಗಳ ಮೇಲೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಅಲ್ಲದೆ 'ವಿಷ್ಣು ತತ್ವ ನಿರ್ಣಯ' 'ಉಪಾಧಿಖಂಡನ' 'ಮಾಯವಾದ ಖಂಡನ' ಮೊದಲಾದ ಗ್ರಂಥಗಳನ್ನು ಬರೆದಿದ್ದಾರೆ. ಮಹಾಭಾರತ, ಭಾಗವತಗಳ ಮೇಲೆ ಟೀಕೆಯನ್ನೂ ಬರೆದಿದ್ದಾರೆ.

ಜೀವಾತ್ಮ (= ವ್ಯಕ್ತಿ) ಪರಮಾತ್ಮ (= ದೈವ) ಇವೆರಡೂ ಬೇರೆ ಬೇರೆ ಎಂಬುದು ಇವರ ವಾದ. ಆದ್ದರಿಂದ ಇವರು ವಾದಕ್ಕೆ 'ದ್ವೈತ' ಎಂದು ಹೆಸರು ಬಂದಿದೆ. ದೈವ ಹಾಗೂ ಭಕ್ತರ ಸಂಬಂಧವು ಸ್ವಾಮಿ–ಭೃತ್ಯ ಸಂಬಂಧವಿದ್ದಂತೆ ಎಂದು ಆಚಾರ್ಯರು ಹೇಳಿದ್ದಾರೆ.

ಆಚಾರ್ಯ ಮಧ್ವರು ಅಖಿಲ ಭಾರತವನ್ನು ಎರಡು ಬಾರಿ ಸುತ್ತಿ ತಮ್ಮ ತತ್ವವನ್ನು ಬೋಧಿಸಿದರು. ಅನೇಕ ಅದ್ವೈತ ವಿದ್ವಾಂಸರು ಇವರಿಂದ ಆಕರ್ಷಿತರಾಗಿ ದ್ವೈತ ಮತಾನುಯಾಯಿಗಳಾದರು.

ಉಡುಪಿಯಲ್ಲಿ ಶ್ರೀಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪಿಸಿದ ಶ್ರೀ ಮಧ್ವಾಚಾರ್ಯರು ಅಲ್ಲಿ ಎಂಟು ಮಠಗಳನ್ನು ಸ್ಥಾಪಿಸಿದರು. ಅವರ ದೈವ ಭಕ್ತಿಯ ಸಂದೇಶದಿಂದಾಗಿ ಕರ್ನಾಟಕದಲ್ಲಿ ಹರಿದಾಸ ಪರಂಪರೆ ಆರಂಭವಾಯಿತು. ಆಚಾರ್ಯ ಮಧ್ವರು ಕ್ರಿ.ಶ. 1318 ರಲ್ಲಿ ತಮ್ಮ ಎಂಬತ್ತನೆಯ ವಯಸ್ಸಿನಲ್ಲಿ ತೀರಿಕೊಂಡರು.

ಹೀಗೆ ಮೂವರು ಆಚಾರ್ಯರೂ ಉಪನಿಷತ್ತು, ಭಗವದ್ ಗೀತೆ, ಬ್ರಹ್ಮಸೂತ್ರಗಳ ಮೇಲೆ ಬರೆದ ಭಾಷ್ಯಗಳು 'ಪ್ರಸ್ಥಾನತ್ರಯಿ' ಎಂಬ ಹೆಸರು ಪಡೆದಿವೆ. ಅವರು ಅವೈದಿಕ ವರ್ಗಗಳನ್ನು ವಿರೋಧಿಸಿ ಹಿಂದೂ ಧರ್ಮವನ್ನು ಬಲಗೊಳಿಸಿದರು.

## ಅಭ್ಯಾಸ

**I. 1. ಇವರ ಮುಖ್ಯ ಬೋಧನೆಗಳೇನು ?**

ಅ) ಶಂಕರಾಚಾರ್ಯ ಆ) ರಾಮಾನುಜಾಚಾರ್ಯ ಇ) ಮಧ್ವಾಚಾರ್ಯ ಈ) ಬಸವೇಶ್ವರ

**II ಎ. ಇವುಗಳನ್ನು ಹೊಂದಿಸಿ.**

| | |
|---|---|
| 1. ಯಾದವ ಪ್ರಕಾಶ | ಮಧ್ವಾಚಾರ್ಯ |
| 2. ಜಾತವೇದ ಮುನಿ | ಶಂಕರಾಚಾರ್ಯ |
| 3. ಅಚ್ಯುತ ಪ್ರೇಕ್ಷ | ಬಸವೇಶ್ವರ |
| 4. ಗೋವಿಂದ ಭಗವತ್‌ಪಾದ | ರಾಮಾನುಜಾಚಾರ್ಯ |

**II ಬಿ.**

| | |
|---|---|
| 1. ಉಡುಪಿ | ಶಂಕರಾಚಾರ್ಯ |
| 2. ಶ್ರೀಪೆರಂಬುದೂರು | ಮಧ್ವಾಚಾರ್ಯ |
| 3. ಕಾಲಡಿ | ಬಸವೇಶ್ವರ |
| 4. ಬಾಗೇವಾಡಿ | ರಾಮಾನುಜಾಚಾರ್ಯ |

**II ಸಿ.**

| | |
|---|---|
| 1. ಶಂಕರಾಚಾರ್ಯ | ವೇದಾಂತ ಸಂಗ್ರಹಂ |
| 2. ರಾಮಾನುಜಾಚಾರ್ಯ | ವಿಷ್ಣುತತ್ವ ನಿರ್ಣಯಂ |
| 3. ಮಧ್ವಾಚಾರ್ಯ | ವಚನಗಳು |
| 4. ಬಸವೇಶ್ವರ | ಭಜಗೋವಿಂದಂ |

**III. ಭರ್ತಿ ಮಾಡಿ.**

1. ಶಂಕರಾಚಾರ್ಯರು ಪ್ರತಿಪಾದಿಸಿದ ತತ್ವವನ್ನು....... ಎನ್ನುತ್ತಾರೆ.
2. ರಾಮಾನುಜಾಚಾರ್ಯರು ಪ್ರತಿಪಾದಿಸಿದ ತತ್ವವನ್ನು......... ಎನ್ನುತ್ತಾರೆ.
3. ಮಧ್ವಾಚಾರ್ಯರು ಪ್ರತಿಪಾದಿಸಿದ ತತ್ವವನ್ನು...... ಎನ್ನುತ್ತಾರೆ.
4. ಬಸವಣ್ಣನವರು ಮಾಡುವ ಕೆಲಸದಲ್ಲಿ ಗೌರವ ನಿಷ್ಠೆ ಇರಬೇಕೆಂದೂ ಇದರಿಂದ ಕೈಲಾಸ ಸಿಕ್ಕುತ್ತದೆಂದೂ ಪ್ರತಿಪಾದಿಸಿದರು. ಇದಕ್ಕೆ ಅವರು ಕೊಟ್ಟ ಹೆಸರು.......

**ಚಟುವಟಿಕೆಗಳು**

1. ಭಾರತದ ನಕ್ಷೆ ಬರೆದು ಕೆಳಗಿನ ಸ್ಥಳಗಳನ್ನು ಗುರುತಿಸಿ.
   1. ಶೃಂಗೇರಿ, 2. ದ್ವಾರಕಾ, 3. ಪೂರಿ, 4. ಬದರಿ.
2. ಕೆಳಕಂಡವರ ಭಾವಚಿತ್ರಗಳನ್ನು ಸಂಗ್ರಹಿಸಿ:
   1. ಶಂಕರಾಚಾರ್ಯ, 2. ರಾಮಾನುಜಾಚಾರ್ಯ, 3. ಮಧ್ವಾಚಾರ್ಯ, 4. ಬಸವೇಶ್ವರ.

## ಭಕ್ತಿಪಂಥ ಹಾಗೂ ಸೂಫಿ ಪಂಥಗಳ ಚಳುವಳಿ

ದೆಹಲಿಯ ಸುಲ್ತಾನರ ಮತ್ತು ಮೊಗಲ್ ದೊರೆಗಳ ಕಾಲದಲ್ಲಿ ಭಾರತದಲ್ಲಿ ಭಕ್ತಿಪಂಥದ ಹುಟ್ಟು ವಿಕಾಸಗಳನ್ನು ಕಾಣಬಹುದಾಗಿದೆ. ಭಕ್ತಿ ಸಂಪ್ರದಾಯ ಭಾರತಕ್ಕೆ ಹೊಸದೇನೂ ಆಗಿರಲಿಲ್ಲ. ಉಪನಿಷತ್ತು ಹಾಗೂ ಭಗವದ್ ಗೀತೆಗಳಲ್ಲಿ ಅವು ನಿರೂಪಿಸಲ್ಪಟ್ಟಿವೆ.

ಧಾರ್ಮಿಕ ಆಚರಣೆ, ಜಾತಿ ವ್ಯವಸ್ಥೆ ಮತ್ತು ಕುರುಡು ನಂಬಿಕೆಗಳ ಜಿಗುಟುತನದಿಂದಾಗಿ ಹಿಂದೂ ಧರ್ಮವು ಸಾಕಷ್ಟು ನರಳಿತ್ತು. ಇಸ್ಲಾಂ ಧರ್ಮದ ಸವಾಲನ್ನು ಎದುರಿಸಿ ಅದು ಉಳಿದುಕೊಂಡು ತನ್ನನ್ನು ರಕ್ಷಿಸಿಕೊಳ್ಳಬೇಕಾಗಿತ್ತು.

ಸಮಾಜದಲ್ಲಿ ಶಾಂತಿ ಮತ್ತು ಪ್ರಗತಿಗಳ ದೃಷ್ಟಿಯಿಂದ ಹಿಂದೂ ಮುಸ್ಲಿಮರ ನಡುವೆ ಸೌಹಾರ್ದ ಅಗತ್ಯವಾಗಿತ್ತು. ಆ ಕಾಲದ ಅಸಂಖ್ಯಾತ ಸುಧಾರಕರು ಹಾಗೂ ಚಿಂತಕರು ಮುಕ್ತವಾಗಿ ಭಕ್ತಿಮಾರ್ಗವನ್ನು ಬೋಧಿಸಿದರು. ಜಾತಿ ಪದ್ಧತಿ, ಅಸ್ಪೃಶ್ಯತೆ ಮತ್ತು ಮೂರ್ತಿ ಪೂಜೆಗಳನ್ನು ಖಂಡಿಸಿದರು. ಸರ್ವಸಮಾನತೆಯನ್ನು ಬೋಧಿಸಿ ಭಕ್ತಿ ಮಾರ್ಗದಿಂದ ಪ್ರತಿಯೊಬ್ಬನೂ ಮೋಕ್ಷ ಪಡೆಯಬಹುದೆಂದು ಘೋಷಿಸಿದರು. ಭಕ್ತಿ, ಸೂಫಿ ಪಂಥಗಳ ಸಂತರು ಸಮಾಜದಲ್ಲಿ ಶಾಂತಿ ನೆಲಸುವಂತೆ ಮಾಡುವಲ್ಲಿ ಮಹತ್ವದ ಪಾತ್ರ ವಹಿಸಿದ್ದಾರೆ.

**ರಮಾನಂದ (ಕ್ರಿ.ಶ. 1239–1410)**

ರಾಮಾನುಜರ ಶಿಷ್ಯನಾದ ರಮಾನಂದನು ಅಲಹಾಬಾದಿನ ಒಬ್ಬ ಬ್ರಾಹ್ಮಣ ಸಂತ. ಈತ ಎಲ್ಲ ಜಾತಿಯ ಜನರಿಗೂ ತನ್ನ ಸಂದೇಶವನ್ನು ಪದ್ಧತಿಯಂತೆ ಸಂಸ್ಕೃತವನ್ನು ಬಿಟ್ಟು

ಹಿಂದಿಯಲ್ಲಿ ನಿರೂಪಿಸಿದನು. ರಾಮ ಸೀತೆಯರನ್ನು ಆದರ್ಶವ್ಯಕ್ತಿಗಳೆಂದು ಪೂಜಿಸಬೇಕೆಂದು ಬೋಧಿಸಿದನು. ಜಾತಿ ಪದ್ಧತಿಯನ್ನೂ, ಗಂಡು ಹೆಣ್ಣುಗಳ ನಡುವಣ ತಾರತಮ್ಯದ ಭಾವನೆಯನ್ನೂ ಖಂಡಿಸಿದನು. ದೇವರು ಒಬ್ಬನೇ, ಆತ ಎಲ್ಲರ ತಂದೆ ಎಂದನು. ಎಲ್ಲ ಜಾತಿಗಳ ಜನರೂ ಈತನ ಶಿಷ್ಯರಾದರು.

**ಕಬೀರ್ (ಕ್ರಿ.ಶ. 15ನೆಯ ಶತಮಾನ)**

ರಮಾನಂದರ ಶಿಷ್ಯನಾದ ಕಬೀರ್ ಸಮಾಜದ ಕೆಳವರ್ಗದಿಂದ ಬಂದವನು. ಇವನನ್ನು ಸಲಹಿದವನು ಒಬ್ಬ ಮುಸ್ಲಿಂ ನೇಕಾರ. ಕಬೀರನಿಗೆ ಹಿಂದೂ ಮುಸ್ಲಿಂ ಎಂಬ ಭೇದಭಾವ ಇರಲಿಲ್ಲ. ಹಿಂದೂ ಮುಸ್ಲಿಮರನ್ನು ಒಂದು ಧಾರ್ಮಿಕ ಪಂಥವಾಗಿ ಮಾಡುವುದು ಅವನ ಹಂಬಲವಾಗಿತ್ತು.

ಕಬೀರನು ತಾನು ಅಲ್ಲಾ ಮತ್ತು ರಾಮರ ಮಗನೆಂದು ಹೇಳಿಕೊಳ್ಳುತ್ತಿದ್ದನು. ಹಿಂದೀ ಭಾಷೆಯಲ್ಲಿ ಅಸಂಖ್ಯಾತ ಕೀರ್ತನೆಗಳನ್ನು ರಚಿಸಿದನು. ಸಮಾಜದ ಎಲ್ಲ ವರ್ಗಗಳ ಜನಮನದಲ್ಲಿ ನಿಂತ ಕಬೀರನ ಕೀರ್ತನೆಗಳು ತುಂಬ ಜನಪ್ರಿಯವಾಗಿವೆ.

**ಚೈತನ್ಯ (ಕ್ರಿ.ಶ. 1486–1533)**

ಚೈತನ್ಯ ಬಂಗಾಳದ ನವದ್ವೀಪದ ಬ್ರಾಹ್ಮಣ ಸಂತ. ತನ್ನ 24ನೆಯ ವಯಸ್ಸಿನಲ್ಲಿ ವಿರಾಗಿಯಾದ. ಭಕ್ತಿ ಸಂಪ್ರದಾಯದ ಜನಪ್ರಿಯ ಸಂತ ಈತ. ಏಕದೇವೋಪಾಸನೆಯನ್ನು ಬೋಧಿಸಿದ. ಶ್ರೀಕೃಷ್ಣನನ್ನು ಪ್ರೀತಿಸುವುದೇ ಮೋಕ್ಷದ ದಾರಿಯೆಂದು ಸಾರಿದ. ಈತನು ಜಾತಿ ಪದ್ಧತಿಯನ್ನು ತಿರಸ್ಕರಿಸಿದ ಹಾಗೂ ಪುರೋಹಿತ ವರ್ಗದ ಮೇಲರಿಮೆಯ ಭಾವವನ್ನು ಖಂಡಿಸಿದ. ತನ್ನ ಪಂಥವನ್ನು ಜನಪ್ರಿಯಗೊಳಿಸಲು ಚೈತನ್ಯ, ಸಂಗೀತ ನರ್ತನಗಳ ಮೂಲಕ ಸ್ತೋತ್ರ ಮಾಡುವುದನ್ನು ಆರಂಭಿಸಿದ. ಒರಿಸ್ಸಾಗೆ ಬಂದು ಜಗನ್ನಾಥನ ಭಕ್ತನಾಗಿ ಉಳಿದ ಆಯುಷ್ಯವನ್ನೆಲ್ಲ ಅಲ್ಲೇ ಕಳೆದ.

**ಗುರುನಾನಕ್ (ಕ್ರಿ.ಶ. 1469–1539)**

ಸಿಖ್ ಧರ್ಮ ಸಂಸ್ಥಾಪಕನೂ ಮಧ್ಯಯುಗದ ಸಂತನೂ ಆದ ಗುರುನಾನಕ್ ಪಂಜಾಬಿನ ತಲವಂಡಿಯ ಖತ್ರಿ ಕುಟುಂಬದಲ್ಲಿ ಹುಟ್ಟಿದರು. ಹಿಂದೂ ಮುಸ್ಲಿಂ ಧರ್ಮಬೋಧೆಗಳೆರಡರಲ್ಲೂ ಅವರಿಗೆ ಸಮಾನ ಆಸಕ್ತಿಯಿತ್ತು. ಸರಳತೆ, ಚಾರಿತ್ರ್ಯ, ನಡವಳಿಕೆಗಳಲ್ಲಿ ಶುದ್ಧತೆ, ಸರ್ವಸಮಾನತೆ, ಧಾರ್ಮಿಕ ಸಹಿಷ್ಣುತೆ, ಪ್ರಾಮಾಣಿಕತೆ ಮತ್ತು ನಿಸ್ವಾರ್ಥಸೇವೆಗಳನ್ನು ಗುರುನಾನಕ್ ಬೋಧಿಸಿದರು. ಮೂರ್ತಿಪೂಜೆ, ವ್ರತಾಚರಣೆ ಮತ್ತು ಜಾತಿ ವ್ಯವಸ್ಥೆಗಳನ್ನು ವಿರೋಧಿಸಿದರು. ತುಂಬ ಸರಳ ಕೀರ್ತನೆಗಳನ್ನು ರಚಿಸಿದರು. ಈತನ 'ಗ್ರಂಥಸಾಹಿಬ್' ಸಿಖ್ಖರಿಗೆ ಪವಿತ್ರ ಗ್ರಂಥವಾಗಿದೆ. ಇದನ್ನೇ ಅವರು ಪೂಜಿಸುವರು.

**ಮೀರಾಬಾಯಿ (ಕ್ರಿ.ಶ. 1537–1614)**

ಮೀರಾಬಾಯಿ ಜೋಧಪುರದ ರಾಜಮನೆತನದವಳು. ಬಾಲ್ಯದಿಂದಲೇ ಅವಳು ಗಿರಿಧರ ಗೋಪಾಲನೇ ತನ್ನ ಸ್ವಂತ ದೈವವೆಂದು ಸಾರಿ ಆತನೇ ತನ್ನ ಪತಿ ಎಂದು ಸ್ವೀಕರಿಸಿದಳು. ಪ್ರಭು ಕೃಷ್ಣನನ್ನು ಕುರಿತ ಹಲವಾರು ಭಜನೆಗಳನ್ನು ರಚಿಸಿದಳು. ಮೀರಾ ಭಜನೆಗಳು ಅಖಿಲ ಭಾರತದಲ್ಲಿ ಮನ್ನಣೆಗಳಿಸಿವೆ.

ಮಹಾರಾಷ್ಟ್ರ ಪ್ರದೇಶದಲ್ಲಿ ಭಕ್ತಿ ಚಳುವಳಿ ತುಂಬ ಜನಪ್ರಿಯವಾಯಿತು. ಸಂತ ಜ್ಞಾನೇಶ್ವರ, ಏಕನಾಥ, ತುಕಾರಾಮ್, ರಾಮದಾಸ್ ಮೊದಲಾದವರು ಈ ಚಳುವಳಿಯನ್ನು ಬೆಳೆಸಿದರು. ಇವರೆಲ್ಲ ಜಾತಿವ್ಯವಸ್ಥೆ, ವ್ರತಾಚರಣೆ, ಕುರುಡು ನಂಬಿಕೆಗಳನ್ನು ಖಂಡಿಸಿ ಎಲ್ಲ ಕಡೆ ಭಕ್ತಿಯ ಪ್ರಸಾರ ಮಾಡಿ ಸಂಸ್ಕೃತಿಯನ್ನು ಹರಡಿದರು. ಇವರುಗಳು ಬರೆದಿರುವ ಮರಾಠೀ ಭಕ್ತಿಗೀತೆಗಳನ್ನು ತುಂಬ ಭಕ್ತಿಯಿಂದ ಇಂದಿಗೂ ಹಾಡಲಾಗುತ್ತಿದೆ.

ಕರ್ನಾಟಕದಲ್ಲಿಯೂ ಭಕ್ತಿಸಂಪ್ರದಾಯವು ಜನಪ್ರಿಯವಾಗುವಂತೆ ಮಾಡಿದವರೆಂದರೆ ಭಕ್ತಿಪಂಥಕ್ಕೆ ಸೇರಿದ ಪುರಂದರದಾಸ; ಕನಕದಾಸ ಮೊದಲಾದವರು. ಇವರೆಲ್ಲ ಕನ್ನಡ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿದರು.

**ಸೂಫಿ ಪಂಥ**

ಸೂಫಿ ಪಂಥವು ಭಕ್ತಿ ಸಂಪ್ರದಾಯಕ್ಕೆ ಸಂವಾದಿಯಾದ ಒಂದು ಇಸ್ಲಾಂ ಪಂಥವಾಗಿದೆ. ಅರಬ್ ದೇಶದಲ್ಲಿ ಇದು ಜನ್ಮ ತಳೆಯಿತು. ಭಾರತದ ಸೂಫಿಗಳಿಗೆ ಹಿಂದೂ ಧರ್ಮ ಮತ್ತು ಅದರ ಬೋಧನೆಗಳ ಪರಿಚಯವಿತ್ತು. ಆತ್ಮವು ದೇಹಕ್ಕಿಂತ ಭಿನ್ನವಾದುದೆಂದು ಅವರು ನಂಬಿದ್ದರು. ಸೂಫಿ ಪಂಥದ ತತ್ವ ಇದು: ವ್ಯಕ್ತಿಯಲ್ಲಿ ಶ್ರದ್ಧೆ ಭಕ್ತಿ ಮತ್ತು ಸಂಪೂರ್ಣ ಶರಣಾಗತಿಭಾವಗಳಿದ್ದರೆ ಆತ ದೇವರಲ್ಲಿ ಒಂದಾಗಬಲ್ಲ.

ಲಾಹೋರಿನ ಷೇಕ್ ಇಸ್ಮಾಯಿಲ್ ಮತ್ತು ದಾದಾಗಂಜ್ ಬಕ್ಷ್, ಷೇಕ್ ಉಸ್ಮಾನ್ ಹಾಗೂ ದೆಹಲಿಯ ನಿಜಾಮುದ್ದೀನ್ ಮೊದಲಾದವರು ಭಾರತದ ಪ್ರಸಿದ್ಧ ಸೂಫಿ ಸಂತರಲ್ಲಿ ಕೆಲವರು. ಧರ್ಮಸಹಿಷ್ಣುತೆ ಮತ್ತು ಮತೀಯ ಸೌಹಾರ್ದಗಳಲ್ಲಿ ಅವರಿಗೆ ವಿಶ್ವಾಸವಿತ್ತು. ಉರ್ದು, ಹಿಂದಿಗಳಲ್ಲಿ ಅವರು ಭಕ್ತಿ ಚಳುವಳಿಯನ್ನು ಜನಪ್ರಿಯಗೊಳಿಸಿದರು. ಅನೇಕ ಅರ್ಥಹೀನ ವ್ರತಾಚರಣೆಗಳನ್ನೂ, ಧಾರ್ಮಿಕ ಪದ್ಧತಿಗಳನ್ನೂ ಅವರು ವಿರೋಧಿಸಿದರು. ಸರಳ ಜೀವನಪದ್ಧತಿ, ಪ್ರಾಮಾಣಿಕತೆ, ಭಕ್ತಿ ಮತ್ತು ದೈವೀ ಪ್ರೇಮಗಳಿಗೆ ಅವರುಗಳು ಮಹತ್ವವನ್ನು ಕೊಟ್ಟರು.

**ಭಕ್ತಿ ಚಳುವಳಿಗಳ ಪರಿಣಾಮ**

ಭಕ್ತಿ ಚಳುವಳಿಗಳ ಪರಿಣಾಮವಾಗಿ ಹಿಂದೂ ಮುಸ್ಲಿಂಮರ ನಡುವೆ ಇದ್ದ ಭಿನ್ನಾಭಿಪ್ರಾಯಗಳು ತಗ್ಗಿದುವು. ಈ ಎರಡು ಪ್ರಧಾನ ವರ್ಗಗಳ ನಡುವೆ ಸೌಹಾರ್ದ

ನೆಲಸಿತು. ಹಿಂದೂ ಧರ್ಮವು ತನ್ನ ಕೆಲವು ಬಿಗಿಯಾದ ಜಾತಿ ನಿಯಮ, ವ್ರತಾಚರಣೆ ಮತ್ತು ಧಾರ್ಮಿಕ ಕಟ್ಟುಗಳಿಂದ ಮುಕ್ತಗೊಂಡಿತು. ಜಾತಿ ಪದ್ಧತಿ, ಅಸಮಾನತೆ, ಪುರೋಹಿತ ವರ್ಗದ ದೊಡ್ಡಸ್ತಿಕೆ, ಕುರುಡು ನಂಬಿಕೆ ಮೊದಲಾದ ಸಾಮಾಜಿಕ ಕೆಡುಕುಗಳ ಮೂಲೋಚ್ಚಾಟನೆಯ ಪ್ರಯತ್ನ ನಡೆಯಿತು. ಹಿಂದಿ, ಬಂಗಾಳಿ, ಉರ್ದು, ಮರಾಠಿ, ಕನ್ನಡ ಮೊದಲಾದ ದೇಶೀಯ ಭಾಷೆಗಳು ಈ ಚಳುವಳಿಯಿಂದಾಗಿ ಸಂಪನ್ನವಾಗಿ ಬೆಳೆದವು. ಭಕ್ತಿ ಚಳುವಳಿಯು ಸಾಮಾನ್ಯ ಮನುಷ್ಯನಿಗೆ ಒಂದು ಹೊಸ ಜೀವನ ಪದ್ಧತಿಯನ್ನು ತೋರಿಸಿಕೊಟ್ಟಿತು.

## ಅಭ್ಯಾಸ

**I. ಕೆಳಕಂಡ ಪ್ರಶ್ನೆಗಳಿಗೆ ಉತ್ತರಿಸಿ.**

1. ಮುಸ್ಲಿಂ ಆಳ್ವಿಕೆಯಲ್ಲಿ ಭಾರತದಲ್ಲಿ ಭಕ್ತಿ ಸಂಪ್ರದಾಯವು ಹುಟ್ಟಿ ಬೆಳೆಯಲು ಸಹಾಯಕವಾದ ಸಂದರ್ಭಗಳನ್ನು ವಿವರಿಸಿ.
2. ಇವರ ಬೋಧನೆ ಏನು ?
   ಅ) ಕಬೀರ್ ಆ) ಚೈತನ್ಯ ಇ) ಗುರುನಾನಕ್
3. ಭಕ್ತಿ ಹಾಗೂ ಸೂಫಿ ಚಳುವಳಿಗಳ ಮುಖ್ಯ ಪರಿಣಾಮಗಳೇನು ?
4. ಸೂಫಿತನ ಎಂದರೇನು ? ಅದರ ತತ್ವವನ್ನು ಸಂಕ್ಷೇಪವಾಗಿ ವಿವರಿಸಿ.

**II ಎ. ಭರ್ತಿ ಮಾಡಿ.**

1. ಚೈತನ್ಯನು ಒರಿಸ್ಸಾದ......... ದೇವಾಲಯಕ್ಕೆ ಬಂದು ಮುಂದಿನ ಬದುಕನ್ನು ಅಲ್ಲೇ ಕಳೆದು........ ಭಕ್ತನಾದನು.
2. 'ಗ್ರಂಥಸಾಹೇಬ್' ಎಂಬುದು...... ಜನಾಂಗದ ಪವಿತ್ರ ಗ್ರಂಥ.
3. ಸೂಫಿಗಳು ಆತ್ಮವು.......... ಕ್ಕಿಂತ ಭಿನ್ನ ಎಂದು ನಂಬಿದ್ದರು.

**ಬಿ. ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| ಕಬೀರ್ | ನವದ್ವೀಪ |
| ಚೈತನ್ಯ | ತಲವಂಡಿ |
| ಗುರುನಾನಕ್ | ಜೋಧಪುರ |
| ಮೀರಾಬಾಯಿ | ಅಲಹಾಬಾದ್ |

# 5. ಮೊಗಲರ ಆಳ್ವಿಕೆಯಲ್ಲಿ ಭಾರತ

## ಮೊಗಲರ ಆಕ್ರಮಣ

**ಬಾಬರ್ (ಕ್ರಿ.ಶ. 1526–1530)**

ಕ್ರಿ.ಶ. ಹದಿನಾರನೆಯ ಶತಮಾನದ ಮೊದಲ ಭಾಗದಲ್ಲಿ ದೆಹಲಿಯ ಸುಲ್ತಾನರ ಅವಸಾನ ಆರಂಭವಾಗಿತ್ತು. ದೆಹಲಿಯ ಸುಲ್ತಾನನಾದ ಇಬ್ರಾಹಿಂ ಲೋದಿಯ ಅಸಮರ್ಥ ಆಡಳಿತ, ತನ್ನ ಆಫ್ಘನ್ ಕುಲೀನರ ಬಗೆಗೆ ಅವನು ತೋರಿದ ದರ್ಪ ಮತ್ತು ರಜಪೂತ ನಾಯಕ ರಾಣಾ ಸಂಗನ ಜತೆಗೆ ನಡೆಸಿದ ಹೋರಾಟ ಇವುಗಳ ಪರಿಣಾಮವಾಗಿ ಭಾರತದಲ್ಲಿ ಒಂದು ಮಹತ್ವದ ರಾಜಕೀಯ ಬದಲಾವಣೆಗೆ ಅವಕಾಶವಾಯಿತು.

ಪಂಜಾಬಿನ ರಾಜ್ಯಪಾಲ ದವಲತ್ ಖಾನ್ ಲೋದಿಯು ದೆಹಲಿಯ ಇಬ್ರಾಹಿಂ ಲೋದಿಯೊಂದಿಗೆ ಹೋರಾಡಲು ಕಾಬೂಲಿನ ದೊರೆ ಬಾಬರನ ಸಹಾಯವನ್ನು ಕೋರಿದನು. ಬಾಬರನು ಭಾರತಕ್ಕೆ ಬಂದು ಇಬ್ರಾಹಿಂ ಲೋದಿಯನ್ನು 1526ರ ಮೊದಲ ಪಾಣಿಪತ್ ಕದನದಲ್ಲಿ ಸೋಲಿಸಿದನು. ಹೀಗೆ ಬಾಬರನು ಕ್ರಿ.ಶ. 1526ರಲ್ಲಿ ಮೊಗಲ್ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಇದರಿಂದ ಭಾರತದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ಆರಂಭವಾಯಿತು.

ಮೊದಲ ಪಾಣಿಪತ್ ಕದನವಾದ ಮೇಲೆ ಬಾಬರನು ಕ್ರಿ.ಶ. 1527ರಲ್ಲಿ ಖನ್ವಾ ಯುದ್ಧದಲ್ಲಿ ಮೇವಾರದ ರಾಣಾಸಂಗ ಎಂಬ ರಜಪೂತ ನಾಯಕನನ್ನು ಸೋಲಿಸಿದನು. ಮುಂದೆ ಕ್ರಿ.ಶ. 1529ರಲ್ಲಿ ಗೋಗ್ರಾ ಕದನದಲ್ಲಿ ಆಫ್ಘನರನ್ನು ಸದೆ ಬಡಿದನು. ಹೀಗೆ ಬಾಬರನು ಉತ್ತರ ಭಾರತದ ಪ್ರಶ್ನಾತೀತ ಪ್ರಭುವಾದನು. ಬಾಬರನು ಭಾರತದಲ್ಲಿ ಮೊಗಲಾಯಿ ಆಳ್ವಿಕೆಯನ್ನು ಸ್ಥಾಪಿಸಿ ಕ್ರಿ.ಶ. 1530ರಲ್ಲಿ ಕಾಲವಾದನು.

**ಹುಮಾಯೂನ್ (ಕ್ರಿ.ಶ. 1530–1556)**

ಬಾಬರನ ನಂತರ ಪಟ್ಟಕ್ಕೆ ಏರಿದಾಗ ಹುಮಾಯೂನನಿಗೆ 23ವರ್ಷ ವಯಸ್ಸು. ಕಾಬೂಲ್ ಕಂದಹಾರ್ ಮತ್ತು ಹಿಂದೂಕುಶ್ ಪರ್ವತ ಸಾಲಿನ ಆಚೆಯ ಬಡಕ್‌ಶಾನವರೆಗೆ ಇವನ ಸಾಮ್ರಾಜ್ಯ ಹರಡಿತ್ತು. ಸಾಮ್ರಾಟನಾಗುವುದಕ್ಕೆ ಮೊದಲು ಹುಮಾಯೂನನು ಬಡಕ್‌ಶಾನಿನ ರಾಜ್ಯಪಾಲನಾಗಿದ್ದನು. ಪಾಣಿಪತ್ ಮತ್ತು ಖನ್ವಾ ಯುದ್ಧಗಳಲ್ಲಿ ಭಾಗವಹಿಸಿದ್ದನು.

ಹುಮಾಯೂನನು ಆಫ್ಘನ್ ಮುಖಂಡ ಷೇರ್‌ಷಹಾನನ್ನು ಎದುರಿಸುವ ಸಮಸ್ಯೆ ಬಂತು. ಷೇರ್‌ಷಹಾ 1538ರಲ್ಲಿ ನಡೆದ ಕನೋಜ್ ಕದನದಲ್ಲಿ ಹುಮಾಯೂನನನ್ನು ಸೋಲಿಸಿ ತನ್ನದೇ ಆದ 'ಸೂರ್' ಸಂತತಿಯನ್ನು ಆರಂಭಿಸಿದನು. ಸೋತ ಹುಮಾಯೂನನು ತನ್ನ ಬಹಳಕಾಲ ಭಾರತದ ಹೊರಗಡೆಯೇ ಅಲೆಮಾರಿಯಾಗಿ ಉಳಿಯಬೇಕಾಯಿತು. 1555ರಲ್ಲಿ ಹುಮಾಯೂನ್ ದೆಹಲಿಯನ್ನು ಮತ್ತೆ ಗೆದ್ದುಕೊಂಡನು.

**ಷೇರ್‌ಷಹಾ ಮತ್ತು ಆತನ ಆಳ್ವಿಕೆ**

ಷೇರ್‌ಷಹಾ (ಮೊದಲಿಗೆ ಇವನ ಹೆಸರು ಫರೀದ್) ಕನೋಜಿನ ಕದನದಲ್ಲಿ ಹುಮಾಯೂನನನ್ನು ಸೋಲಿಸಿ ದೆಹಲಿಯ ಸಿಂಹಾಸನವನ್ನು ಏರಿದನು. ಆಗ ಅವನಿಗೆ 67ವರ್ಷ ವಯಸ್ಸು. ಪಟ್ಟಕ್ಕೆ ಬರುವ ಮೊದಲು ಅವನು ಜಾನ್ಪುರದಲ್ಲಿ ತನ್ನ ಪೂರ್ವಜರ ಜಾಗೀರನ್ನು ನಿರ್ವಹಿಸಿ ಆಡಳಿತಾನುಭವದಲ್ಲಿ ನೈಪುಣ್ಯವನ್ನು ಸಂಪಾದಿಸಿದ್ದನು.

ಷೇರ್‌ಷಹಾ ಪಶ್ಚಿಮದಲ್ಲಿ ಮಾಳವ ಹಾಗೂ ಸಮಸ್ತ ರಾಜಸ್ಥಾನವನ್ನು ಗೆದ್ದುಕೊಂಡನು. ಅವನ ಕೊನೆಯ ಹೋರಾಟ ಕಲಿಂಜರ್‌ನ ಅಭೇದ್ಯ ಕೋಟೆಯ ಮೇಲೆ. ಮುತ್ತಿಗೆಯ ಸಂದರ್ಭದಲ್ಲಿ ಆದ ಒಂದು ಸ್ಫೋಟದ ಪರಿಣಾಮವಾಗಿ ಕ್ರಿ.ಶ. 1545ರಲ್ಲಿ ತೀರಿಕೊಂಡನು. ಆತನ ಸಾಮ್ರಾಜ್ಯವು ಬಂಗಾಳದಿಂದ ಸಿಂಧೂ ನದಿಯವರೆಗೆ (ಕಾಶ್ಮೀರವನ್ನು ಬಿಟ್ಟು) ಹರಡಿತ್ತು.

**ಆಡಳಿತ**

ಷೇರ್‌ಷಹಾ ರಾಜ್ಯವನ್ನು ಸರಕಾರ್‌ಗಳಾಗಿ ವಿಂಗಡಿಸಿದನು. ಒಂದೊಂದು ಸರಕಾರ್‌ನಲ್ಲೂ ಹಲವಾರು 'ಪರಗಣ'ಗಳಿರುತ್ತಿದ್ದುವು. ಪ್ರತಿ ಪರಗಣದಲ್ಲೂ ಹಲವಾರು ಹಳ್ಳಿಗಳು ಇರುತ್ತಿದ್ದವು. ಪ್ರತಿ ಪರಗಣಗದಲ್ಲೂ 'ಅಮೀನ್' 'ಶಿಕದಾರ್' 'ಕೋಶಾಧಿಕಾರಿ' ಮತ್ತು ಇಬ್ಬರು ಕಾರಕೂನರಿರುತ್ತಿದ್ದರು. ಪ್ರತಿ 'ಸರಕಾರ್' ಅನ್ನು ನೋಡಿಕೊಳ್ಳಲು 'ಶಿಕ್ದಾರ್' ಮತ್ತು 'ಮುನ್ಸಿ' ಇರುತ್ತಿದ್ದರು. ಷೇರ್‌ಷಹಾ ಅಪರಾಧಿಗಳನ್ನು ಉಗ್ರವಾಗಿ ದಂಡಿಸುತ್ತಿದ್ದನು. ಒಂದು ಹಳ್ಳಿಯ ವಲಯದಲ್ಲಿ ಅಪರಾಧ ಜರುಗಿದರೆ ಷೇರ್‌ಷಹಾ ಇಡೀ ಹಳ್ಳಿಯೇ ತಪ್ಪಿತಸ್ಥವಾಗುತ್ತದೆಂದು ಸಾರಿಸಿ ಈ ಕ್ರಮವನ್ನು ಜಾರಿಗೆ ತರುತ್ತಿದ್ದನು.

ಭೂಮಿಯನ್ನು ಅಳೆಯುವಾಗ ಏಕರೂಪದ ವ್ಯವಸ್ಥೆ ಮಾಡಲಾಗಿತ್ತು. ಪ್ರತಿ ಜಮೀನನ್ನು ಅಳೆಯಲಾಗುತ್ತಿತ್ತು. ಒಟ್ಟು ಬೆಳೆಯಲ್ಲಿ ರೈತನು ಮೂರನೇ ಒಂದು ಭಾಗವನ್ನು ರಾಜನಿಗೆ ಕೊಡಬೇಕಾಗಿತ್ತು. ಇದನ್ನು ಹಣ ಅಥವಾ ಧಾನ್ಯರೂಪದಲ್ಲಿ ಕೊಡಬಹುದಾಗಿತ್ತು. "ಕಬೂಲಿಯತ್" ಮತ್ತು "ಪಟ್ಟ" ಎಂಬ ಕಡತಗಳನ್ನು ರೈತರಿಗೆ ಕೊಡಲಾಗುತ್ತಿತ್ತು. ಅವುಗಳಲ್ಲಿ ಸರಕಾರಕ್ಕೆ ಕೊಡಬೇಕಾಗಿರುವ ಬಾಕಿಯ ಪ್ರಸ್ತಾಪವಿರುತ್ತಿತ್ತು. ಹಕ್ಕುಪತ್ರವೂ ಇರುತ್ತಿತ್ತು. ಹೀಗೆ ವಿಸ್ತಾರವಾದ ಕಂದಾಯ ವ್ಯವಸ್ಥೆಯು ಮುಂದೆ ಅಕ್ಬರನ ಆಳ್ವಿಕೆಯ ಕಾಲದಲ್ಲಿ ಸಮರ್ಥ ಕಂದಾಯ ವ್ಯವಸ್ಥೆ ಉದಯಕ್ಕೆ ಕಾರಣವಾಗಿದೆ.

ಷೇರ್‌ಷಹಾ ಕಾನೂನು ಮತ್ತು ವ್ಯವಸ್ಥೆಗಳನ್ನು ತನ್ನ ಸಾಮ್ರಾಜ್ಯದಲ್ಲಿ ಬಿಗಿಪಡಿಸಿದ್ದನು. ದರೋಡೆಕೋರರು, ಕಳ್ಳರು, ಜಮೀನಿನ ಕಂದಾಯ ವಿರೋಧಿಸುವವರು ಇವರೆಲ್ಲರ ವಿರುದ್ಧ ಉಗ್ರ ಕ್ರಮವನ್ನು ಕೈಗೊಳ್ಳುತ್ತಿದ್ದನು. ಅಲ್ಲದೆ ಆತನು ಅನೇಕ ಹೆದ್ದಾರಿಗಳನ್ನು ನಿರ್ಮಿಸಿ ಪ್ರಯಾಣಿಕರ ಅನುಕೂಲಕ್ಕಾಗಿ ಎರಡೂ ಕಡೆಯೂ ಮರಗಳನ್ನು ನೆಡಿಸಿದನು.

ಷೇರ್‌ಷಹಾ ಅನೇಕ ಪ್ರಸಿದ್ಧ ಕಟ್ಟಡಗಳನ್ನು ಕಟ್ಟಿಸಿದನು. ಸಸಾರಾಂನ ಅವನ ಗೋರಿ ಅವುಗಳಲ್ಲೆಲ್ಲ ತುಂಬ ಪ್ರಸಿದ್ಧವಾದದ್ದು. ಷೇರ್‌ಷಹಾ ಆಳಿದ್ದು ಐದೇ ವರ್ಷ.

ಆದರೆ ಭಾರತದ ಇತಿಹಾಸದಲ್ಲಿ ಪ್ರಮುಖ ರಾಜರುಗಳಲ್ಲಿ ಒಬ್ಬನೆಂದು ಮಾನ್ಯತೆ ಪಡೆದಿದ್ದಾನೆ.

**ಅಕ್ಬರ್ (ಕ್ರಿ.ಶ. 1556–1605)**

ಷೇರ್‌ಷಹಾನ ಮರಣಾನಂತರ ಬಂದ ರಾಜರು ದುರ್ಬಲರೂ ಅದಕ್ಷರೂ ಆಗಿದ್ದರು. ಹುಮಾಯೂನನು ದೆಹಲಿಯನ್ನು 1555ರಲ್ಲಿ ಮತ್ತೆ ಗೆದ್ದುಕೊಂಡನು. ಮರುವರ್ಷವೇ ಅವನು ಮರಣ ಹೊಂದಿದನು.

1556ರಲ್ಲಿ ಹುಮಾಯೂನನ ಹಿರಿಯ ಮಗ ಅಕ್ಬರ್ ಪಟ್ಟಕ್ಕೆ ಬಂದಾಗ ಅವನಿಗೆ 14ವರ್ಷ ವಯಸ್ಸಾಗಿತ್ತು. ಬೈರಾಂಖಾನನು ಅಕ್ಬರನ ರಾಜಪ್ರತಿನಿಧಿಯಾಗಿದ್ದನು. ಅಕ್ಬರನ ಆಳ್ವಿಕೆಯು ಭಾರತದ ಇತಿಹಾಸದಲ್ಲಿ ಒಂದು ಪ್ರಗತಿಪರವೂ, ವೈಭವಯುಕ್ತವೂ ಆದ ಕಾಲವಾಗಿತ್ತು. ಅಬುಲ್ ಫಸಲನ 'ಅಕ್ಬರ್ ನಾಮಾ'ದ ಭಾಗವಾದ 'ಐನಿ ಅಕ್ಬರಿ'ಯಲ್ಲಿ ಅಕ್ಬರನ ಆಳ್ವಿಕೆಗೆ ಸಂಬಂಧಿಸಿದಂತೆ ಉಪಯುಕ್ತ ಮಾಹಿತಿಗಳು ದೊರೆಯುತ್ತವೆ.

**ಅಕ್ಬರನ ದಿಗ್ವಿಜಯ**

ತಂದೆ ಸತ್ತಾಗ ಅಕ್ಬರ್ ದೆಹಲಿಯಿಂದ ದೂರವಿದ್ದನು. ದೆಹಲಿಯು ಆಗ ಪಂಜಾಬಿನ ದೊರೆ ಸಿಂಕಂದರ್‌ಸೂರನ ಹಿಂದೂ ದಂಡನಾಯಕನಾದ ಹೇಮುವಿನ ವಶದಲ್ಲಿತ್ತು. ಕ್ರಿ.ಶ. 1556ರಲ್ಲಿ ಎರಡನೆಯ ಪಾಣಿಪತ್ ಕದನ ನಡೆಯಿತು. ಅದರಲ್ಲಿ ಬೈರಾಂಖಾನನ ಸಮರ್ಥ ಸಹಕಾರದಿಂದ ಅಕ್ಬರನು ಹೇಮುವಿನ ನೇತೃತ್ವದಲ್ಲಿ ಬಂದ ಆಫ್ಘನ್ ಸೇನೆಯನ್ನು ಸೋಲಿಸಿದನು. ಹೇಮುವನ್ನು ಕೊಂದು ದೆಹಲಿಯನ್ನು ವಶಪಡಿಸಿಕೊಳ್ಳಲಾಯಿತು. ಕ್ರಿ.ಶ. 1557ರಲ್ಲಿ ಸಿಕಂದರ್ ಶರಣಾಗತನಾದನು. ಹೀಗೆ ಅಕ್ಬರ್ ಪಂಜಾಬ್, ದೆಹಲಿ, ಆಗ್ರಾಗಳ ಒಡೆತನವನ್ನು ಸಾಧಿಸಿದನು.

ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ನಂತರ ಅಕ್ಬರನು ತನ್ನ ದಿಗ್ವಿಜಯಗಳ ಯೋಜನೆಯನ್ನು ಹಾಕಿಕೊಂಡನು. ಗ್ವಾಲಿಯರ್, ಅಜ್ಮೀರ್, ಜೋಧಪುರ ಮತ್ತು ರಾಣಿ ದುರ್ಗಾವತಿಯ ಗೊಂಡವನಗಳ ಮೇಲೆ ಯುದ್ಧ ಸಾರಿ ಯಶಸ್ವಿಯಾದನು. ಮೇವಾರ, ರಣಥಂಬೋರ್ ಹಾಗೂ ಕಲಿಂಜರ್‌ಗಳ ರಜಪೂತ ರಾಜರುಗಳನ್ನು ಕ್ರಮವಾಗಿ ಗೆದ್ದನು. 1572ರಲ್ಲಿ ಗುಜರಾತನ್ನು ಗೆದ್ದುಕೊಂಡು 1574ರಲ್ಲಿ ಬಿಹಾರನ್ನು ಸ್ವಾಧೀನ ಪಡಿಸಿಕೊಂಡನು. ಅನಂತರ ಬಂಗಾಳ, ಕಾಬೂಲ್, ಕಂದಹಾರ್ ಮತ್ತು ಸಿಂಧ್‌ಗಳನ್ನು ಗೆದ್ದುಕೊಂಡನು. ದಕ್ಷಿಣದಲ್ಲಿ ಖಾನ್ದೇಶ, ಬೀರಾರ್ ಮತ್ತು ಅಹಮದ್‌ನಗರಗಳನ್ನು ಕ್ರಿ.ಶ. 1600ರಲ್ಲಿ ಸ್ವಾಧೀನಪಡಿಸಿಕೊಂಡನು. ಬಿಜಾಪುರದಿಂದಲೂ ಕಪ್ಪ ಸಂಗ್ರಹಿಸಿದನು. ಹೀಗೆ ಭಾರತದ ದೊಡ್ಡ ಭೂಭಾಗವನ್ನು ತನ್ನ ಆಳ್ವಿಕೆಗೆ ಒಳಪಡಿಸಿದ್ದನು.

ರಜಪೂತರ ಬೆಂಬಲ ಮತ್ತು ವಿಧೇಯತೆಗಳನ್ನು ಪಡೆಯುವುದಕ್ಕಾಗಿ ಅಕ್ಬರನು ರಜಪೂತರೊಂದಿಗೆ 'ಸಂಧಾನ ನೀತಿ'ಯನ್ನು ಅನುಸರಿಸಿದನು. ಮೊಗಲರ ಮತ್ತು ರಜಪೂತರ ನಡುವೆ ಅಂತರ ಜಾತೀಯ ವಿವಾಹಗಳನ್ನು ಪ್ರೋತ್ಸಾಹಿಸಿದನು. ಜೈಪುರದ ರಾಜಪುತ್ರಿ ಜೋಧಾಬಾಯಿಯನ್ನು ತಾನೇ ಮದುವೆಯಾದನು. ಇವಳ ಮಗನೇ

ಜಹಾಂಗೀರ್. ರಾಜಾ ತೋದರಮಲ್, ರಾಜಾಬೀರಬಲ್, ರಾಜಾ ಭಗವಾನ್ ಮೊದಲಾದ ಹಿಂದೂಗಳನ್ನು ಉನ್ನತ ಅಧಿಕಾರಗಳಿಗೆ ನೇಮಿಸಿದನು.

ಅಕ್ಬರನು ಗೋಹತ್ಯೆಯನ್ನೂ, 'ಸತೀ' ಪದ್ಧತಿಯನ್ನೂ ನಿಲ್ಲಿಸಿದನು. ಅಂತರ ಜಾತಿ ವಿವಾಹ, ವಿಧವಾ ವಿವಾಹಗಳಿಗೆ ಪ್ರೋತ್ಸಾಹ ನೀಡಿದನು. ಶಿಶು ವಿವಾಹವನ್ನು ಹೀಗಳೆದನು. ಹಿಂದೂಗಳಿಂದ ವಸೂಲು ಮಾಡುತ್ತಿದ್ದ ಯಾತ್ರಾ ತೆರಿಗೆ, ಜೆಸಿಯಾ ತಲೆಗಂದಾಯಗಳನ್ನು ನಿಲ್ಲಿಸಿದನು. ಎಲ್ಲ ಧರ್ಮಗಳ ಸಹಬಾಳ್ವೆಗಾಗಿ ಶ್ರಮಿಸಿದನು. ಕ್ರೈಸ್ತ, ಹಿಂದೂ, ಜೈನ, ಇಸ್ಲಾಂ ಧರ್ಮಗಳ ವಿದ್ವಾಂಸರನ್ನು ಆಸ್ಥಾನಕ್ಕೆ ಆಹ್ವಾನಿಸಿ ಸಂವಾದಗಳನ್ನು ಏರ್ಪಡಿಸಿದನು. ಎಲ್ಲ ಮತಧರ್ಮಗಳ ಉತ್ತಮಾಂಶಗಳನ್ನು ಗುರುತಿಸಿದನು. ಇದರ ಫಲವಾಗಿ ಆತನ ನವ ಧಾರ್ಮಿಕ ಮತವಾದ 'ದೀನ್‌ಇಲಾಹಿ' ಜನ್ಮ ತಾಳಿತು.

ಅಕ್ಬರನು ಸಾಹಿತ್ಯ, ಸಂಗೀತ ಮತ್ತು ವರ್ಣಚಿತ್ರಗಳಿಗೆ ಅಪಾರವಾದ ಪ್ರೋತ್ಸಾಹ ನೀಡಿದನು. ಆಗ್ರಾ, ಲಾಹೋರ್‌ಗಳಲ್ಲಿ ಕೋಟೆಗಳನ್ನು ಕಟ್ಟಿಸಿದನು. ಫತೇಪುರ ಸಿಕ್ರಿ ಎಂಬ ಹೊಸ ನಗರವನ್ನು ನಿರ್ಮಿಸಿದನು. ಹೀಗೆ ತನ್ನ ವೈವಿಧ್ಯಮಯ ಕಾಣಿಕೆಗಳಿಂದ ಅಕ್ಬರನು 'ಅಕ್ಬರ ಮಹಾಶಯ' ಎಂಬ ಬಿರುದಿಗೆ ಯೋಗ್ಯನಾದನು.

**ಜಹಾಂಗೀರ್ (ಕ್ರಿ.ಶ. 1605–1627)**

ಅಕ್ಬರನ ಮರಣಾನಂತರ ಅವನ ಹಿರಿಯ ಮಗ ಜಹಾಂಗೀರನು ಕ್ರಿ.ಶ. 1605ರಲ್ಲಿ ಪಟ್ಟಕ್ಕೆ ಬಂದನು. ಈತ ಅನೇಕ ಬಗೆಗಳಲ್ಲಿ ಸಮರ್ಥನೂ, ಪ್ರತಿಭಾವಂತನೂ ಆಗಿದ್ದನು. ಈತನ ಬಖೈರು (ಜೀವನ ಚರಿತ್ರೆ) ಒಂದು ಉತ್ತಮ ನೆನಪಿನ ಗ್ರಂಥವಾಗಿದ್ದು ದೊರೆಯ ಸಾಹಿತ್ಯಾಭಿರುಚಿಯನ್ನು ಪ್ರಕಟಿಸುವಂಥದಾಗಿದೆ. ಈತನ ಸಾಮ್ರಾಜ್ಯವು ಸುವ್ಯವಸ್ಥಿತವಾಗಿ ಶಾಂತಿಯುತವಾಗಿ ಇತ್ತು. ಜಹಾಂಗೀರ್ ದಕ್ಷ ಆಡಳಿತಗಾರ. ಬಡವರಿಗಾಗಿ ಸರಕಾರಿ ಆಸ್ಪತ್ರೆಗಳನ್ನು ಕಟ್ಟಿಸಿದನು. ನ್ಯಾಯಪ್ರಿಯನಾಗಿದ್ದ ಈತ ಜನಗಳ ಸಂಕಷ್ಟಗಳನ್ನು ಸ್ವತಃ ಕೇಳುತ್ತಿದ್ದ.

1611ರಲ್ಲಿ ಜಹಾಂಗೀರ್ ಮೆಹರುನ್ನೀಸಾ ಎಂಬ ವಿಧವೆಯನ್ನು ಮದುವೆಯಾದ. ಮುಂದೆ ಇವಳೇ ನೂರ್‌ಜಹಾನ್ ಎಂಬ ಹೆಸರು ಪಡೆದಳು. ಈಕೆ ಜಹಾಂಗೀರನ ಮೇಲೆ ಮತ್ತು ಅವನ ಆಡಳಿತದ ಮೇಲೆ ತುಂಬ ಪ್ರಭಾವ ಬೀರಿದಳು. ಜಹಾಂಗೀರನು ಕ್ರಿ.ಶ. 1627ರಲ್ಲಿ ತೀರಿಕೊಂಡನು.

**ಷಾಜಹಾನ್ (ಕ್ರಿ.ಶ. 1628–1658)**

ಕ್ರಿ.ಶ. 1628ರಲ್ಲಿ ಪಟ್ಟಕ್ಕೆ ಬಂದ ರಾಜಕುಮಾರ ಖುರ್‍ರಂ, ಷಾಜಹಾನ್ ಎಂಬ ಹೆಸರನ್ನಿಟ್ಟುಕೊಂಡನು. ಷಾಜಹಾನ್ ಕ್ರಿಯಾಶೀಲ, ಬುದ್ಧಿವಂತ ಹಾಗೂ ಮಹತ್ವಾಕಾಂಕ್ಷಿ. ಆತನ ಸಾಹಸ ಮತ್ತು ಹೊಣೆಗಾರಿಕೆಯ ಪ್ರಜ್ಞೆಗಳನ್ನು ಕಂಡುಕೊಂಡೇ ತಂದೆ ಜಹಾಂಗೀರನು ಮಗನನ್ನು ಅನೇಕ ಯುದ್ಧಗಳಿಗೆ ಕಳಿಸುತ್ತಿದ್ದನು.

ಷಾಜಹಾನ್ ಒಬ್ಬ ದೊಡ್ಡ ನಿರ್ಮಾತೃವೂ ಆಗಿದ್ದನು. ಮೋತಿ ಮಸೀದಿ, ಕೆಂಪುಕೋಟೆ, ಜಮ್ಮಾ ಮಸೀದಿಗಳನ್ನು ದೆಹಲಿಯಲ್ಲಿಯೂ, ತಾಜಮಹಲನ್ನು

ಆಗ್ರಾದಲ್ಲಿಯೂ ಕಟ್ಟಿಸಿದನು. ಲೋಕ ಪ್ರಸಿದ್ಧವಾದ 'ಮಯೂರ ಸಿಂಹಾಸನ'ವನ್ನು ಮಾಡಿಸಿದವನೂ ಈತನೇ.

ಕೊನೆಯ ವರ್ಷಗಳಲ್ಲಿ ಸಿಂಹಾಸನಕ್ಕಾಗಿ ಇವನ ಮಕ್ಕಳ ನಡುವೆ ಅಂತರ್ಯುದ್ಧ ನಡೆಯಿತು. ಕೊನೆಗೆ ಔರಂಗಜೇಬನು ಯಶಸ್ವಿಯಾದನು.

**ಔರಂಗಜೇಬ್ (ಕ್ರಿ.ಶ. 1659–1707)**

ತನ್ನ ಎಲ್ಲ ಸ್ಪರ್ಧಿಗಳನ್ನೂ ಮುಗಿಸಿ ಔರಂಗಜೇಬನು ಅಲಂಗೀರ್ ಎಂಬ ಬಿರುದಿನೊಂದಿಗೆ 1659ರಲ್ಲಿ ಪಟ್ಟಕ್ಕೆ ಬಂದನು. ಈತ ತುಂಬ ಧರ್ಮಶ್ರದ್ಧೆಯುಳ್ಳ ಸರಳ ಸ್ವಭಾವದ ವ್ಯಕ್ತಿ. ಸುಂದರ ಲಿಪಿಕಾರನೂ ಆಗಿದ್ದು ಖುರಾನಿನ ಸುಂದರ ಪ್ರತಿಗಳನ್ನು ಬರೆದಿಟ್ಟನು.

ಔರಂಗಜೇಬನು ಹೆಚ್ಚಾಗಿ ಉತ್ತರ ಭಾರತದಲ್ಲಿರುತ್ತಿದ್ದನು. ದಖನ್ನಿನ ವಿದ್ಯಮಾನಗಳನ್ನು ಅವನ ರಾಜಪ್ರತಿನಿಧಿಗಳು ನಿರ್ವಹಿಸುತ್ತಿದ್ದರು. ಕ್ರಿ.ಶ. 1681ರಿಂದ ಮುಂದೆ ಕೊನೆಗಾಲದ ತನಕ ಈತನು ದಖನ್ನಿನಲ್ಲೇ ಇದ್ದು ಮರಾಠರನ್ನು ಬಗ್ಗು ಬಡಿಯುವ ವ್ಯರ್ಥ ಪ್ರಯತ್ನಗಳಲ್ಲಿ ತೊಡಗಿದ್ದನು.

ಅಕ್ಬರನಂತೆ ಔರಂಗಜೇಬನು ಧರ್ಮಸಹಿಷ್ಣುತೆಯ ಸೂತ್ರವನ್ನು ಪಾಲಿಸಲಿಲ್ಲ. ಹಿಂದೂಗಳ ಮೇಲೆ ಹಾಗೂ 'ಷಿಯಾ'ಗಳ ಮೇಲೆ ಅನೇಕ ಕಟ್ಟಳೆಗಳನ್ನು ಹೇರಿದನು. ಆಡಳಿತದಲ್ಲಿ ಹಿಂದೂಗಳನ್ನು ಉನ್ನತ ಹುದ್ದೆಗಳಿಗೆ ಆರಿಸುತ್ತಿರಲಿಲ್ಲ. ಗೋಲ್ಕೊಂಡ ಮತ್ತು ಬಿಜಾಪುರಗಳ ಷಿಯಾ ಅರಸರನ್ನು ಅವನು ವಿರೋಧಿಸಿದನು. ಬಿಜಾಪುರದ ಆದಿಲ್‌ಷಾಹನ ಆಸ್ಥಾನದಲ್ಲಿ ಹಿಂದೂಗಳ ಏಳಿಗೆ ಇವನಿಗೆ ಸಹನವಾಗಲಿಲ್ಲ. ಔರಂಗಜೇಬನು ಬಿಜಾಪುರ ಮತ್ತು ಗೊಲ್ಕೊಂಡದ ಮೇಲೆ ದಂಡೆತ್ತಿ ಹೋದುದಕ್ಕೆ ಇದೂ ಒಂದು ಕಾರಣ.

ಸಂಪ್ರದಾಯವಾದಿ ಮುಸ್ಲಿಮನಾಗಿ ಔರಂಗಜೇಬನು ಮದ್ಯಪಾನ, ಮೋಜು ಮತ್ತು ಸಂಗೀತಗಳ ಬಗೆಗೆ ತಿರಸ್ಕಾರವನ್ನು ತೋರಿದನು. ತನ್ನ ಆಸ್ಥಾನದಲ್ಲಿ ದರ್ಬಾರಿನ ವೈಭವವಂತಿಕೆ ದುಂದುವೆಚ್ಚಗಳನ್ನು ತಪ್ಪಿಸಿದನು. ತನ್ನ ರಾಜ್ಯದ ಕುಲೀನರೂ ಸರಳ ಜೀವನವನ್ನು ನಡೆಸುವಂತೆ ಪ್ರೋತ್ಸಾಹಿಸಿದನು. ಆದರೆ ಈತನ ಆಳ್ವಿಕೆಯಲ್ಲಿ ಮೊಗಲ್ ಸಾಮ್ರಾಜ್ಯವು ಪತನಗೊಳ್ಳಲು ಆರಂಭವಾಗಿತ್ತು.

## ಮೊಗಲರ ಆಡಳಿತ

ಬಾಬರ್ ಮತ್ತು ಹುಮಾಯೂನರಿಬ್ಬರೂ ಸದಾ ಯುದ್ಧನಿರತರಾಗಿದ್ದುದರಿಂದ ಆಡಳಿತದ ಕಡೆಗೆ ಹೆಚ್ಚು ಲಕ್ಷ್ಯವಿರಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. ಅಕ್ಬರನ ಕಾಲದಲ್ಲಿ ಒಂದು ಸುವ್ಯವಸ್ಥಿತ ಆಡಳಿತ ವ್ಯವಸ್ಥೆ ರೂಪಿತವಾಗಿತ್ತು. ಷೇರ್‌ಷಹಾ ಒಂದು ಉತ್ತಮ ಆಡಳಿತ ವ್ಯವಸ್ಥೆಯನ್ನು ಮಾಡಿ ಹೋಗಿದ್ದನು. ಸ್ವಲ್ಪ ಸುಧಾರಣೆಗಳೊಂದಿಗೆ ಅಕ್ಬರನು ಅದನ್ನೇ ಅನುಸರಿಸಿದನು. ಅಲ್ಲದೆ ಅಕ್ಬರನು ಕುಲೀನ ವರ್ಗದವರೊಂದಿಗೆ ಹಾಗೂ

ಪ್ರಧಾನ ಜನವರ್ಗದೊಂದಿಗೆ (ಅದರಲ್ಲೂ ಮುಖ್ಯವಾಗಿ ರಜಪೂತರೊಂದಿಗೆ) ಉತ್ತಮ ಬಾಂಧವ್ಯವನ್ನೂ, ವ್ಯಕ್ತಿ ಸಂಪರ್ಕವನ್ನೂ ಇಟ್ಟುಕೊಳ್ಳಲು ಪ್ರಯತ್ನಿಸಿದನು.

ಮೊಗಲರದು ಕೇಂದ್ರೀಕೃತ ಪ್ರಭುತ್ವ. ಚಕ್ರವರ್ತಿಯು ಸರ್ವಪ್ರಬಲನಾಗಿದ್ದು ಯುದ್ಧ ಸಂದರ್ಭಗಳಲ್ಲಿ ತಾನೇ ಸೇನೆಯನ್ನು ತೆಗೆದುಕೊಂಡು ಹೋಗುತ್ತಿದ್ದನು. ಅವನೇ ನ್ಯಾಯಾಧಿಪತಿಯೂ ಆಗಿರುತ್ತಿದ್ದನು. ಆಡಳಿತದ ಎಲ್ಲ ಅಂಶಗಳಲ್ಲೂ ಅವನ ಮಾತು ಅಂತಿಮವಾಗಿರುತ್ತಿತ್ತು.

ಆಡಳಿತದಲ್ಲಿ ಸಹಾಯ ಮಾಡಲು ಚಕ್ರವರ್ತಿ ಸಚಿವ ಮಂಡಲವನ್ನು ಇಟ್ಟುಕೊಂಡಿರುತ್ತಿದ್ದನು. ಮೂವರು ಮುಖ್ಯರಾದ ಮಂತ್ರಿಗಳೆಂದರೆ ವಕೀಲ (ಪ್ರಧಾನ ಮಂತ್ರಿ) ದಿವಾನ್ (ವಜೀರ, ಹಣಕಾಸಿನ ಮಂತ್ರಿ) ಮತ್ತು ಸದರ್ ಉರ್ ಬಕ್ಷಿ (ಧಾರ್ಮಿಕ ದತ್ತಿ ದಾನಗಳ ನಿರ್ವಹಣೆಯ ಕೆಲಸ). ಈ ಮಂತ್ರಿಗಳೇ ಅಲ್ಲದೆ ವಿಭಾಗದ ಮಂತ್ರಿಗಳೂ ಇರುತ್ತಿದ್ದರು.

**ಪ್ರಾಂತ ಸರಕಾರ**

ಸಾಮ್ರಾಜ್ಯವನ್ನು ನಾನಾ ಪ್ರಾಂತಗಳಾಗಿ ವಿಂಗಡಿಸಲಾಗಿತ್ತು. ಅವುಗಳನ್ನು 'ಸುಬಾ' ಎಂದು ಕರೆಯಲಾಗುತ್ತಿತ್ತು. ಅದರ ಅಧಿಕಾರಿ ಸುಬೇದಾರ್. ಆತನ ಸಹಾಯಕರೆಂದರೆ ಫೌಜುದಾರರು, ಕಂದಾಯ ವಸೂಲಿಗಾರರು ಹಾಗೂ ಜಮೀನುದಾರರು.

ಪ್ರತಿಯೊಂದು ಸುಬಾ ಮತ್ತೆ 'ಸರಕಾರ್' (ಜಿಲ್ಲೆ)ಗಳಾಗಿ ಒಡೆದುಕೊಳ್ಳುತ್ತಿತ್ತು. ಫೌಜುದಾರ ಜಿಲ್ಲೆಯ ಘಟಕವನ್ನು ನೋಡಿಕೊಳ್ಳುತ್ತಿದ್ದ. ಪ್ರತಿ ಸರ್ಕಾರ್ ಮತ್ತೆ ಪರಗಣಗಳಾಗಿ ವಿಭಜಿತವಾಗುತ್ತಿತ್ತು. ಪರಗಣವು ಕನಿಷ್ಠತಮ ಆಡಳಿತ ಘಟಕವಾಗಿತ್ತು. ಇದನ್ನು ಶಿಕ್ದಾರ್ ನೋಡಿಕೊಳ್ಳುತ್ತಿದ್ದ. ಹಳ್ಳಿಗಳ ಆಡಳಿತವನ್ನು ಸ್ಥಳೀಯ ಸರಕಾರಗಳು ನೋಡಿಕೊಳ್ಳುತ್ತಿದ್ದವು.

ಸುಬೇದಾರನು ಪ್ರಾಂತದಲ್ಲಿ ಶಾಂತಿ ಮತ್ತು ವ್ಯವಸ್ಥೆಗಳನ್ನು ಕಾಪಾಡಿಕೊಂಡು ಕಂದಾಯ ವಸೂಲಿಯ ಕಾರ್ಯವನ್ನೂ ನಿರ್ವಹಿಸುತ್ತಿದ್ದನು. ಅಲ್ಲದೆ ತನ್ನ ಸುತ್ತಣ ಮಾಂಡಳಿಕರಿಂದ ಕಪ್ಪಗಳನ್ನು ವಸೂಲು ಮಾಡುತ್ತಿದ್ದನು. ಸುಬೇದಾರನ ಕೈಕೆಳಗಿನ ಅಧಿಕಾರಿ ಪ್ರಾಂತದ ದಿವಾನ. ಕೊತ್ವಾಲನು ಕಾನೂನು ಮತ್ತು ವ್ಯವಸ್ಥೆಗಳ ಪಾಲಕನಾಗಿದ್ದನು. ಈತನು ಜನಗಣತಿಯ ದಾಖಲೆಗಳನ್ನು ನೋಡಿಕೊಳ್ಳುತ್ತಿದ್ದುದೇ ಅಲ್ಲದೆ ವಿದೇಶಿಯರ ಮೇಲೂ ನಿಗಾ ಇರಿಸುತ್ತಿದ್ದನು.

ಕಂದಾಯ ವ್ಯವಸ್ಥೆ ಅಕ್ಬರನ ತುಂಬ ಮಹತ್ವದ ಆಡಳಿತ ಘಟಕವಾಗಿತ್ತು. ರಾಜಾ ತೋದರಮಲ್ ಈ ವ್ಯವಸ್ಥೆಯ ಶಿಲ್ಪಿಯಾಗಿದ್ದನು. ಭೂಮಿಯನ್ನೆಲ್ಲ ಎಚ್ಚರಿಕೆಯಿಂದ ಬಾಂದು (ಸರ್ವೆ) ಮಾಡಿ ಅಳೆಯಲಾಗುತ್ತಿತ್ತು. ಭೂಮಿಯ ಇಳುವರಿಯ ಆಧಾರದ ಮೇಲೆ ಕಂದಾಯವನ್ನು ಗೊತ್ತುಪಡಿಸಲಾಗುತ್ತಿತ್ತು. ಭೂಕಂದಾಯವಾಗಿ ಒಟ್ಟು ಬೆಳೆಯ ಮೂರನೇ ಒಂದು ಭಾಗವನ್ನು ಸಲ್ಲಿಸಬೇಕಾಗಿತ್ತು.

**ಮನಸಬ್‌ದಾರೀ ಪದ್ಧತಿ**

ಸಾಮ್ರಾಜ್ಯವನ್ನು ವಿಸ್ತರಿಸುವುದಕ್ಕೆ ಮತ್ತು ಭದ್ರಪಡಿಸಿಕೊಳ್ಳುವುದಕ್ಕೆ ಒಂದು

ಸುಸಜ್ಜಿತ ಸೇನೆಯಿರಬೇಕೆಂದು ಅಕ್ಬರ್ ತೀರ್ಮಾನಿಸಿದ್ದನು. ಆದ್ದರಿಂದ ಮನ್‌ಸಬ್‌ದಾರೀ ಪದ್ಧತಿಯಿಂದ ತನ್ನ ಸರಕಾರವನ್ನು ಸೇನಾ ನಿರ್ವಹಣೆಯ ವ್ಯವಸ್ಥೆಯಾಗಿ ನಿರೂಪಿಸಿದನು.

ಮನ್ಸಬ್ ಎಂದರೆ ಸ್ಥಾನ, ಶ್ರೇಣಿ ಎಂದರ್ಥ. ಮನ್‌ಸಬ್‌ದಾರ್ ಎಂದು ನೇಮಿಸಲ್ಪಟ್ಟ ಎಲ್ಲ ಸರಕಾರೀ ಅಧಿಕಾರಿಗಳೂ ಪೌರ ಹಾಗೂ ಸೇನಾ ಕಾರ್ಯಗಳನ್ನು ನಿರ್ವಹಿಸಬೇಕಾಗಿತ್ತು. ರಾಜಾ ಮಾನ್‌ಸಿಂಗ್ ರಾಜಾ ತೋದರಮಲ್ ಮತ್ತು ರಾಜಾ ಭಗವಾನ್‌ದಾಸ್ ಇವರೆಲ್ಲ ಮನ್‌ಸಬ್‌ದಾರರಲ್ಲಿ ಸೇರಿದ ಹಿಂದೂಗಳು. ಮನ್‌ಸಬ್‌ದಾರರು ಯುದ್ಧದ ಸಮಯದಲ್ಲಿ ಚಕ್ರವರ್ತಿಗೆ ಸೇನಾ ಸಹಾಯವನ್ನು ಒದಗಿಸಬೇಕಾಗಿತ್ತು. ಶಾಂತಿಯ ಸಮಯದಲ್ಲಿ ಮನ್‌ಸಬ್‌ದಾರರು ಪ್ರಜಾಪಾಲನೆಯಲ್ಲಿ ನಿರತರಾಗಬೇಕಾಗಿತ್ತು.

ಮೊಗಲರ ಆಡಳಿತದಲ್ಲಿ ಭೂಕಂದಾಯವೇ ಆದಾಯದ ಮುಖ್ಯ ವರಮಾನವಾಗಿತ್ತು. ಇದಲ್ಲದೆ ಸುಂಕ, ಸರಕು ತೆರಿಗೆ, ಬಳುವಳಿ ತೆರಿಗೆ ಮೊದಲಾದವುಗಳಿಂದಲೂ ವರಮಾನವು ಬರುತ್ತಿತ್ತು. ಅಕ್ಬರನು ಟಂಕಿಸಿರುವ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳನ್ನು ನೋಡಿದರೆ ನಾಣ್ಯ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿರಿಸಿದ್ದ ವಿಷಯ ಬೆಳಕಿಗೆ ಬರುತ್ತದೆ.

## ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಗತಿ

ಮೊಗಲರು ಶ್ರೇಷ್ಠ ನಿರ್ಮಾಣ ತಜ್ಞರು. ವಾಸ್ತುಶಿಲ್ಪದಲ್ಲಿ ಅವರು ಪರ್ಷಿಯನ್ ಮತ್ತು ಭಾರತೀಯ ಸಂಪ್ರದಾಯಗಳನ್ನು ಬೆರೆಸಿದರು. ಮೊಗಲ್ ವಾಸ್ತುಶಿಲ್ಪ ಅಲಂಕರಣ ಮತ್ತು ಸೂಕ್ಷ್ಮತೆಗಳಿಗೆ ಪ್ರಸಿದ್ಧವಾಗಿದೆ.

## ಕಲೆ ಮತ್ತು ವಾಸ್ತುಶಿಲ್ಪ

ಬಿಹಾರದ ಸಸಾರಾಂನಲ್ಲಿರುವ ಷೇರ್‌ಷಹಾನ ಗೋರಿಯು ಮುಸ್ಲಿಂ ಮತ್ತು ಹಿಂದೂ ವಾಸ್ತುಗಳ ಭಾವಗಳನ್ನು ಬೆರೆಸಿಕೊಂಡಿದೆ.

ಅಕ್ಬರನ ಮತಸಹಿಷ್ಣುತೆಯ ಭಾವವನ್ನು ಆತನ ಕಾಲದ ವಾಸ್ತುಶಿಲ್ಪಗಳ ಶೈಲಿಗಳಲ್ಲಿ ಕಾಣಬಹುದು. ಆಗ್ರಾ ಕೋಟೆಯಲ್ಲಿ ಮತ್ತು ಹೊಸದಾಗಿ ಕಟ್ಟಲಾದ ಫತೇಪುರ್ ಸಿಕ್ರಿಗಳಲ್ಲಿ ಹಿಂದೂ ವಾಸ್ತುವಿನ ಮಾದರಿಯನ್ನು ಕಾಣಬಹುದಾಗಿದೆ. ಈತನು ದೆಹಲಿಯಲ್ಲಿ ಹುಮಾಯೂನನ ಗೋರಿಯನ್ನು ಕಟ್ಟಿಸಿದನು. ಬುಲಂದ್ ದರ್ವಾಜಾ ಮತ್ತು ಹಲವಾರು ಅರಮನೆಗಳನ್ನು ಕ್ರಿ.ಶ. 1569–81ರ ಅವಧಿಯಲ್ಲಿ ಕಟ್ಟಿಸಿದನು. ಬುಲಂದ್ ದರ್ವಾಜಾ ಭಾರತದಲ್ಲಿರುವ ಅತ್ಯುನ್ನತ ಪ್ರವೇಶ ದ್ವಾರವಾಗಿದ್ದು ವಿಶ್ವದ ಅತಿ ದೊಡ್ಡ ರಚನೆಗಳಲ್ಲಿ ಒಂದಾಗಿದೆ. ಆಗ್ರಾ ಮತ್ತು ಲಾಹೋರಿನ ಕೋಟೆಗಳ ನಕ್ಷೆ ರೂಪಿಸಿ ಅಕ್ಬರನ ನೇತೃತ್ವದಲ್ಲಿಯೇ ಕಟ್ಟಲಾಯಿತು.

ಷಾಜಹಾನ್ ಮೊಗಲರ ಅತಿ ಮಹತ್ವದ ನಿರ್ಮಾತಾ ಎಂದು ಹೇಳಬಹುದು. ಷಾಜಹಾನ್ ಕಟ್ಟಿಸಿದ ಪ್ರಮುಖ ಕಟ್ಟಡಗಳು ಇಂತಿವೆ. ದಿವಾನ್‌ಇ ಆಂ, ದಿವಾನ್ ಇ ಖಾಸ್ (ದೆಹಲಿಯ ಕೆಂಪುಕೋಟೆಯಲ್ಲಿ), ಜುಮ್ಮಾ ಮತ್ತು ಮೋತಿ ಮಸೀದಿಗಳು (ದೆಹಲಿಯಲ್ಲಿ). ಜಗತ್ಪ್ರಸಿದ್ಧ ತಾಜಮಹಲ್, ತಾಜಮಹಲನ್ನು ಕ್ರಿ.ಶ. 1630ರಲ್ಲಿ

ತೀರಿಕೊಂಡ ನೆಚ್ಚಿನ ರಾಣಿ ಮಮ್ತಾಜ್‌ಳ ನೆನಪಿಗಾಗಿ ಕಟ್ಟಲಾಗಿದೆ. ಇದನ್ನು ಕಟ್ಟಲು ಹದಿನೇಳು ವರ್ಷ ಹಿಡಿಯಿತು. ಈ ಅಮೃತಶಿಲಾ ಸ್ಮಾರಕದ ವೆಚ್ಚ ಮೂರುಕೋಟಿ ರೂಪಾಯಿಗಳು. ಉಸ್ತಾದ್ ಇಸಾನ ನೇತೃತ್ವದಲ್ಲಿ ಇದನ್ನು ಕಟ್ಟಲಾಯಿತು. ಷಾಜಹಾನನ ನಂತರ ಮೊಗಲ್ ವಾಸ್ತುಶಿಲ್ಪ ಪತನಶೀಲವಾಯಿತು. ಔರಂಗಜೇಬನಿಗೆ ವಾಸ್ತುಶಿಲ್ಪದಲ್ಲಿ ಆಸಕ್ತಿ ಇರಲಿಲ್ಲ.

**ವರ್ಣಚಿತ್ರ**

ಅಕ್ಬರ್ ಮತ್ತು ಜಹಾಂಗೀರ್ ಚಿತ್ರಕಲೆಗೆ ತುಂಬ ಪ್ರೋತ್ಸಾಹ ನೀಡಿದ್ದಾರೆ. ಅಕ್ಬರನ ಆಸ್ಥಾನದಲ್ಲಿದ್ದ ಹೆಚ್ಚಿನ ಸಂಖ್ಯೆಯ ಕಲಾವಿದರೆಲ್ಲ ಹಿಂದೂಗಳಾಗಿದ್ದರು. ಚಿತ್ರಕಲೆಗೆ ಒಂದು ಪ್ರತ್ಯೇಕ ಶಾಖೆಯೇ ಇತ್ತು. ಪ್ರಸಿದ್ಧ ಮುಸ್ಲಿಂ ಕಲಾವಿದರೆಂದರೆ ಅಬ್ದುಸ್ ಸಮದ್, ಮೀರ್ ಸೈಯದ್ ಆಲಿ ಮತ್ತು ಫರೂಕ್ ಬೇಗ್. ಹಿಂದೂ ಕಲಾವಿದರಲ್ಲಿ- ದಾಸವಂತ್, ಬಸವಾನ್, ಸನ್ವಾಲ್ ದಾಸ್. ತಾರಾಚಂದ್ ಮತ್ತು ಜಗನ್ನಾಥ್ – ಮುಖ್ಯರು.

ಜಹಾಂಗೀರನ ಬಳಿ ಚಿತ್ರಕಲೆಯ ಅಪಾರ ಸಂಗ್ರಹವಿತ್ತು. ಈತನು ಚಿತ್ರ ವಿಮರ್ಶಕನೂ ಆಗಿದ್ದನು. ಈತನು ಹಿಂದೂ ಮುಸ್ಲಿಂ ಚಿತ್ರಕರ್ಮಿಗಳನ್ನು ಸಮಾನವಾಗಿ ಪೋಷಿಸಿದನು. ಆ ಕಾಲದ ಪ್ರಸಿದ್ಧ ಚಿತ್ರಕಲಾವಿದ ಎಂದರೆ ಭಿಷನ್‌ದಾಸ್. ಮೊಗಲ್ ವರ್ಣಚಿತ್ರಗಳಲ್ಲಿ ವಾಸ್ತವತೆ ಪ್ರಧಾನವಾದ ಅಂಶವಾಗಿತ್ತು. ಮಾನವರು, ಪುಷ್ಪಗಳು, ಮರಗಳು, ಬೆಟ್ಟಗಳು, ಹಕ್ಕಿಗಳು, ಪ್ರಾಣಿಗಳು ಮತ್ತು ಮೋಡಗಳನ್ನು ವಾಸ್ತವವಾಗಿ ಅನುಕರಿಸಲಾಗುತ್ತಿತ್ತು. ರಾಗಮಾಲಾ ಎಂಬ ಸಂಗೀತ ಸಂಬಂಧಿ ಚಿತ್ರಗಳು ಖ್ಯಾತವಾದವು. ಅವು ತುಂಬ ವಾಸ್ತವವಾಗಿರುತ್ತಿದ್ದವು. ಔರಂಗಜೇಬನ ಕಾಲದಲ್ಲಿ ವರ್ಣಚಿತ್ರ ರಚನೆ ಇಳಿಮುಖವಾಯಿತು.

**ಸಂಗೀತ**

ಹಿಂದೂಸ್ಥಾನಿ ಸಂಗೀತವು ಅಕ್ಬರನ ಕಾಲದಲ್ಲಿ ಅದ್ಭುತ ಪ್ರಗತಿ ಸಾಧಿಸಿತು. ಆತನ ಆಸ್ಥಾನದಲ್ಲಿ ಹಿಂದೂ, ತುರಾನಿ, ಇರಾನಿ ಮತ್ತು ಕಾಶ್ಮೀರದ ಗಾಯಕರಿದ್ದರು. ಸಂಗೀತ ವಿದುಷಿಯರನ್ನು ಪ್ರೋತ್ಸಾಹಿಸಲಾಗುತ್ತಿತ್ತು. ಅಕ್ಬರನ ಕಾಲದ ಮೂವತ್ತಾರು ಪ್ರಸಿದ್ಧ ಗಾಯಕರಲ್ಲಿ ಗ್ವಾಲಿಯರಿನ ತಾನ್‌ಸೇನ್ ಪ್ರಮುಖ. ಈತ ರುದ್ರವೀಣೆಯನ್ನು ಕಂಡುಹಿಡಿದವನೆಂದೂ, ಮಿಯಾನ್-ಕಿ-ತೋಡಿ, ದರಬಾರೀ, ಕಾನಡಾ ರಾಗಗಳ ಜನಕನೆಂದೂ ಹೇಳಲಾಗಿದೆ. ಈ ಅವಧಿಯ ಇನ್ನೊಬ್ಬ ಪ್ರಸಿದ್ಧ ಗಾಯಕನೆಂದರೆ ಸೂರ್‌ದಾಸ್. ಜಹಾಂಗೀರ್ ಮತ್ತು ಷಾಜಹಾನರು ಸಂಗೀತ ಪ್ರೇಮಿಗಳಾಗಿದ್ದರು. ಜಗನ್ನಾಥ್ ಮತ್ತು ಬಿಕನೇರಿನ ಜನಾರ್ದನ ಭಟ್ ಪ್ರಸಿದ್ಧ ಗಾಯಕರಾಗಿದ್ದರು. ಔರಂಗಜೇಬನ ಅವಧಿಯಲ್ಲಿ ಸಂಗೀತದ ಸ್ಥಿತಿ ಇಳಿಮುಖವಾಯಿತು.

**ಸಾಹಿತ್ಯ**

ಮೊಗಲರ ಅವಧಿಯಲ್ಲಿ ಪರ್ಷಿಯನ್ ಮತ್ತು ಹಿಂದೀ ಗ್ರಂಥಗಳು

ಹೊರಬಂದವು. ಕೆಲವು ಮೊಗಲ್ ಚಕ್ರವರ್ತಿಗಳೇ ಲೇಖಕರಾಗಿದ್ದು ಕೃತಿರಚನೆ ಮಾಡಿದ್ದಾರೆ. ಬಾಬರನಿಗೆ ಅರಾಬಿಕ್, ಟರ್ಕಿ ಮತ್ತು ಪರ್ಷಿಯನ್ ಭಾಷೆಗಳ ಜ್ಞಾನ ಚೆನ್ನಾಗಿತ್ತು. ಬಾಬರ್ ಟರ್ಕಿ ಭಾಷೆಯಲ್ಲಿ ತನ್ನ ನೆನಪುಗಳನ್ನು ಬರೆದಿದ್ದಾನೆ. ಅಬ್ದುಲ್ ಫೈಜಿ ಅಕ್ಬರನ ಆಪ್ತನಾಗಿದ್ದನು. ಈತ ನಿಸ್ಸಂಶಯವಾಗಿ, ಪರ್ಷಿಯನ್ ಭಾಷೆಯಲ್ಲಿ ಬರೆದವರಲ್ಲಿ ಅಗ್ರಗಣ್ಯನಾಗಿದ್ದಾನೆ. ಮೊಗಲರ ಆಳ್ವಿಕೆಯ ಅವಧಿಯಲ್ಲಿ ಅನೇಕ ಇತಿಹಾಸ ಕಥನಗಳನ್ನು ಬರೆಯಲಾಗಿದೆ. ಅಬುಲ್ ಫಜಲನ 'ಅಕ್ಬರ್‌ನಾಮಾ', (ಐನಿ ಅಕ್ಬರಿ ಅದರ ಭಾಗ) ಅಬ್ದುಲ್ ಬಾಕಿಯ 'ರಹೀಮಿ' ಗ್ರಂಥಗಳು ಅಕ್ಬರನ ಕಾಲದಲ್ಲಿ ರಚನೆಗೊಂಡವು. ಜಹಾಂಗೀರನು ಬರೆದ 'ತುಜ್ ಕಿ ಜಹಾಂಗಿರಿ' ತುಂಬ ಸಾಹಿತ್ಯಿಕ ಮೌಲ್ಯವುಳ್ಳ ಐತಿಹಾಸಿಕ ಮಹತ್ವವುಳ್ಳ ಒಂದು ಕೃತಿ. ಕಾಫಿಖಾನನ "ಮುನ್ತಕಾಬ್-ಉಲ್-ಲುಬಾಬ್" ಔರಂಗಜೇಬನ ಕಾಲದಲ್ಲಿ ಬರೆಯಲಾದ ಒಂದು ಕೃತಿ. ರಾಮಾಯಣ, ಮಹಾಭಾರತ, ಭಗವದ್ಗೀತೆ, ಉಪನಿಷತ್ತು ಮೊದಲಾದ ಗ್ರಂಥಗಳು ಪರ್ಷಿಯನ್ ಭಾಷೆಗೆ ಅನುವಾದಗೊಂಡವು. ದಾರಾ ಶುಕೋ (ಔರಂಗಜೇಬನ ಸೋದರ) ಅನೇಕ ಸಂಸ್ಕೃತ ಗ್ರಂಥಗಳನ್ನು ಪರ್ಷಿಯನ್ ಭಾಷೆಗೆ ಅನುವಾದಿಸಿದನು.

ಮಲ್ಲಿಕ್ ಮೊಹಮದ್ ಜಯಾಸಿ ಎಂಬಾತ ಮೇವಾಡದ ರಾಣಿ ಪದ್ಮಿನಿಯ ಕಥಾನಕವುಳ್ಳ 'ಪದ್ಮಾವತ್' ಎಂಬ ಹಿಂದಿ ಮಹಾಕಾವ್ಯವನ್ನು ರಚಿಸಿದ್ದಾನೆ. ಈ ಅವಧಿಯ ಮಹತ್ವದ ಹಿಂದೀ ಕವಿ ತುಲಸಿದಾಸನ ರಾಮಚರಿತ ಮಾನಸ, ಶ್ರೀರಾಮನ ವ್ಯಕ್ತಿತ್ವವನ್ನು ಕಥನಿಸಿದೆ. ಈ ಅವಧಿಯಲ್ಲಿ ಸಂಸ್ಕೃತದಲ್ಲೂ ಹಲವಾರು ಕೃತಿಗಳು ಹೊರಬಂದಿವೆ. ಸೂರದಾಸರು ಹಿಂದಿ 'ಸೂರಸಾಗರ್' ರಚಿಸಿದರು.

**ಸಂಸ್ಕೃತಿ**

ಹಿಂದೂ ಮುಸ್ಲಿಮರು ತಮ್ಮ ತಮ್ಮ ಸಂಪ್ರದಾಯಗಳನ್ನೇ ಅನುಸರಿಸಿಕೊಂಡು ಬಂದರು. ಹಿಂದೂಗಳಲ್ಲಿ 'ಸತೀ ಪದ್ಧತಿ' ಮತ್ತು 'ಬಾಲ್ಯವಿವಾಹ' ರೂಢಿಯಲ್ಲಿತ್ತು. ತೀರ್ಥಯಾತ್ರೆ ಜನಪ್ರಿಯವಾಗಿತ್ತು. ಹೋಳಿ, ದೀಪಾವಳಿ, ದಸರಾ, ಶಿವರಾತ್ರಿ ಮತ್ತು ಸಂಕ್ರಾಂತಿಗಳು ಹಿಂದೂಗಳ ಮುಖ್ಯ ಹಬ್ಬಗಳಾಗಿದ್ದುವು.

ಮೊಗಲರ ಕಾಲದಲ್ಲಿ ಮೆಕ್ಕಾ ಯಾತ್ರೆಯು ಒಂದು ಮಹತ್ವದ ವಾರ್ಷಿಕ ಘಟನೆಯಾಗಿತ್ತು. ಮುಖ್ಯ ಮುಸ್ಲಿಂ ಹಬ್ಬಗಳೆಂದರೆ ರಂಜಾನ್, ಬಕ್ರೀದ್ ಮತ್ತು ಮೊಹರಂ. ಹಿಂದೂ ಮುಸ್ಲಿಂ ಇಬ್ಬರಿಗೂ ಆಭರಣಗಳ ಮೇಲೆ ಪ್ರೀತಿ ಹೆಚ್ಚು. ಆ ಅವಧಿಯ ಮನರಂಜನೆಯ ಕ್ರೀಡೆಗಳೆಂದರೆ ಬೇಟೆ, ಪ್ರಾಣಿ ಕಾಳಗ, ಕುಸ್ತಿ, ಪೋಲೋ ಮತ್ತು ಚದುರಂಗ. ವೇಷ ಮತ್ತು ಆಹಾರ ಪದ್ಧತಿಗಳಲ್ಲಿ ಸಾಕಷ್ಟು ವೈವಿಧ್ಯವಿತ್ತು. ಸಾಮಾನ್ಯವಾಗಿ ಸ್ತ್ರೀಯರಿಗೆ ಸಮಾಜದಲ್ಲಿ ಗೌರವದ ಸ್ಥಾನವಿತ್ತು.

ಆರ್ಥಿಕವಾಗಿ ಔರಂಗಜೇಬನ ಕಾಲದವರೆಗೆ ಜನರು ಸುಖಸಮೃದ್ಧಿಗಳನ್ನು ಹೊಂದಿದ್ದರು. ವಾರಾಣಸಿ, ಆಗ್ರಾ, ಮಾಳವಗಳು ಹತ್ತಿ ಮತ್ತು ರೇಷ್ಮೆ ವಸ್ತ್ರಗಳ ಉತ್ಪಾದನಾ ಕೇಂದ್ರಗಳಾಗಿದ್ದವು. ವಸ್ತ್ರ, ಮೆಣಸು, ನೀಲಿ, ಅಫೀಮುಗಳು ಮುಖ್ಯ ರಫ್ತು ವಸ್ತುಗಳಾಗಿದ್ದವು. ಚಿನ್ನ, ಕುದುರೆ, ಬೆಳ್ಳಿ ಮತ್ತು ಮದ್ಯಗಳನ್ನು ಆಮದು

ಮಾಡಿಕೊಳ್ಳಲಾಗುತ್ತಿತ್ತು. ಬರಗಾಲದ ಸಂದರ್ಭವನ್ನು ಹೊರತುಪಡಿಸಿ ಉಳಿದಂತೆ ಮೊಗಲರ ಸಾಂಸ್ಕೃತಿಕ ಪ್ರಗತಿಗೆ ಬೆನ್ನೆಲುಬಾದ ಕೃಷಿ ಉದ್ಯಮವು ಏಳಿಗೆಯನ್ನು ಹೊಂದಿತ್ತು.

## ಮೊಗಲ್ ಸಾಮ್ರಾಜ್ಯದ ವಿಘಟನೆಗೆ ಕಾರಣಗಳು

ಔರಂಗಜೇಬನ ಕಾಲದಲ್ಲಿ ಮೊಗಲ್ ಸಾಮ್ರಾಜ್ಯವು ಅವನತಿಯ ದಾರಿಯನ್ನು ಹಿಡಿಯಿತು. ನಿರಂತರ ಯುದ್ಧಗಳು ಮತ್ತು ಹೆಚ್ಚಿನ ತೆರಿಗೆಯ ಹೊರೆಯಿಂದ ದೇಶವು ಹಾಳಾಗಿತ್ತು.

ಬಾಬರ್ ಮತ್ತು ಅವನ ನಂತರದ ದೊರೆಗಳು ಬಲಿಷ್ಠರೂ, ಧೈರ್ಯಶಾಲಿಗಳೂ ಆದ ದೊರೆಗಳಾಗಿದ್ದರು. ಆದರೆ ಮುಂದಿನ ದೊರೆಗಳು ಹಾಗೂ ಅವರ ಅಧಿಕಾರಿಗಳು ದುರ್ಬಲರಾಗಿದ್ದರು. ಅವರ ನೈತಿಕ ಪತನವು ಮೊಗಲ್ ಸಾಮ್ರಾಜ್ಯದ ವಿಘಟನೆಗೆ ಮುಖ್ಯ ಕಾರಣಗಳಲ್ಲಿ ಒಂದು. ಮೊಗಲ್ ಶ್ರೀಮಂತ ವರ್ಗದವರ ಸ್ವಾರ್ಥ ಮತ್ತು ಭ್ರಷ್ಟಾಚಾರ ಪ್ರವೃತ್ತಿ ಎರಡನೆಯ ಕಾರಣ. ಸೈನ್ಯವು ದುರ್ಬಲವಾಗಿ ಹೋಗಿತ್ತು. ಮೊಗಲರು ನೌಕಾ ಸೈನ್ಯವನ್ನು ಕಡೆಗಣಿಸಿದ್ದರು. ಆದ್ದರಿಂದ ಯುರೋಪಿನ ನೌಕಾ ಶಕ್ತಿಗಳು ಭಾರತಕ್ಕೆ ನುಗ್ಗುವುದನ್ನು ತಡೆಗಟ್ಟಲು ಸಾಧ್ಯವಾಗಲಿಲ್ಲ. ಮೊಗಲರ ಪತನಕ್ಕೆ ಮತ್ತೊಂದು ಪ್ರಬಲ ಕಾರಣವೆಂದರೆ ಅವರ ಆರ್ಥಿಕ ದುಃಸ್ಥಿತಿ.

ಒಬ್ಬನಿಂದ ಅಥವಾ ಒಂದು ಕೇಂದ್ರದಿಂದ ಆಳಲಾಗದಷ್ಟು ವಿಸ್ತಾರವಾಗಿ ಮೊಗಲ್ ಸಾಮ್ರಾಜ್ಯ ಹರಡಿಕೊಂಡಿತ್ತು. ಉತ್ತರಾಧಿಕಾರಕ್ಕೆ ಸಂಬಂಧಿಸಿದ ಸ್ಪಷ್ಟ ಕಾನೂನುಗಳು ಇರಲಿಲ್ಲ. ಪಟ್ಟಕ್ಕಾಗಿ ನಡೆದ ಭೀಕರ ಕದನಗಳಿಂದಾಗಿ ಸಾಮ್ರಾಜ್ಯ ದುರ್ಬಲಗೊಂಡಿತು. ನಿರಂತರವಾಗಿ ನ್ಯಾಯಾಲಯದ ಖಟ್ಲೆಗಳೂ ರಾಷ್ಟ್ರದ ದೌರ್ಬಲ್ಯವನ್ನು ಹೆಚ್ಚಿಸಿದುವು.

ಔರಂಗಜೇಬನ ದುರಾಡಳಿತವೇ ಸಾಮ್ರಾಜ್ಯದ ಅವನತಿಗೆ ಪ್ರಮುಖ ಕಾರಣವೆಂದು ಹೇಳಬಹುದು. ಜೆಸಿಯಾ ಕಂದಾಯವನ್ನು ಮತ್ತೆ ಆರಂಭಿಸಿದ್ದು ಮತ್ತು ಮೂರ್ತಿ ಪೂಜೆಯನ್ನು ನಿಲ್ಲಿಸಲು ಪ್ರಯತ್ನಿಸಿದ್ದು, ಅಕ್ಬರನು ಹಿಂದೂಗಳನ್ನು ಮುಸ್ಲಿಮರನ್ನೂ ಒಗ್ಗೂಡಿಸಲು ಮಾಡಿದ ಪ್ರಯತ್ನವನ್ನು ತೊಡೆದು ಹಾಕಿದಂತಾಯಿತು. ಅಲ್ಲದೆ ಮೊಗಲರಿಗೆ ಪ್ರಬಲ ಸಹಾಯಕರಾಗಿದ್ದ ರಜಪೂತರನ್ನು ಔರಂಗಜೇಬನು ಅವಮಾನಿಸಿದನು. ಆತನು ರಾಜಧಾನಿಯಿಂದ ಬಹುಕಾಲ ದೂರವಿದ್ದುದರಿಂದ ಅಧಿಕಾರಿಗಳು ದುರಾಡಳಿತ ನಡೆಸಿದರು. ಹಿಂದೂಗಳಿರಲಿ, ಮುಸ್ಲಿಮರಲ್ಲೇ ಒಂದು ಗುಂಪಿನವರು ಔರಂಗಜೇಬನನ್ನು ಬೆಂಬಲಿಸದೆ ದೂರ ನಿಂತರು.

ಔರಂಗಜೇಬನ ದಖನ್ ಕಾರ್ಯಾಚರಣೆಯಿಂದಾಗಿ ರಾಜ್ಯದ ಬೊಕ್ಕಸ ಬರಿದಾಯಿತು. ಶಿವಾಜಿಯ ನೇತೃತ್ವದಲ್ಲಿ ಮರಾಠರ ಪ್ರಾಬಲ್ಯವು ಹೆಚ್ಚಿ ಭಾರತದಲ್ಲಿ ಮೊಗಲರ ಶಕ್ತಿಯನ್ನು ಕುಂದಿಸಿತು. ಜಾಟರು, ಸಿಕ್ಕರು ಮತ್ತು ಸತ್ನಾಮಿಗಳೂ ಬಂಡೆದ್ದರು.

ಔರಂಗಜೇಬನ ಆಳ್ವಿಕೆಯ ಕೊನೆಯ ಘಟ್ಟದ ವೇಳೆಗೆ ಆಡಳಿತ, ಸಂಸ್ಕೃತಿ, ಆರ್ಥಿಕ

ಜೀವನ, ಸೇನಾಶಕ್ತಿ ಮತ್ತು ಸಾಮಾಜಿಕ ವ್ಯವಸ್ಥೆ ಇವೇ ಮೊದಲಾದ ರಂಗಗಳಲ್ಲಿ ಮೊಗಲ್ ಸಾಮ್ರಾಜ್ಯವು ಹೀನಾಯ ಸ್ಥಿತಿಯಲ್ಲಿತ್ತು. ಎಲ್ಲ ಕೊರತೆಗಳೂ ಒಂದೊಂದಾಗಿ ಸೇರಿಕೊಂಡು ವಿನಾಶ ಮತ್ತು ವಿಘಟನೆಯ ಕಡೆಗೆ ಹೊರಳುತ್ತಿದ್ದುವು. ಈ ಹಿನ್ನೆಲೆಯಲ್ಲಿ ನಾದಿರ್ ಷಹಾ ಮತ್ತು ಅಹಮದ್ ಷಹಾ ಅಬ್ದಾಲಿ ಇವರು ನಡೆಸಿದ ಆಕ್ರಮಣವು ಮೊಗಲರ ಸೇನಾ ಶಕ್ತಿಗೆ ಭಾರಿ ಪೆಟ್ಟು ಕೊಟ್ಟಿತು.

## ಅಭ್ಯಾಸ

**I. ಕೆಳಕಂಡ ಪ್ರಶ್ನೆಗಳನ್ನು ಉತ್ತರಿಸಿ.**

1. ಬಾಬರನ ಧಾಳಿಯ ಸಂದರ್ಭದಲ್ಲಿ ಭಾರತದ ರಾಜಕೀಯ ಸ್ಥಿತಿಗತಿಗಳು ಹೇಗಿದ್ದುವು ?
2. ಮೊಗಲಾಯಿ ಸಾಮ್ರಾಜ್ಯ ಸ್ಥಾಪನೆಗಾಗಿ ಬಾಬರನು ಮಾಡಿದ ಮೂರು ಯುದ್ಧಗಳು ಯಾವುವು ?
3. ಷೇರ್‌ಷಹಾನ ಆಡಳಿತದ ಪ್ರಮುಖ ಅಂಶಗಳನ್ನು ವಿವರಿಸಿ.
4. ಅಕ್ಬರನ ದಿಗ್ವಿಜಯಗಳನ್ನು ವರ್ಣಿಸಿ.
5. ಅಕ್ಬರನ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ಸಂಕ್ಷೇಪವಾಗಿ ವಿವರಿಸಿ.
6. ರಜಪೂತರ ಸಹಕಾರವನ್ನು ಪಡೆಯಲು ಅಕ್ಬರನು ಕೈಗೊಂಡ ಕ್ರಮಗಳು ಯಾವುವು ?
7. ಕಲೆ ಮತ್ತು ಸಾಹಿತ್ಯ ಸಂಗೀತ ಮತ್ತು ಚಿತ್ರಕಲೆ ವಿಭಾಗಗಳಲ್ಲಿ ಮೊಗಲರ ಸಾಧನೆಗಳು ಯಾವುವು ?
8. ಮೊಗಲ್ ಸಾಮ್ರಾಜ್ಯದ ಪತನಕ್ಕೆ ಕಾರಣಗಳೇನು ?
9. ಈ ಕೆಳಕಂಡ ನೆಲೆಗಳಲ್ಲಿ ಮೊಗಲರ ಆಡಳಿತ ವ್ಯವಸ್ಥೆಯನ್ನು ವಿವರಿಸಿ.
   ಅ) ಕೇಂದ್ರ ಸರಕಾರ ಆ) ಪ್ರಾಂತ ಸರಕಾರ ಇ) ಮನ್‌ಸಬಬ್‌ದಾರಿ ಪದ್ಧತಿ ಈ) ರಾಜಾ ತೋದರಮಲ್‌ನ ಕಂದಾಯ ವ್ಯವಸ್ಥೆ ಉ) ರಾಜ್ಯದ ಆದಾಯ ಮೂಲಗಳು

**II. ಭರ್ತಿ ಮಾಡಿ**

1. ಷೇರ್‌ಷಹಾ, ಹುಮಾಯೂನನನ್ನು ಕ್ರಿ.ಶ. ......... ರಲ್ಲಿ ........ ಕದನದಲ್ಲಿ ಸೋಲಿಸಿ ತನ್ನ ಸೂರ್ ಮನೆತನವನ್ನು ಸ್ಥಾಪಿಸಿದರು.
2. ಷೇರ್‌ಷಹಾ ಕಟ್ಟಿಸಿದ ರಚನೆಗಳಲ್ಲಿ ಬಹಳ ಮುಖ್ಯವಾದುದೆಂದರೆ ಅವನು......... ನಲ್ಲಿ ಕಟ್ಟಿಸಿದ ಗೋರಿ.
3. ಅಕ್ಬರನು ಪಟ್ಟಕ್ಕೆ ಬಂದಾಗ ರಾಜಪ್ರತಿನಿಧಿಯಾಗಿದ್ದವನು.............
4. ಅಕ್ಬರನ ಆಳ್ವಿಕೆಗೆ ಸಂಬಂಧಪಟ್ಟ ಮಾಹಿತಿಗಳು ಶೇಕ್‌ಅಬ್ದುಲ್ ಫಸಲನ......... ಸಿಗುತ್ತವೆ.

5. ಅಕ್ಬರನು........... ಎಂಬ ಹೊಸ ಮತಧರ್ಮವನ್ನು ಸ್ಥಾಪಿಸಲು ಪ್ರಯತ್ನಿಸಿದನು.
6. ನೂರ್‌ಜಹಾನಳನ್ನು......... ಎಂದು ಕರೆಯಲಾಗುತ್ತಿತ್ತು.
7. ತಾಜಮಹಲನ್ನು....... ದೊರೆಯು.......... ಸ್ಮರಣಾರ್ಥವಾಗಿ ಕಟ್ಟಿಸಿದನು.

**III. ಹೊಂದಿಸಿ ಬರೆಯಿರಿ.**

| | |
|---|---|
| ಮೊದಲ ಪಾಣಿಪತ್ ಕದನ | 1527 |
| ಎರಡನೇ ಪಾಣಿಪತ್ ಕದನ | 1526 |
| ಖನ್ವಾ ಕದನ | 1529 |
| ಗೋಗ್ರಾ ಕದನ | 1556 |
| ಕನೂಜ್ ಕದನ | 1538 |

**IV. ಚಟುವಟಿಕೆ**

1. ಭಾರತದ ನಕ್ಷೆಯೊಂದನ್ನು ಬರೆದು ಅದರಲ್ಲಿ ಅಕ್ಬರನ ಕಾಲದ ಮೊಗಲ್ ಸಾಮ್ರಾಜ್ಯದ ವ್ಯಾಪ್ತಿಯನ್ನು ಗುರುತಿಸಿ.
2. ದೆಹಲಿ, ಆಗ್ರಾ ಮತ್ತು ಸುತ್ತಮುತ್ತಣದ ಕ್ಷೇತ್ರಗಳಿಗೆ ಒಂದು ಪ್ರವಾಸವನ್ನು ವ್ಯವಸ್ಥೆ ಮಾಡಿ ಅಲ್ಲಿಯ ಐತಿಹಾಸಿಕ ದಾಖಲೆಗಳನ್ನು ಸಂದರ್ಶಿಸಿ.
3. ಮೊಗಲ್ ಚಕ್ರವರ್ತಿಗಳ ಭಾವಚಿತ್ರಗಳನ್ನು ಸಂಗ್ರಹಿಸಿ.

## ಮರಾಠರ ಉದಯ

ಹದಿನೇಳನೆಯ ಶತಮಾನದ ಪ್ರಥಮಾರ್ಧದಲ್ಲಿ ಮೊಗಲ್ ಸಾಮ್ರಾಜ್ಯವು ತನ್ನ ವೈಭವದ ಶಿಖರದಲ್ಲಿದ್ದಾಗ ಶಿವಾಜಿಯ ನಾಯಕತ್ವದಲ್ಲಿ ಮರಾಠರು ಅದಕ್ಕೆ ದೊಡ್ಡ ಪೆಟ್ಟನ್ನು ಕೊಟ್ಟರು.

ಮರಾಠಾ ದೇಶವು ಬೆಟ್ಟಗುಡ್ಡಗಳಿಂದ ಆವೃತವಾಗಿದ್ದ ಪ್ರದೇಶ. ಈ ಪ್ರಾಕೃತಿಕ ಪರಿಸರವು ಮರಾಠರಿಗೆ ಸ್ವಾವಲಂಬನ, ಧೈರ್ಯ, ಛಲ, ಸರಳತೆ, ಬಿಚ್ಚು ನುಡಿ ಮತ್ತು ಸಾಮಾಜಿಕ ಸಮಾನತೆಯ ಗುಣಗಳನ್ನು ಕೊಟ್ಟಿದೆ. ಭಕ್ತಿ ಸಂಪ್ರದಾಯವು ಹರಡಿ ಮಾರಾಠರನ್ನೆಲ್ಲ ಒಗ್ಗೂಡಿಸಿತ್ತು. ಮರಾಠಿ ಭಾಷೆ ಮತ್ತು ಸಾಹಿತ್ಯಗಳೂ ಮರಾಠರಲ್ಲಿ ಏಕತೆಯ ಭಾವವನ್ನು ಬಿಂಬಿಸಿದವು. ಷಾಹಿ ಸುಲ್ತಾನರ ಆಡಳಿತವು ಜನರ ಮನಸ್ಸಿನಲ್ಲಿ ತೀವ್ರ ಅಸಮಾಧಾನ ಮೂಡಿಸಿತ್ತು. ಮೊಗಲರು ದಕ್ಷಿಣದಲ್ಲಿ ಇನ್ನಷ್ಟು ಹರಡಿಕೊಳ್ಳಲು ಮಾಡಿದ ಪ್ರಯತ್ನವು ಒಂದು ಸ್ವತಂತ್ರ ಮರಾಠ ರಾಜ್ಯದ ಉದಯಕ್ಕೆ ರಾಜಕೀಯ ಹಿನ್ನೆಲೆಯನ್ನು ದೊರಕಿಸಿತು.

### ಶಿವಾಜಿಯ ಸಾಧನೆ

ಮರಾಠ ರಾಜ್ಯದ ಸ್ಥಾಪಕನಾದ ಶಿವಾಜಿಯು ಷಾಹಜಿ ಭೋನ್ಸ್ಲೆಯ ಮಗ. ಷಾಹಜಿಯು ಬಿಜಾಪುರ ಸುಲ್ತಾನನಲ್ಲಿ ದಂಡನಾಯಕನಾಗಿದ್ದನು. ಷಾಹಜಿಯು

ಬೆಂಗಳೂರನ್ನು ಸುಲ್ತಾನನಿಂದ ಜಹಗೀರಿಯಾಗಿ ಪಡೆದು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದನು. ಶಿವಾಜಿಯು ಕ್ರಿ.ಶ. 1627 ರಲ್ಲಿ ಶಿವನೇರಿಯಲ್ಲಿ ಜನಿಸಿದನು. ತಾಯಿ ಜೀಜಾಬಾಯಿಯು ಶಿವಾಜಿಯನ್ನು ದಾದಾಜಿಕೊಂಡದೇವನ ಬಳಿ ಶಿಕ್ಷಣಕ್ಕೆ ಬಿಟ್ಟಿದ್ದಳು. ತಾಯಿ ಹೇಳುತ್ತಿದ್ದ ಮಹಾಪುರುಷರ ಕಥೆಗಳಿಂದ ಶಿವಾಜಿಯು ಪ್ರಭಾವಿತನಾಗಿದ್ದನು. ದಾದಾಜಿಕೊಂಡದೇವನು ಶಿವಾಜಿಗೆ ಯುದ್ಧ ವಿದ್ಯೆಯಲ್ಲಿ ತರಬೇತಿ ನೀಡಿದನು. ಶಿವಾಜಿಯು ಮಹತ್ವಾಕಾಂಕ್ಷಿಯೂ, ಸಾಹಸಪ್ರಿಯನೂ ಆಗಿದ್ದನು. ಮಹಾರಾಷ್ಟ್ರದ ಆಗಿನ ಪರಿಸ್ಥಿತಿ ಶಿವಾಜಿಗೆ ಒಂದು ಸ್ವತಂತ್ರ ರಾಜ್ಯ ಸ್ಥಾಪನೆಗೆ ಇಂಬು ಮಾಡಿಕೊಟ್ಟಿತು. ಸಂತ ರಾಮದಾಸನು ಶಿವಾಜಿಗೆ ಸತ್ಕಾರ್ಯಗಳನ್ನು ಮಾಡಲು ಹಾಗೂ ನ್ಯಾಯಕ್ಕಾಗಿ ಹೋರಾಡಲು ಹುರಿದುಂಬಿಸಿದನು. ಮಾವಳಿ ತರುಣರ ಮತ್ತು ಇತರ ಮರಾಠಾ ನಾಯಕರ-ತುಕಡಿಯೊಂದನ್ನು ಶಿವಾಜಿ ಕಟ್ಟಿಕೊಂಡನು. ಶಿವಾಜಿ ತನ್ನ ನಾಯಕ ಯೋಗ್ಯ ಗುಣಗಳಿಂದ ಮತ್ತು ವ್ಯವಸ್ಥಾ ಕೌಶಲದಿಂದ ಮರಾಠರಲ್ಲಿ ಜನಪ್ರಿಯನಾದನು. ಬಿಜಾಪುರ ಸಂಸ್ಥಾನವನ್ನು ಲೂಟಿ ಮಾಡಲಾರಂಭಿಸಿದನು. ತೋರಣದುರ್ಗವನ್ನು ವಶಪಡಿಸಿಕೊಂಡಾಗ ಅಲ್ಲಿ ಸಿಕ್ಕ ಅಪಾರ ನಿಧಿ ಅವನ ಪಾಲಾಯಿತು. ಹದಿನೇಳನೆಯ ಶತಮಾನದಲ್ಲಿ ಮೊಗಲ ಚಕ್ರವರ್ತಿಗಳಿಗೂ ದಖನ್ನಿನ ಸುಲ್ತಾನರುಗಳಿಗೂ ಆಗಾಗ ಯುದ್ಧವಾಗುತ್ತಲೇ ಇತ್ತು. ಶಿವಾಜಿಯು ಗೆರಿಲ್ಲಾ ಯುದ್ಧ ತಂತ್ರದಲ್ಲಿ ನಿಸ್ಸೀಮನಾಗಿದ್ದನು. ಆತನು ಬಿಜಾಪುರದ ಸುಲ್ತಾನನಿಗೆ ಸೇರಿದ ಅನೇಕ ಕೋಟೆಗಳನ್ನು ಗೆದ್ದುಕೊಂಡನು. ಕೊಂಕಣವನ್ನು ವಶಪಡಿಸಿಕೊಂಡನು. ಬಿಜಾಪುರದ ಸುಲ್ತಾನನು ಶಿವಾಜಿಯ ಚಟುವಟಿಕೆಗಳನ್ನು ತಡೆಯಲು ಒಂದು ದೊಡ್ಡ ಸೈನ್ಯದೊಂದಿಗೆ ಅಫಜಲ್ ಖಾನನನ್ನು ಕಳುಹಸಿದನು. ಅಫಜಲ್ ಖಾನನು ತನ್ನನ್ನು ಭೇಟಿ ಮಾಡುವಂತೆ ಶಿವಾಜಿಗೆ ಹೇಳಿಕಳಿಸಿದನು. ಭೇಟಿಯ ಸಂದರ್ಭದಲ್ಲಿ ಖಾನನು ತನ್ನ ಕಠಾರಿಯಿಂದ ಶಿವಾಜಿಯ ಮೇಲೆ ಆಕ್ರಮಣ ಮಾಡಿದನು. ಆದರೆ ಕುಶಲಿ ಶಿವಾಜಿಯು ತಪ್ಪಿಸಿಕೊಂಡು ತನ್ನಲ್ಲಿದ್ದ 'ವ್ಯಾಘ್ರನಖ' ಎಂಬ ಆಯುಧದಿಂದ ಅಫ್‌ಜಲ್ ಖಾನನನ್ನು ಇರಿದು ಕೊಂದನು. ಬಿಜಾಪುರದ ಸುಲ್ತಾನನು ಶಿವಾಜಿಯನ್ನು ಬಗ್ಗು ಬಡಿಯಲು ಅವನ ತಂದೆ ಷಾಹಜಿಯನ್ನು ಸೆರೆಮನೆಯಲ್ಲಿಡಿಸಿದನು. ಆದರೆ ಇದರಿಂದಲೂ ಪ್ರಯೋಜನವಾಗಲಿಲ್ಲ. ಕೊನೆಗೆ ಸುಲ್ತಾನನು ಶಿವಾಜಿಯೊಂದಿಗೆ ಒಪ್ಪಂದವನ್ನು ಮಾಡಿಕೊಂಡನು. ಔರಂಗಜೇಬನು ಶಿವಾಜಿಯನ್ನು ಸೆರೆಹಿಡಿದು ತರಲು ಷಯಿಸ್ತಾಖಾನ್ ಎಂಬ ಸೇನಾಧಿಪತಿಯನ್ನು ಕಳಿಸಿದನು. ಆದರೆ ಷಯಿಸ್ತಾಖಾನನು ತನ್ನ ಕೈಬೆರಳುಗಳನ್ನು ಕಳೆದುಕೊಂಡು ಪಲಾಯನ ಮಾಡಬೇಕಾಯಿತು. ಮೊಗಲ್ ಸಾಮ್ರಾಜ್ಯಕ್ಕೆ ಬಿದ್ದ ಮುಂದಿನ ಹೊಡೆತ ಎಂದರೆ ಕ್ರಿ.ಶ. 1664ರಲ್ಲಿ ಶಿವಾಜಿಯು ಸೂರತ್ ಕೋಟೆಯನ್ನು ಕೊಳ್ಳೆ ಹೊಡೆದದ್ದು. ಕ್ರಿ.ಶ. 1665ರಲ್ಲಿ ಶಿವಾಜಿಯು ಮೊಗಲರೊಡನೆ ಒಪ್ಪಂದ ಮಾಡಿಕೊಂಡನು. ಆದರ ಮರು ವರುಷ ಔರಂಗಜೇಬನು ಶಿವಾಜಿಯನ್ನು ದೆಹಲಿಗೆ ಆಹ್ವಾನಿಸಿದನು. ಅಲ್ಲಿ ಶಿವಾಜಿಯನ್ನೂ ಅವನ ಮಗ ಸಂಬಾಜಿಯನ್ನೂ ಸೆರೆಯಲ್ಲಿಡಿಸಿದನು. ಆದರೆ ಶಿವಾಜಿ ಪರಾರಿಯಾದನು. ಮಹಾರಾಷ್ಟ್ರಕ್ಕೆ ಹಿಂದಿರುಗಿದ ನಂತರ ಶಿವಾಜಿಯು ಮೊಗಲ್ ಪ್ರದೇಶಗಳನ್ನು ಮತ್ತೆ ವಶಪಡಿಸಿಕೊಂಡನು. ಕ್ರಿ.ಶ.

1675ರಲ್ಲಿ ರಾಯಗಡದಲ್ಲಿ ಶಿವಾಜಿಯ ಕಿರೀಟ ಧಾರಣೋತ್ಸವ ನಡೆಯಿತು. ಮುಂದೆ ಶಿವಾಜಿಯು ದಕ್ಷಿಣ ಭಾರತಕ್ಕೆ ನುಗ್ಗಿ ಜಿಂಜಿ, ವೆಲ್ಲೂರು ಮೊದಲಾದ ಅನೇಕ ಮಹತ್ವದ ಪ್ರದೇಶಗಳನ್ನು ಗೆದ್ದನು.

**ಆಡಳಿತ**

ಶಿವಾಜಿಯು ಹಿಂದೂ ಪ್ರಭುತ್ವದ ಘೋಷಣೆ ಮಾಡಿ ಮರಾಠರಿಗೆ ಹೊಸ ಚೈತನ್ಯವನ್ನು ತಂದು ಕೊಟ್ಟನು. ರಾಜನೆಂದು ಘೋಷಿಸಿಕೊಂಡ ನಂತರ ಶಿವಾಜಿಯು ಉತ್ತಮ ಆಡಳಿತ ವ್ಯವಸ್ಥೆಯನ್ನು ರೂಪಿಸಿದನು. ಅವನ ರಾಜ್ಯದಲ್ಲಿ ಅಷ್ಟ ಪ್ರಧಾನರಿದ್ದರು. ಪೇಷ್ವೆಯು ಸಚಿವ ಮಂಡಲದ ಪ್ರಮುಖನಾಗಿದ್ದನು. ಅರ್ಹತೆಯ ಆಧಾರದ ಮೇಲೆ ಶಿವಾಜಿಯು ನೇಮಕಗಳನ್ನು ಮಾಡುತ್ತಿದ್ದನು. ಕಂದಾಯ ವ್ಯವಸ್ಥೆಯನ್ನು ಸುಧಾರಿಸಿದನು. ಭೂಮಿಯ ವಾಸ್ತವ ಅಳತೆಯ ಆಧಾರದ ಮೇಲೆ ಕಂದಾಯವನ್ನು ನಿರ್ಣಯಿಸಲಾಗುತ್ತಿತ್ತು. ರೈತರು ಸರಕಾರಕ್ಕೆ ಬೆಳೆಯ 2/5 ಭಾಗವನ್ನು ಒಪ್ಪಿಸಬೇಕಾಗಿತ್ತು.

ಶಿವಾಜಿಯು ಶಿಸ್ತಿನಿಂದ ಕೂಡಿದ ಸೈನ್ಯ ಹಾಗೂ ಕಾರ್ಯಶೀಲವಾದ ನೌಕಾ ಪಡೆಯನ್ನಿಟ್ಟಿದ್ದನು. ಶಿವಾಜಿಯ ಸೇನೆಯಲ್ಲಿ ಪದಾತಿದಳವೂ, ಅಶ್ವಸೇನೆಯೂ ಇದ್ದವು. ಈತನ ಸೇನೆ ಪರ್ವತ ಸಮರ ಹಾಗೂ ಗೆರಿಲ್ಲಾ ಯುದ್ಧತಂತ್ರದಲ್ಲಿ ನಿಷ್ಣಾತವಾಗಿತ್ತು. ಶಿವಾಜಿಯು ಕೋಟೆಗಳ ನಿರ್ವಹಣೆಯ ಕಡೆಗೆ ವಿಶೇಷ ಗಮನವನ್ನು ಕೊಡುತ್ತಿದ್ದನು.

ಶಿವಾಜಿಯು ಹಿಂದೂ ಜನರ ರಕ್ಷಕ ಎಂದು ಹೇಳಿಕೊಳ್ಳುತ್ತಿದ್ದನು. ಆದರೆ ಅವನು ಎಲ್ಲ ಮತಧರ್ಮಗಳ ಬಗೆಗೆ ಗೌರವ ಭಾವವನ್ನು ತಾಳಿದ್ದನು. ಎಲ್ಲ ಜನರನ್ನೂ ಸಮಾನ ದೃಷ್ಟಿಯಿಂದ ನೋಡುತ್ತಿದ್ದನು. ಪ್ರಸಂಗ ಬಂದಾಗಲೆಲ್ಲ ಶಿವಾಜಿಯು ಪ್ರವಾದಿ ಮಹಮ್ಮದನಿಗೂ, ಖುರಾನಿಗೂ ಪ್ರಕಟವಾಗಿ ಗೌರವವನ್ನು ಸಲ್ಲಿಸುತ್ತಿದ್ದನು. ಮುಸ್ಲಿಂ ಸಂತರಿಗೂ, ವಿದ್ವಾಂಸರಿಗೂ ಆರ್ಥಿಕ ನೆರವು ನೀಡುತ್ತಿದ್ದನು.

ಶಿವಾಜಿಯನ್ನು ಮಧ್ಯಕಾಲೀನ ಭಾರತದ ಮಹತ್ವಪೂರ್ಣ ವ್ಯಕ್ತಿಗಳಲ್ಲಿ ಒಬ್ಬನೆಂದು ಪರಿಗಣಿಸಲಾಗಿದೆ. ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನೆಂಬ ಕಾರಣಕ್ಕಾಗಿ ಮಾತ್ರವಲ್ಲದೆ ತನ್ನ ರಾಜ್ಯಕ್ಕೆ ಸಮರ್ಥ ಆಡಳಿತವನ್ನು ಒದಗಿಸಿದನೆಂಬ ಕಾರಣಕ್ಕಾಗಿ ಶಿವಾಜಿಗೆ ಈ ಗೌರವ ಸಂದಿದೆ. ಶಿವಾಜಿಯು ನಿಷ್ಠಾವಂತ ಹಿಂದೂ ಆಗಿದ್ದನು. ಆದರೂ ಎಲ್ಲ ಮತಧರ್ಮಗಳ ಬಗೆಗೂ ಸಹಿಷ್ಣುತೆ ಇರಿಸಿಕೊಂಡಿದ್ದನು. ಅವನಿಗೆ ಸ್ತ್ರೀಯರ ಬಗೆಗೆ ಅಪಾರ ಗೌರವವಿತ್ತು. ಸೇನೆಯಲ್ಲಿ ನೀತಿಪಾಲನೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದ್ದನು.

ಕ್ರಿ.ಶ. 1680ರಲ್ಲಿ ಶಿವಾಜಿ ತೀರಿಕೊಂಡನು. ಅವನ ಮಗ ಸಂಬಾಜಿ ಮರಾಠರ ದೊರೆಯಾದನು. ಕ್ರಿ.ಶ. 1689ರಲ್ಲಿ ಔರಂಗಜೇಬನು ಸಂಬಾಜಿಯನ್ನು ಸೆರೆಹಿಡಿದು ಕೊಲ್ಲಿಸಿದನು. ಸಂಬಾಜಿಯ ಮಗ ಸಾಹು ಮೊಗಲರ ಬಂದಿಯಾಗಿಯೇ ಉಳಿದನು. ಶಿವಾಜಿಯ ಇನ್ನೊಬ್ಬ ಮಗ ರಾಜಾರಾಂನ ನೇತೃತ್ವದಲ್ಲಿ ಮರಾಠರು ಮೊಗಲರ ವಿರುದ್ಧ ಸಮರವನ್ನು ಮುಂದುವರಿಸಿಕೊಂಡೇ ಬಂದರು. ರಾಜಾರಾಮನ ಮರಣಾನಂತರ ಅವನ ಪತ್ನಿ ತಾರಾಬಾಯಿ ಮರಾಠರ ಹೋರಾಟವನ್ನು ಮುಂದುವರಿಸಿದಳು.

**ಪೇಶ್ವೆಗಳ ಉದಯ**

ಔರಂಗಜೇಬನು 1707ರಲ್ಲಿ ನಿಧನ ಹೊಂದಿದನು. ಅವನ ನಂತರ ಬಂದ ರಾಜರುಗಳು ತುಂಬ ಅಸಮರ್ಥರಾಗಿದ್ದರು. ಆದ್ದರಿಂದ ಮರಾಠರು ತಮ್ಮ ದಾಳಿಗಳನ್ನು ತೀವ್ರಗೊಳಿಸಿದರು. ಇದು ಇತಿಹಾಸದಲ್ಲಿ ಒಂದು ಹೊಸ ಘಟ್ಟ. ಬಹದ್ದೂರ್ ಷಾ, ಸಾಹುವನ್ನು ಬಿಡುಗಡೆ ಮಾಡಿದನು. ಸಾಹು ಮಹಾರಾಷ್ಟ್ರಕ್ಕೆ ಹಿಂದಿರುಗಿ ರಾಜನಾದನು. ಈತನ ಸಹಾಯಕನಾಗಿ ಬಾಲಾಜಿ ವಿಶ್ವನಾಥನೆಂಬ ಬ್ರಾಹ್ಮಣ ಮಂತ್ರಿಯಿದ್ದನು. ಈ ಅವಧಿಯ ನಂತರ ಮರಾಠಾ ರಾಜರುಗಳು ಕೇವಲ ನೆಪಕ್ಕೆ ರಾಜರಾಗಿ ಉಳಿದರು. ಆಡಳಿತವೆಲ್ಲವೂ ಪೇಶ್ವೆಗಳ ಕೈಗೆ ಬಂದಿತು. ಪೇಶ್ವೆಗಳು ಆಗ ತುಂಬ ದುರ್ಬಲವಾಗುತ್ತಿದ್ದ ಮೊಗಲ್ ಸಾಮ್ರಾಜ್ಯದ ಮೇಲೆ ದಾಳಿ ಮಾಡಿದರು. ಬಹುತೇಕ ಮೊಗಲ್ ಪ್ರಾಂತಗಳನ್ನು ಗೆದ್ದುಕೊಂಡರು. ಮೊದಲ ಪೇಶ್ವೆಯಾದ ಬಾಲಾಜಿ ವಿಶ್ವನಾಥನು (1714–1720) ದೊಡ್ಡ ಮುತ್ಸದ್ದಿಯಾಗಿದ್ದನು. ಸಾಹುವಿನ ಕೈಯನ್ನು ಬಲಪಡಿಸಿದವನೆಂದರೆ ಈತನೇ. ಅಲ್ಲದೆ ಸಾಹುವನ್ನು ಬೆಂಬಲಿಸುವಂತೆ ಉಳಿದ ಮರಾಠಾ ನಾಯಕರ ಮನವೊಲಿಸಿದನು. ಬಾಲಾಜಿ ವಿಶ್ವನಾಥನು ಪೇಶ್ವೆಗಳ ಮೇಲ್ಮೆಗೆ ನಾಂದಿ ಹಾಡಿದನು. ಈತನ ಮಗ ಒಂದನೇ ಬಾಜಿರಾಯನು ಅತ್ಯಂತ ಪ್ರಸಿದ್ಧನಾದ ಪೇಶ್ವೆ. ಈತ ಮಹಾಯೋಧನೂ, ವಿಜಯಶಾಲಿಯೂ ಆಗಿದ್ದನು. ಈತನ ಅವಧಿಯಲ್ಲಿ ಪೇಶ್ವೆಯೇ ನಿಜವಾದ ದೊರೆಯಾಗಿ ದೊರೆಯ ಮಹತ್ವವು ಸಂಪೂರ್ಣವಾಗಿ ನಶಿಸಿತು.

ಮರಾಠಾ ನಾಯಕರಲ್ಲಿ ಐಕಮತ್ಯವಿರಲಿಲ್ಲ. ಆಫ್‌ಘನ್ ನಾಯಕ ಅಹಮದ್ ಷಾ ಅಬ್ದಾಲಿ ಈ ಅವಕಾಶವನ್ನು ಬಳಸಿಕೊಂಡು ಎಲ್ಲ ಮುಸ್ಲಿಂ ಶಕ್ತಿಗಳನ್ನು ಒಗ್ಗೂಡಿಸಿ ಪಾಣಿಪತ್‌ನಲ್ಲಿ ಮರಾಠರನ್ನು ಎದುರಿಸಿದನು. 1761ರಲ್ಲಿ ನಡೆದ ಮೂರನೇ ಪಾಣಿಪತ್ ಯುದ್ಧದಲ್ಲಿ ಮರಾಠರು ಸೋತುಹೋದರು.

## ಅಭ್ಯಾಸ

**I. ಕೆಳಗಿನವುಗಳಿಗೆ ಉತ್ತರಿಸಿ.**

1. ಮರಾಠಾ ಸಾಮ್ರಾಜ್ಯದ ಸ್ಥಾಪನೆಗೆ ನೆರವಾದ ಅಂಶಗಳು ಯಾವುವು ?
2. ಶಿವಾಜಿಯ ಸಾಧನೆಯನ್ನು ವಿವರಿಸಿ.
3. ಶಿವಾಜಿ ಉತ್ತಮ ಆಡಳಿತಗಾರನೂ ಆಗಿದ್ದನು ಎಂದು ಹೇಗೆ ಹೇಳುತ್ತೀರಿ ?
4. ಮರಾಠರ ಇತಿಹಾಸದಲ್ಲಿ ಮೂರನೇ ಪಾಣಿಪತ್ ಯುದ್ಧದ ಮಹತ್ವವೇನು ?

**II. ಭರ್ತಿ ಮಾಡಿ.**

1. ಮರಾಠರನ್ನು ಒಗ್ಗೂಡಿಸಿದ ಶಕ್ತಿಗಳಲ್ಲಿ ......... ಚಳುವಳಿ ಒಂದು.
2. ಶಿವಾಜಿಯ ಶಿಕ್ಷಕನಾಗಿದ್ದವನು.........
3. ಶಿವಾಜಿಯ ಮಂತ್ರಿಮಂಡಲದಲ್ಲಿ....... ಮಂದಿ ಮಂತ್ರಿಗಳಿದ್ದರು.
4. ಸಾಹುವಿನ ಆಶ್ರಯದಲ್ಲಿದ್ದ ........... ಮೊದಲನೆಯ ಪೇಶ್ವೆಯಾಗಿದ್ದನು.
5. ಅಹಮದ್ ಷಹಾ ಅಬ್ದಾಲಿ ಮರಾಠರನ್ನು.......... ಎಂಬಲ್ಲಿ ಸೋಲಿಸಿದನು.

**III. ಹೊಂದಿಸಿ ಬರೆಯಿರಿ.**

| | |
|---|---|
| ಆದಿಲ್ ಷಾಹಿ | ಶಿವಾಜಿಗೆ ಕಿರೀಟ ಧಾರಣೆಯಾದ ಸ್ಥಳ |
| ರಾಮದಾಸ್ | ಬಿಜಾಪುರ |
| ಸಂಬಾಜಿ | ಮರಾಠ ಸಂತ |
| ರಾಯಗಡ | ಶಿವಾಜಿಯ ಮಗ |

## ಮೈಸೂರಿನ ಒಡೆಯರು

ವಿಜಯನಗರದ ಸಾಮ್ರಾಜ್ಯವು ಪತನಗೊಂಡ ಮೇಲೆ ಮೈಸೂರಿನ ಒಡೆಯರು ಪ್ರಸಿದ್ಧಿಗೆ ಬಂದರು. ವಿಜಯನಗರ ಸಾಮ್ರಾಜ್ಯದ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬರುವುದರಲ್ಲಿ ಅವರು ಮಹತ್ವದ ಪಾತ್ರ ವಹಿಸಿದರು.

ಜನಪ್ರಿಯ ಮೂಲಗಳ ಪ್ರಕಾರ 'ವಿಜಯ ಮತ್ತು ಕೃಷ್ಣ' ಎಂಬ ಇಬ್ಬರು ರಾಜಕುಮಾರರು ದ್ವಾರಕೆಯಿಂದ ಬಂದು ಮೈಸೂರಿನ ಬಳಿ 'ಹದಿನಾಡು' ಎಂಬಲ್ಲಿ ನೆಲಸಿದರು. ಯದುರಾಯ ಎಂಬ ಹೆಸರೂ ವಿಜಯನಿಗಿತ್ತು. ಈತನು ಹದಿನಾಡಿನ ಒಡೆಯನ ಮಗಳನ್ನು ಮದುವೆಯಾಗಿ ಹದಿನಾಡಿಗೆ ಒಡೆಯನಾದನು. ಕ್ರಿ.ಶ. 1399ರಿಂದ ಕ್ರಿ.ಶ. 1423ರವರೆಗೆ ಆಳಿದ ಈತನಿಂದ ಮೈಸೂರಿನ ಒಡೆಯರ ಸಂತತಿ ಆರಂಭವಾಗುತ್ತದೆ.

**ರಾಜಒಡೆಯರು:** (ಕ್ರಿ.ಶ. 1578–1617) ಮೈಸೂರಿನ ಆರಂಭ ಕಾಲದ ಒಡೆಯರುಗಳಲ್ಲಿ ಮೊದಲ ಗಣ್ಯತೆ ಪಡೆಯುವ ದೊರೆಯಾಗಿದ್ದನು. ವಿಜಯನಗರದ ರಾಜ ಪ್ರತಿನಿಧಿಯಾದ ತಿರಮಲನಿಂದ ಈತನು ಶ್ರೀರಂಗಪಟ್ಟಣವನ್ನು ಗೆದ್ದುಕೊಂಡು ಅದನ್ನೇ ತನ್ನ ರಾಜ್ಯದ ರಾಜಧಾನಿಯನ್ನಾಗಿ ಮಾಡಿದನು. ರಾಜಧಾನಿಯಲ್ಲಿ ವೈಭವೋಪೇತವಾಗಿ ನಡೆಯುವ ದಸರಾ ಹಬ್ಬವನ್ನು ಈತನು ಆರಂಭಿಸಿದನು.

**ಚಾಮರಾಜ ಒಡೆಯರ್:** (ಕ್ರಿ.ಶ. 1617–1637). ಈತನು ಮೈಸೂರು ರಾಜ್ಯವನ್ನು ಪೂರ್ವ ಮತ್ತು ಉತ್ತರ ಭಾಗಗಳಲ್ಲಿ ವಿಸ್ತರಿಸಿದನು. ಈತನು ವಿದ್ವಾಂಸನೂ ಸಾಹಿತ್ಯ ಪ್ರೇಮಿಯೂ ಆಗಿದ್ದನು.

**ರಣಧೀರ ಕಂಠೀರವ ರಾಜ ಒಡೆಯರ್:** ಮೈಸೂರಿನ ಪ್ರಸಿದ್ಧ ದೊರೆಗಳಲ್ಲಿ ಒಬ್ಬನು. ಈತ ಉತ್ತಮ ಕುಸ್ತಿಪಟುವೂ, ಖಡ್ಗ ಯುದ್ಧ ಪ್ರವೀಣನೂ ಆಗಿದ್ದನು. 1659ರಿಂದ 1673ರವರೆಗೆ ಆಳಿದ **ದೇವರಾಜ ಒಡೆಯರ್** ಇನ್ನೊಬ್ಬ ಪ್ರಸಿದ್ಧ ದೊರೆಯಾಗಿದ್ದನು. ಈತನು ಶ್ರೀರಂಗಪಟ್ಟಣದ ಮೇಲೆ ಮುತ್ತಿಗೆ ಹಾಕಿದ ಶಿವಪ್ಪ ನಾಯಕನ ಸೇನೆಯನ್ನು ಹೊಡೆದೋಡಿಸಿದನು. ಈತನ ಸೇನೆ ಮಧುರೆಯ ನಾಯಕನ ವಿರುದ್ಧ ನಡೆದ ಯುದ್ಧದಲ್ಲಿ ಜಯಶಾಲಿಯಾಯಿತು. ಆರಂಭದ ಅತ್ಯಂತ ಮಹತ್ವದ ರಾಜರುಗಳಲ್ಲಿ ಒಬ್ಬನೆಂದರೆ **ಚಿಕ್ಕದೇವರಾಜ ಒಡೆಯರ್.** ಈತ ರಾಜ್ಯದ ಗಡಿಗಳನ್ನು ವಿಸ್ತರಿಸಿದನು. ಬೆಂಗಳೂರನ್ನು ಮೊಗಲರಿಂದ ಪಡೆದು ಅವರಿಗೆ ಕಪ್ಪ ಕೊಡಲು ಒಪ್ಪಿದನು. 'ನವಕೋಟಿ ನಾರಾಯಣ' ಎಂದು ಜನ ಇವನನ್ನು ಹೊಗಳುತ್ತಿದ್ದರು.

ಈತನ ಅವಧಿಯಲ್ಲಿ ಮೈಸೂರು ರಾಜ್ಯವು ಉತ್ತರದಲ್ಲಿ ತುಮಕೂರು,

ಚಿಕ್ಕಮಗಳೂರು ಜಿಲ್ಲೆಗಳವರೆಗೆ ಮತ್ತು ದಕ್ಷಿಣದಲ್ಲಿ ಪಳನಿಯವರೆಗೆ, ಪೂರ್ವದಲ್ಲಿ ಸೇಲಂ ವರೆಗೆ ಮತ್ತು ಪಶ್ಚಿಮದಲ್ಲಿ ಬೇಲೂರು, ಕೊಡುಗುಗಳವರೆಗೂ ಹಬ್ಬಿತ್ತು.

ದೇಶದಲ್ಲಿ ನೀರಾವರಿ ವ್ಯವಸ್ಥೆಯನ್ನು ಉತ್ತಮಪಡಿಸಲು ಈ ದೊರೆಯು ಅನೇಕ ಕ್ರಮಗಳನ್ನು ಕೈಗೊಂಡನು. ಈತನ ಅವಧಿಯಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ದೇವರಾಯನಾಲೆ, ಚಿಕ್ಕದೇವರಾಯ ನಾಲೆಗಳನ್ನು ತೋಡಲಾಯಿತು. ಈತನ ಅವಧಿಯಲ್ಲಿ ಮೈಸೂರಿನ ಶ್ವೇತ ವರಾಹ ದೇವಾಲಯ, ವರಕಾಡಿನ ವರದರಾಜ ದೇವಾಲಯ ಮತ್ತು ಬೆಂಗಳೂರಿನ ವೆಂಕಟರಮಣ ದೇವಾಲಯಗಳು ಸ್ಥಾಪನೆಗೊಂಡವು.

ತಿರುಮಲರಾಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ಶ್ರೀರಂಗಮ್ಮ, ಸಂಚಿ ಹೊನ್ನಮ್ಮ ಮೊದಲಾದ ವಿದ್ವಾಂಸರಿಗೆ ಈತನು ಆಶ್ರಯದಾತನಾಗಿದ್ದನು. ಚಿಕ್ಕದೇವರಾಜನು ವಿದ್ವಾಂಸನಾಗಿದ್ದು 'ಗೀತ ಗೋಪಾಲ', 'ಚಿಕ್ಕದೇವರಾಜ ಬಿನ್ನಪಂ' ಮೊದಲಾದ ಕೃತಿಗಳನ್ನು ರಚಿಸಿದ್ದಾನೆ. ಚಿಕ್ಕದೇವರಾಜನ ನಂತರ ಬಂದ ಅರಸರು ರಾಜ್ಯದ ವ್ಯವಹಾರವನ್ನು ಸಮರ್ಥವಾಗಿ ನಿರ್ವಹಿಸಲು ಶಕ್ತರಾಗಿರಲಿಲ್ಲ. ಇದರಿಂದ 'ದಳವಾಯಿ'ಗಳ ಉದಯಕ್ಕೆ ಅವಕಾಶ ಒದಗಿತು. ದಳವಾಯಿಗಳು ತುಂಬ ಪ್ರಬಲರಾಗಿ ರಾಜ್ಯದ ಆಡಳಿತವನ್ನು ಸಂಪೂರ್ಣವಾಗಿ ಸ್ವಾಧೀನಕ್ಕೆ ತೆಗೆದುಕೊಂಡರು. ನಂಜರಾಜಯ್ಯ, ದೇವರಾಜಯ್ಯ ಎಂಬ ದಳವಾಯಿಗಳು ಇವರಲ್ಲಿ ಪ್ರಮುಖರು. ಇವರು ಕ್ರಿ.ಶ. 1704 ರಿಂದ 1761ರವರೆಗೆ ಪ್ರಬಲರಾಗಿದ್ದರು. ನಂಜರಾಜಯ್ಯನಾದ ಮೇಲೆ ಹೈದರ್ ಅಲಿ ಒಬ್ಬ ದಳವಾಯಿಯಾಗಿದ್ದನು. ಮುಂದೆ ಈತ ರಾಜ್ಯದ ನಾಯಕನಾಗಿ ಕ್ರಿ.ಶ. 1761ರಿಂದ 1781ರವರೆಗೆ ಅಧಿಕಾರವನ್ನು ನಿರ್ವಹಿಸಿದನು. ಇವನ ಮಗ ಟಿಪ್ಪು ಮುಂದೆ ಸುಲ್ತಾನನೆಂಬ ಹೆಸರು ಪಡೆದನು. ಇವರಿಬ್ಬರೂ ಮೈಸೂರಿನ ಗಡಿಗಳನ್ನು ಕರಾವಳಿಯವರೆಗೆ, ಈಶಾನ್ಯ ಪ್ರದೇಶದ ಬೀದರ್, ರಾಯಚೂರು, ಗುಲ್ಬಾರ್ಗಗಳವರೆಗೆ ಉತ್ತರದಲ್ಲಿ ಬಿಜಾಪುರ, ಬೆಳಗಾಂ, ಧಾರವಾಡಗಳವರೆಗೆ ವಿಸ್ತರಿಸಿದರು.

ಟಿಪ್ಪುವಿನ ಪತನಾನಂತರ ಬ್ರಿಟಿಷರು ಕ್ರಿ.ಶ. 1799ರಲ್ಲಿ ರಾಜ್ಯವನ್ನು ಮೈಸೂರಿನ ಒಡೆಯರಿಗೆ ಮರಳಿ ಕೊಡಿಸಿದರು. ಹೈದರ್ ಮತ್ತು ಟಿಪ್ಪುಗಳ ಪೂರ್ವಾವಧಿಯಲ್ಲಿ ಒಡೆಯರು ಆಳುತ್ತಿದ್ದ ಪ್ರದೇಶಗಳನ್ನು ಒಡೆಯರಿಗೆ ಹಿಂದಿರುಗಿಸಲಾಯಿತು. ಇದು ಸ್ಥೂಲವಾಗಿ ಹಳೆಯ ಮೈಸೂರು ಪ್ರದೇಶ ಎನ್ನಬಹುದು. ಹೈದರಾಲಿ ಮತ್ತು ಟಿಪ್ಪು ಗೆದ್ದಿದ್ದ ರಾಜ್ಯಗಳನ್ನು ಬ್ರಿಟಿಷರು, ಮರಾಠರು ಮತ್ತು ಹೈದರಾಬಾದಿನ ನಿಜಾಮರು ಹಂಚಿಕೊಂಡರು.

## ಮುಮ್ಮಡಿ ಕೃಷ್ಣರಾಜ ಒಡೆಯರ್ (ಕ್ರಿ.ಶ. 1799–1868)

ಇವರನ್ನು ಮೈಸೂರಿನ ಸಿಂಹಾಸನದ ಮೇಲೆ 1799ರಲ್ಲಿ ಕುಳ್ಳಿರಿಸಲಾಯಿತು. ಹೈದರಾಲಿ ಟಿಪ್ಪುಗಳ ಕಾಲದಲ್ಲಿ ದಿವಾನನಾಗಿದ್ದ ಪೂರ್ಣಯ್ಯನನ್ನು ದಿವಾನನ್ನಾಗಿಯೂ ಲೆ।। ಕರ್ನಲ್ ಬ್ಯಾರಿ ಕ್ಲೋಸ್ ಎಂಬಾತನನ್ನು ಬ್ರಿಟಿಷ್ ರೆಸಿಡೆಂಟನನ್ನಾಗಿಯೂ ನೇಮಕ ಮಾಡಲಾಯಿತು. ಮೈಸೂರು ಸಂಸ್ಥಾನವು ಬ್ರಿಟಿಷರ ಆಶ್ರಿತ ರಾಜ್ಯವಾಗಿ ವಾರ್ಷಿಕ ಕಪ್ಪವನ್ನು ಕೊಡುತ್ತಿದ್ದಿತು. ಈ ರಾಜರ ಅವಧಿಯಲ್ಲಿ ಪ್ರಮುಖ ಆಡಳಿತಾತ್ಮಕ

ಬದಲಾವಣೆಗಳಾದವು. ರಾಜ್ಯವನ್ನು ಮೂರು ಆಡಳಿತ ಘಟಕಗಳಾಗಿ ವಿಂಗಡಿಸಲಾಯಿತು. ಒಂದೊಂದು ಘಟಕವೂ ಒಬ್ಬ ಸುಬೇದಾರನ ಅಧೀನದಲ್ಲಿರುತ್ತಿತ್ತು. ಕೃಷಿ ಉಪಕರಣಗಳನ್ನು ಕೊಳ್ಳಲು ರೈತರಿಗೆ ತಕಾವಿ ಸಾಲವನ್ನು ಕೊಡಲಾಗುತ್ತಿತ್ತು. ಕಾಫಿ ತೋಟಗಳ ಸ್ಥಾಪನೆಯನ್ನು ಪ್ರೋತ್ಸಾಹಿಸಲಾಯಿತು. ನೀರಾವರಿಗೆ ಪ್ರಥಮ ಆದ್ಯತೆ ನೀಡಲಾಯಿತು. ಸಾಗರಕಟ್ಟೆಯಲ್ಲಿ ಲಕ್ಷ್ಮಣತೀರ್ಥ ನದಿಗೆ ಅಡ್ಡಲಾಗಿ ಒಂದು ಅಣೆಕಟ್ಟೆಯನ್ನು ಹಾಕಲಾಯಿತು. ರಾಜ್ಯದ ಒಳಗಿನ ದಂಗೆಗಳನ್ನು ಅಡಗಿಸುವ ಸಲುವಾಗಿ 'ಕಂದಾಚಾರ' ಎಂಬ ಸೇನೆಯ ವ್ಯವಸ್ಥೆ ಮಾಡಲಾಯಿತು.

ಕೃಷ್ಣರಾಜ ಒಡೆಯರು ದೇವಾಲಯಗಳಿಗೆ ಉದಾರವಾಗಿ ದತ್ತಿಗಳನ್ನು ನೀಡಿದರು. ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವನ್ನು ನೀಡಿದರು.

ಈ ಅವಧಿಯ ಪ್ರಮುಖ ವಿದ್ವಾಂಸರೆಂದರೆ ಬಸವಪ್ಪ ಶಾಸ್ತ್ರಿ (1843–1891). ಇವರು 'ಶಾಕುಂತಲಾ', 'ವಿಕ್ರಮೋರ್ವಶೀಯ' ನಾಟಕಗಳನ್ನು ಕನ್ನಡಿಸಿದರು. ಷೇಕ್ಸ್‌ಪಿಯರಿನ 'ಒಥೆಲೋ' ನಾಟಕವನ್ನು ಇವರು ಕನ್ನಡಕ್ಕೆ ರೂಪಾಂತರಿಸಿದ್ದಾರೆ. ಇವರಿಗೆ 'ಅಭಿನವ ಕಾಳಿದಾಸ' ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಲಾಗಿತ್ತು.

ದೇವಚಂದ್ರ ಕವಿ ಇದೇ ಅವಧಿಯವನು. 'ರಾಜಾವಳಿ ಕಥೆ'ಯನ್ನು ಬರೆದಿದ್ದಾನೆ. ಕೆಂಪುನಾರಾಯಣ ಈ ದೊರೆಯ ಆಸ್ಥಾನದಲ್ಲಿದ್ದನು. ಈತ 'ಮುದ್ರಾಮಂಜೂಷ' ಎಂಬ ಕೃತಿಯನ್ನು ಬರೆದಿದ್ದಾನೆ. ಸದಾಶಿವರಾವ್, ವೆಂಕಟಸುಬ್ಬಯ್ಯ, ಸಾಂಬಯ್ಯ ಮತ್ತು ಚಿಕ್ಕರಾಮಪ್ಪ ಇವರುಗಳು ಈ ಅವಧಿಯ ಸಂಗೀತ ವಿದ್ವಾಂಸರಾಗಿದ್ದರು. ದೊರೆಗಳೇ ಸ್ವತಃ ಕನ್ನಡ ಮತ್ತು ಸಂಸ್ಕೃತ ವಿದ್ವಾಂಸರಾಗಿದ್ದರು. ಇವರು 'ಸೌಗಂಧಿಕಾ ಪರಿಣಯ', 'ಹರಿವಂಶ', 'ಗಾಯತ್ರೀ ಚರಿತ್ರೆ', 'ಅಧ್ಯಾತ್ಮ ರಾಮಾಯಣ' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.

ಮೂರನೇ ಕೃಷ್ಣರಾಜ ಒಡೆಯರು 1868ರಲ್ಲಿ ದೈವಾಧೀನರಾದರು.

ಕ್ರಿ.ಶ. 1831ರಲ್ಲಿ ಬ್ರಿಟಿಷ್ ಸರಕಾರವು ಮೈಸೂರಿನ ಅಧಿಕಾರವನ್ನು ಕೈಗೆ ತೆಗೆದುಕೊಂಡು ರಾಜ್ಯವನ್ನಾಳಲು ಬ್ರಿಟಿಷ್ ಕಮೀಷನರುಗಳನ್ನು ನೇಮಿಸಿತು. ಕಮೀಷನರ ಆಳ್ವಿಕೆ ಕ್ರಿ.ಶ. 1881ರವರೆಗೂ ಇತ್ತು.

**ಚಾಮರಾಜ ಒಡೆಯರ್ (ಕ್ರಿ.ಶ. 1881–1894)**

ಬ್ರಿಟಿಷ್ ಸರಕಾರವು ಆಡಳಿತವನ್ನು ಮತ್ತೆ ರಾಜ ವಂಶಕ್ಕೆ ಬಿಟ್ಟುಕೊಡಲು ತೀರ್ಮಾನಿಸಿತು. ಅದರಂತೆ ಕ್ರಿ.ಶ. 1881ರ ಮಾರ್ಚ್ ತಿಂಗಳಲ್ಲಿ ರಾಜ್ಯದ ಆಡಳಿತವನ್ನು ಒಡೆಯರಿಗೆ ಮರಳಿ ಕೊಡಲಾಯಿತು. ಅದೇ ವರ್ಷ ಚಾಮರಾಜ ಒಡೆಯರು ಸಿಂಹಾಸನವನ್ನೇರಿದರು. ದೇಶದ ಆಡಳಿತ ಯಂತ್ರವನ್ನು ಸುಗಮವಾಗಿ ನಡೆಸಲು ದಿವಾನರನ್ನು ನೇಮಿಸಿ ಅವರಿಗೆ ವ್ಯಾಪಕ ಅಧಿಕಾರವನ್ನು ನೀಡಲಾಯಿತು.

ದಿವಾನ್ ರಂಗಾಚಾರ್ಲು (1881–83) ಉದಾರ ನೀತಿಯುಳ್ಳ ಒಬ್ಬ ಸಮರ್ಥ ಆಡಳಿತಗಾರರಾಗಿದ್ದರು. 1881ರಲ್ಲಿ 'ಪ್ರಜಾಪ್ರತಿನಿಧಿ ಸಭೆ'ಯನ್ನು ಸ್ಥಾಪಿಸಿದ್ದು ಈ ಅವಧಿಯ ಅತ್ಯಂತ ಮಹತ್ವದ ಆಡಳಿತ ಪ್ರಗತಿ ಎಂದು ಹೇಳಬಹುದು.

ಮುಂದಿನ ದಿವಾನ್ ಕೆ. ಶೇಷಾದ್ರಿ ಅಯ್ಯರ್ ರಾಜ್ಯದ ಆರ್ಥಿಕ ಸ್ಥಿತಿಯನ್ನು ಬಲಪಡಿಸಿದರು. ಬೆಂಗಳೂರು – ಮೈಸೂರು, ಬೆಂಗಳೂರು – ತಿಪಟೂರು, ಬೆಂಗಳೂರು – ತುಮಕೂರು, ಬೆಂಗಳೂರು – ಕೆ.ಜಿ.ಎಫ್, ತುಮಕೂರು– ಗುಬ್ಬಿ, ಬೀರೂರು – ಶಿವಮೊಗ್ಗೆಗಳ ನಡುವೆ ರೈಲು ಸಂಚಾರವನ್ನು ಯೋಜಿಸಿ ಯಶಸ್ವಿಯಾಗಿ ಸಂಪೂರ್ಣಗೊಳಿಸಲಾಯಿತು. ದಿವಾನ್ ಶೇಷಾದ್ರಿ ಅಯ್ಯರ್ ನೀರಾವರಿ ಪ್ರಗತಿಯ ಕಡೆಗೆ ಗಮನವನ್ನು ಹರಿಸಿದರು.

1892ರಲ್ಲಿ ಸಿವಿಲ್ ಸರ್ವಿಸ್ ಪರೀಕ್ಷೆಗಳಂತಹ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿಗಳನ್ನು ಮಾಡಿಕೊಳ್ಳುವ ಪದ್ಧತಿಯನ್ನು ಜಾರಿಗೆ ತರಲಾಯಿತು. ರಾಜ್ಯದಲ್ಲಿ ಸ್ತ್ರೀ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸುವ ಸಲುವಾಗಿ ಮೈಸೂರು ನಗರದಲ್ಲಿ ಮಹಾರಾಣಿ ಬಾಲಕಿಯರ ಪ್ರೌಢಶಾಲೆಯನ್ನು ಆರಂಭಿಸಲಾಯಿತು. ರಾಜ್ಯದಲ್ಲಿ ಬ್ರಿಟಿಷರ ಪದ್ಧತಿಯ ಅಂಚೆ ವ್ಯವಸ್ಥೆಯನ್ನು ಆರಂಭಿಸಲಾಯಿತು.

**ನಾಲ್ವಡಿ ಕೃಷ್ಣರಾಜ ಒಡೆಯರ್ (1894–1940)**

1894ರಲ್ಲಿ ಚಾಮರಾಜ ಒಡೆಯರ್ ಅವರು ತೀರಿಕೊಂಡರು. ಅವರ ಚಿಕ್ಕ ವಯಸ್ಸಿನ ಮಗ ಕೃಷ್ಣರಾಜರು ಪಟ್ಟಕ್ಕೆ ಬಂದರು. ರಾಜಮಾತೆ ಕೆಂಪ ರಾಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನ ಇವರು 1902ರವರೆಗೆ ರಾಜಪ್ರತಿನಿಧಿಯಾಗಿದ್ದನು. ನಾಲ್ಕನೇ ಕೃಷ್ಣರಾಜ ಒಡೆಯರ ಆಳ್ವಿಕೆಯನ್ನು 'ವೈಭವದ ಯುಗ' ಎಂದು ಕರೆಯಲಾಗಿದೆ. ಏಕೆಂದರೆ ಇವರ ಅವಧಿಯಲ್ಲಿ ಎಂಟು ಜನ ಪ್ರಸಿದ್ಧ ದಿವಾನರಾಗಿ ಕಾರ್ಯನಿರ್ವಹಿಸಿದರು. ಹಾಗೂ ಅನೇಕ ಆಧುನೀಕರಣ ಕಾರ್ಯಕ್ರಮಗಳನ್ನು ರೂಪಿಸಿ ನೆರವೇರಿಸಲಾಯಿತು. 1902ರಲ್ಲಿ ಶಿವನ ಸಮುದ್ರದಲ್ಲಿ ಜಲವಿದ್ಯುತ್ ಯೋಜನೆಯನ್ನು ಮುಗಿಸಲಾಯಿತು. ಶಿವನಸಮುದ್ರದಲ್ಲಿ ಉತ್ಪಾದಿತವಾದ ವಿದ್ಯುತ್ತನ್ನು ಮೊದಲು ಕೋಲಾರದ ಚಿನ್ನದ ಗಣಿಗೆ ಪೂರೈಸಿ ಅನಂತರ ಬೆಂಗಳೂರಿಗೂ ವಿಸ್ತರಿಸಲಾಯಿತು. ಮುಖ್ಯವಾಗಿ ಸರ್. ಎಂ. ವಿಶ್ವೇಶ್ವರಯ್ಯನವರ ಕಾಲದಲ್ಲಿ ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಲೋಕಲ್ ಬೋರ್ಡ್ ಮತ್ತು ಗ್ರಾಮ ಪಂಚಾಯಿತಿ ನಿಯಂತ್ರಣ ಮೊದಲಾದ ವಿಧೇಯಕಗಳು 1918ರಲ್ಲಿ ಅಂಗೀಕೃತವಾದವು. 1913ರಲ್ಲಿ ಕೃಷಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು. 1916ರಲ್ಲಿ ಮೈಸೂರು ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಜನ್ಮತಾಳಿತು. ಬೆಂಗಳೂರಿನಲ್ಲಿ ಸೋಪಿನ ಕಾರ್ಖಾನೆ, ಲೋಹ ಕಾರ್ಖಾನೆಗಳನ್ನೂ, ಮೈಸೂರಿನಲ್ಲಿ ಶ್ರೀಗಂಧದ ಎಣ್ಣೆಯ ಕಾರ್ಖಾನೆಯನ್ನೂ, ಭದ್ರಾವತಿಯಲ್ಲಿ ಕಬ್ಬಿಣದ ಕಾರ್ಖಾನೆ ಹಾಗೂ ಮರದ ಕಾರ್ಖಾನೆಗಳನ್ನೂ ಸ್ಥಾಪಿಸಲಾಯಿತು.

ಮಿರ್ಜಾ ಎಂ. ಇಸ್ಮಾಯಿಲ್ ಅವರು ಸರ್. ಎಂ.ವಿ. ಅವರ ನೀತಿಯನ್ನು ಮುಂದುವರಿಸಿಕೊಂಡು ಬಂದರು. ಭದ್ರಾವತಿಯಲ್ಲಿ ಉಕ್ಕು , ಕಾಗದ ಮತ್ತು ಸಿಮೆಂಟ್ ಕಾರ್ಖಾನೆಗಳನ್ನೂ, ಬೆಂಗಳೂರಿನಲ್ಲಿ ಹಿಂದೂಸ್ತಾನ್ ಏರೋನಾಟಿಕ್ಸ್ ಲಿ. ಅನ್ನೂ,

ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆಯನ್ನೂ ಸ್ಥಾಪಿಸಲಾಯಿತು. ಕೃಷ್ಣರಾಜಸಾಗರದ ಅಣೆಕಟ್ಟೆಯ ಕೆಳಗೆ ಪ್ರಸಿದ್ಧವಾದ ಬೃಂದಾವನ ಉದ್ಯಾನವನ್ನೂ ನಿರ್ಮಿಸಲಾಯಿತು.

ಕೃಷ್ಣರಾಜ ಒಡೆಯರ್ ಸಮರ್ಥ ಆಡಳಿತಗಾರರಾಗಿದ್ದರು. ಕಲೆ ಸಾಹಿತ್ಯಗಳಿಗೆ ಆಶ್ರಯದಾತರಾಗಿದ್ದರು. ತಮ್ಮ ಪ್ರಜೆಗಳನ್ನು ಪ್ರೀತಿಸುತ್ತಿದ್ದರು. ಅವರೊಂದಿಗೆ ಆತ್ಮೀಯ ಸಂಪರ್ಕವನ್ನು ಇರಿಸಿಕೊಂಡಿದ್ದರು. ಜನರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿದರು. ಅವರಿಗೆ 'ರಾಜರ್ಷಿ' ಎಂಬ ಜನಮರ್ಯಾದೆಯೂ ಇದ್ದಿತು.

**ಜಯಚಾಮರಾಜ ಒಡೆಯರ್** ಅವರು 1940ರಲ್ಲಿ ಪಟ್ಟಕ್ಕೆ ಬಂದರು. ಎನ್. ಮಾಧವರಾವ್ (1941–46), ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ (1946–49) ಈ ಅವಧಿಯಲ್ಲಿ ದಿವಾನರುಗಳಾಗಿದ್ದರು. ಭದ್ರಾ ಜಲಾಶಯ ಯೋಜನೆ, ಶರಾವತಿ ಜಲವಿದ್ಯುತ್ ಯೋಜನೆಗಳು ಈ ಅವಧಿಯಲ್ಲಿ ರೂಪಿತವಾದವು. ಇವರು ಮೈಸೂರಿನ ಕೊನೆಯ ಅರಸು.

ಭಾರತದ ಸ್ವಾತಂತ್ರ್ಯ ಚಳುವಳಿ ಮೈಸೂರಿನ ಮೇಲೂ ಪ್ರಭಾವ ಬೀರಿತು. ಭಾರತ ಸ್ವಾತಂತ್ರ್ಯವನ್ನು ಗಳಿಸಿಕೊಂಡ ಮೇಲೆ ಮೈಸೂರಿನ ಕಾಂಗ್ರೆಸ್ ಪಕ್ಷವು ಮೈಸೂರಿನಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆಯಾಗಬೇಕು ಎಂದು ಚಳುವಳಿ ಮಾಡಿತು. ಮಹಾರಾಜರು ಕಾಂಗ್ರೆಸ್‌ನ ಬೇಡಿಕೆಗಳನ್ನು ಒಪ್ಪಿಕೊಂಡರು. ಜವಾಬ್ದಾರಿ ಸರಕಾರವನ್ನು ಸ್ಥಾಪಿಸಲಾಯಿತು. ಜಯಚಾಮರಾಜ ಒಡೆಯರ್ ಅವರು 1950ರ ತನಕ ಅಧಿಕಾರದಲ್ಲಿದ್ದರು. ಅನಂತರ 1956ರವರೆಗೆ ರಾಜಪ್ರಮುಖರಾಗಿದ್ದರು. 1974ರಲ್ಲಿ ದೈವಾಧೀನರಾದರು.

ಜಯಚಾಮರಾಜ ಒಡೆಯರ್ ಅವರು ಮಹಾ ವಿದ್ವಾಂಸರಾಗಿದ್ದರು. ಅನೇಕ ಗ್ರಂಥಗಳನ್ನು ಅವರು ರಚಿಸಿದ್ದಾರೆ. ಸಂಗೀತ, ಲಲಿತ ಕಲೆಗಳಿಗೂ ಅವರು ಪ್ರೋತ್ಸಾಹವನ್ನು ನೀಡಿದರು. ಅವರು ಕರ್ನಾಟಕ ಸಂಗೀತವನ್ನು ಶ್ರೀಮಂತಗೊಳಿಸಿದ್ದಾರೆ.

## ಅಭ್ಯಾಸ

**I. ಇವುಗಳಿಗೆ ಉತ್ತರ ಬರೆಯಿರಿ.**

1. ರಾಜಒಡೆಯರ ಸಾಧನೆಗಳನ್ನು ಸಂಕ್ಷೇಪವಾಗಿ ಪರಿಚಯಿಸಿ.
2. ಚಿಕ್ಕದೇವರಾಜ ಒಡೆಯರ ಆಡಳಿತ ವ್ಯವಸ್ಥೆಯನ್ನು ವಿವರಿಸಿ.
3. ಶೇಷಾದ್ರಿ ಅಯ್ಯರ್ ಅವರನ್ನು ಸಮರ್ಥ ದಿವಾನ್ ಎಂದು ಕರೆದಿರುವುದೇಕೆ ?
4. ಚಿಕ್ಕದೇವರಾಜ ಒಡೆಯರ ಕಾಲದ ಮೈಸೂರಿನ ಪ್ರಗತಿಯನ್ನು ವಿವರಿಸಿ.
5. ನಾಲ್ವಡಿ ಕೃಷ್ಣರಾಜ ಒಡೆಯರನ್ನು 'ರಾಜರ್ಷಿ' ಎಂದೇಕೆ ಕರೆಯುತ್ತಾರೆ ?
6. ಮೈಸೂರಿನ ಪ್ರಗತಿಗಾಗಿ ಸರ್. ಎಂ. ವಿಶ್ವೇಶ್ವರಯ್ಯನವರು ಸಲ್ಲಿಸಿದ ಸೇವೆಯನ್ನು ವಿವರಿಸಿ.
7. ಮಿರ್ಜಾ ಇಸ್ಮಾಯಿಲ್ಲರ ಕಾಲದಲ್ಲಿ ಮೈಸೂರು ಸಾಧಿಸಿದ ಆರ್ಥಿಕ ಪ್ರಗತಿಯನ್ನು ವಿವರಿಸಿ.

8. ಜಯಚಾಮರಾಜ ಒಡೆಯರ ಕಾಲದಲ್ಲಿ ನಡೆದ ಪ್ರಮುಖ ಘಟನೆಗಳು ಯಾವುವು ?

**II. ಭರ್ತಿ ಮಾಡಿ.**

1. ಒಡೆಯರ್ ಸಂತತಿಯ ಸ್ಥಾಪಕ..........
2. ರಾಜ ಒಡೆಯರು.......ವನ್ನು ತಮ್ಮ ರಾಜ್ಯದ ರಾಜಧಾನಿಯನ್ನಾಗಿ ಮಾಡಿಕೊಂಡರು.
3. ಮೈಸೂರಿನಲ್ಲಿ........ ಕಾಲದಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಲಾಯಿತು.
4. ಮೈಸೂರಿನ ಕ್ಕೊನೆಯ ಮಹಾರಾಜರೆಂದರೆ.........

**III. ಹೊಂದಿಸಿ**

| ಎ | ಬಿ |
|---|---|
| ಬಸವಪ್ಪ ಶಾಸ್ತ್ರಿ | ಕುಸ್ತಿ ಪಟು |
| ಕಂಠೀರವನರಸರಾಜ | ಅಭಿನವ ಕಾಳಿದಾಸ |
| ಕೃಷ್ಣರಾಜಸಾಗರ ಅಣೆಕಟ್ಟು | ಶ್ರೀರಂಗಪಟ್ಟಣ |
| ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ | ವಿಶ್ವೇಶ್ವರಯ್ಯ |
| ರಾಜ ಒಡೆಯರು | ಮೈಸೂರಿನ ದಿವಾನರು |

# 6. ಆಧುನಿಕ ಜಗತ್ತು

## ಹೊಸಜಗತ್ತಿನ ವಸಾಹತುಕರಣ (ಅಮೆರಿಕಾ ಖಂಡ)

## ಕ್ರಾಂತಿಕಾರಕ ಹಾಗೂ ರಾಷ್ಟ್ರೀಯ ಚಳುವಳಿಗಳು

ಕ್ರಿ.ಶ. 1492ರ ನಂತರ ಯೂರೋಪಿಯನ್ನರು ಹೊಸ ಜಗತ್ತನ್ನು ಪತ್ತೆ ಹಚ್ಚಿದರು. ಅವು ಕ್ರಮವಾಗಿ ದೊಡ್ಡ ಖಂಡಗಳಾದ ಉತ್ತರ ಅಮೆರಿಕಾ ಮತ್ತು ದಕ್ಷಿಣ ಅಮೆರಿಕಾ. ಅದರಲ್ಲಿ ಕ್ಯೂಬಾ, ವೆಸ್ಟ್ ಇಂಡೀಸ್ ಹಾಗೂ ಇತರ ದೊಡ್ಡ ದ್ವೀಪಗಳೂ ಸೇರಿವೆ. ಯೂರೋಪು ಹಳೆಯ ಜಗತ್ತಾಯಿತು. ಬಹುತೇಕ ಈ ಪ್ರದೇಶದಿಂದ ಉತ್ತರ ಅಮೆರಿಕಾ ಖಂಡದಲ್ಲಿ ಎರಡು ದೊಡ್ಡ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಅವು ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಕೆನಡ. ದಕ್ಷಿಣ ಅಮೆರಿಕಾವನ್ನು ಲ್ಯಾಟಿನ್ ಅಮೆರಿಕಾ ಎಂದೂ ಕರೆಯುತ್ತಾರೆ. 19ನೇ ಶತಮಾನದಲ್ಲಿ ಅಲ್ಲೂ ಅನೇಕ ದೇಶಗಳು ತಲೆಯೆತ್ತಿದವು.

**ಖಂಡಗಳ ಶೋಧನೆ**

ಉತ್ತರ ಅಮೆರಿಕಾ ಖಂಡವು ಯೂರೋಪಿಯನ್ ನಾಗರಿಕತೆಗೆ ಬಹುಕಾಲ

ಗೊತ್ತಿರಲಿಲ್ಲ. ಅಮೆರಿಕಗಳಲ್ಲಿ ಏಷ್ಯಾಖಂಡದ ಅಲೆಮಾರಿ ಬುಡಕಟ್ಟಿನವರು ವಾಸಿಸುತ್ತಿದ್ದರು. ಕೆಲವಾರು ಶತಮಾನಗಳ ಅವಧಿಯಲ್ಲಿ ಈ ಬುಡಕಟ್ಟಿನವರು ಉತ್ತರ ಮತ್ತು ದಕ್ಷಿಣ ಅಮೆರಿಕಾಗಳ ವಿಸ್ತಾರವಾದ ಪ್ರದೇಶಗಳಲ್ಲಿ ಹರಡಿಕೊಂಡರು. ಶತಮಾನಗಳವರೆಗೆ ಯೂರೋಪ್ ಮತ್ತು ಏಷ್ಯಾಖಂಡದ ಜನರಿಗೆ ಉತ್ತರ ಮತ್ತು ದಕ್ಷಿಣ ಅಮೆರಿಕಾ ಎಂಬ ವಿಸ್ತಾರವಾದ ಭೂ ಪ್ರದೇಶ ಇರುವುದೇ ಗೊತ್ತಿರಲಿಲ್ಲ. ಕೊಲಂಬಸ್ ಇಲ್ಲಿಯ ನಿವಾಸಿಗಳನ್ನು ರೆಡ್ ಇಂಡಿಯನ್ನರೆಂದು ಕರೆದನು. ಹದಿನೈದನೆಯ ಶತಮಾನದವರೆಗೆ ಇವರು ನಿರಾಳವಾಗಿ ಜೀವಿಸಿದ್ದರು.

ಕ್ರಿ.ಶ. 1491ರಲ್ಲಿ ಕೊಲಂಬಸನು ಹೊಸ ಜಗತ್ತಿಗೆ ಸಮುದ್ರ ಮಾರ್ಗವನ್ನು ಕಂಡುಹಿಡಿದನು. ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್ ಮತ್ತು ಪೋರ್ಚುಗಲ್‌ಗಳಿಂದ ಜನರು ಅಲ್ಲಿಗೆ ಹೋದರು. ಸ್ಪೇನ್ ಮತ್ತು ಫ್ರಾನ್ಸ್ ದೇಶದ ಜನ ಉತ್ತರ ಅಮೆರಿಕಾದಲ್ಲಿ ಪ್ರಬಲರಾಗಿದ್ದರು.

**ಅಮೆರಿಕಾ ಸಂಯುಕ್ತ ಸಂಸ್ಥಾನ**

ಕ್ರಿ.ಶ. 1607ರಲ್ಲಿ ಜೇಮ್ಸ್‌ಟೌನನಲ್ಲಿ ಇಂಗ್ಲಿಷರು ತಮ್ಮ ಮೊದಲ ವಸಾಹತನ್ನು ಸ್ಥಾಪಿಸಿದರು. ಇಂಗ್ಲೆಂಡಿನಿಂದ ಹಲವಾರು ಮಂದಿ ತಮ್ಮ ದೇಶದ ಧಾರ್ಮಿಕ ಕಿರುಕುಳದಿಂದ ಪಾರಾಗಲು ಇಲ್ಲಿಗೆ ವಲಸೆ ಬಂದರು. ಅವರಲ್ಲಿ ತುಂಬ ಪ್ರಸಿದ್ಧರಾದವರೆಂದರೆ 'ಪಿಲಿಗ್ರಿಂ ಫಾದರ್ಸ್'. ಅವರು ಮೇ ಫ್ಲವರ್ ಎಂಬ ಹಡಗಿನಲ್ಲಿ ಕ್ರಿ.ಶ. 1620ರಲ್ಲಿ ಹೊಸ ಜಗತ್ತಿಗೆ ಬಂದರು. ಮಸ್ಸಾಚುಸೆಟ್ಸ್ ಬಳಿಯ ಪ್ಲಿಮತ್‌ನಲ್ಲಿ ವಸಾಹತನ್ನು ಸ್ಥಾಪಿಸಿದರು. 'ಕ್ವೇಕರ್ಸ್' ಎಂಬುವರು ಇನ್ನೊಂದು ಕ್ರೈಸ್ತ ಪಂಗಡದವರು. ಅವರು ಶಾಂತಿಪ್ರಿಯರು. ಕಷ್ಟಪಟ್ಟು ದುಡಿಯುವವರು. ಸಾಮಾಜಿಕ ಶ್ರೇಣಿಯಲ್ಲಿ ಹಿಂದುಳಿದಿದ್ದರು. ಯುದ್ಧಗಳನ್ನು ಮುಂದುವರಿಸುವುದಕ್ಕಾಗಿ ರಾಜ್ಯವು ತೆರಿಗೆಯನ್ನು ವಿಧಿಸಿದಾಗ ಇವರು ಪ್ರತಿಭಟಿಸಿದರು. ಇಂಗ್ಲೆಂಡಿನಲ್ಲಿ ಅವರ ಮುಖಂಡನಾಗಿದ್ದ ವಿಲಿಯಂ ಪೆನ್, ಅವರಿಗಾಗಿ ಪೆನ್ಸಿಲ್ವೇನಿಯಾ ಎಂಬ ವಸಾಹತನ್ನು ಸ್ಥಾಪಿಸಿದನು. ಇನ್ನು ಕೆಲವರು ಲಾಭಕ್ಕಾಗಿ ವಸಾಹತುಗಳನ್ನು ಸ್ಥಾಪಿಸಿದರು. ಹೀಗೆ ವಲಸೆ ಹೋಗುವವರ ಸಲುವಾಗಿ ಸಂಘ ಸಂಸ್ಥೆಗಳನ್ನು ರೂಪಿಸಲಾಗಿತ್ತು. ಬಡವರಾಗಿದ್ದರೂ ದೈಹಿಕವಾಗಿ ಶಕ್ತರಾಗಿದ್ದ ಜನರನ್ನು ಹೊಸ ಜಗತ್ತಿಗೆ ಹೋಗುವಂತೆ ಪ್ರೋತ್ಸಾಹಿಸಲಾಗಿತ್ತು. ಮತೀಯ ಗುಂಪುಗಳಿಗೆ ಆಶ್ರಯ ನೀಡಲು ಮತ್ತು ಸಾಲ ಮಾಡಿ ಸೆರೆಮನೆಯಲ್ಲಿ ಇದ್ದವರಿಗೆ ಆಶ್ರಯ ನೀಡಲು ವಸಾಹತುಗಳನ್ನು ತೆರೆಯಲಾಯಿತು. ಹೀಗೆ ಹದಿಮೂರು ವಸಾಹತುಗಳು ಸಿದ್ಧವಾದವು. ಅವು ಕ್ರಮವಾಗಿ ಕನೆಕ್ಟಿಕಟ್, ನ್ಯೂಯಾರ್ಕ್, ನ್ಯೂಜೆರ್ಸಿ, ಪೆನ್‌ಸಿಲ್ವೇನಿಯಾ, ಡೆಲಾವೇರ್, ಮೇರಿ ಲ್ಯಾಂಡ್, ವರ್ಜೀನಿಯಾ, ಉತ್ತರ ಕೆರೊಲಿನ, ದಕ್ಷಿಣ ಕೆರೊಲಿನ ಮತ್ತು ಜಾರ್ಜಿಯಾ ಇತ್ಯಾದಿ. ತೋಟಗಳಲ್ಲಿ ಕೆಲಸ ಮಾಡಲು ನೀಗ್ರೋ ಗುಲಾಮರನ್ನು ಕರೆಸಿಕೊಳ್ಳಲಾಯಿತು. ರೆಡ್ ಇಂಡಿಯನ್‌ರನ್ನು ಕಾಡಿನ ಪ್ರದೇಶದ ಒಳಮೂಲೆಗಳಿಗೆ ತಳ್ಳಲಾಯಿತು. ಮೇಲೆ ಹೇಳಿದ ಹದಿಮೂರು ವಸಾಹತುಗಳೇ ಮುಂದೆ 1781ರ ಕ್ರಾಂತಿಯ ನಂತರ ಹದಿಮೂರು ರಾಜ್ಯಗಳಾದವು. ಸ್ವಾತಂತ್ರ್ಯವನ್ನು ಗಳಿಸಿದ ಮೇಲೆ

ಅಮೆರಿಕಾ ಸಂಯುಕ್ತ ಸಂಸ್ಥಾನವು ಉತ್ತರ ಅಮೆರಿಕಾ ಖಂಡದಲ್ಲಿ ವಿಸ್ತಾರವಾದ ಭೂಭಾಗಗಳನ್ನು ಯೂರೋಪಿಯನ್ ದೇಶಗಳಿಂದ ಕೊಂಡುಕೊಂಡಿತು. ಉದಾಹರಣೆಗೆ 1803ರಲ್ಲಿ ನೆಪೋಲಿಯನ್‌ನಿಂದ ಲೂಸಿಯಾನವನ್ನು ಕೊಂಡುಕೊಳ್ಳಲಾಯಿತು. ಹಾಗೆಯೇ 1819ರಲ್ಲಿ ಸ್ಪೇನ್‌ನಿಂದ ಫ್ಲಾರಿಡಾವನ್ನು, 1867ರಲ್ಲಿ ಅಲಾಸ್ಕವನ್ನು ರಷ್ಯದಿಂದಲೂ ಕೊಳ್ಳಲಾಯಿತು. ಹವಾಯ್ ದ್ವೀಪಗಳನ್ನು 1898ರಲ್ಲಿ ಸೇರಿಸಿಕೊಳ್ಳಲಾಯಿತು. 1845–46ರಲ್ಲಿ ಮೆಕ್ಸಿಕೋ ಮೇಲೆ ಯುದ್ಧ ಹೂಡಿದ ಸಂದರ್ಭದಲ್ಲಿ ಸಂಯುಕ್ತ ಸಂಸ್ಥಾನವು ಕ್ಯಾಲಿಫೋರ್ನಿಯಾ ಮತ್ತು ಅನೇಕ ಭೂಭಾಗಗಳನ್ನು ವಶಪಡಿಸಿಕೊಂಡಿತು. ಚಿನ್ನದ ನಿಕ್ಷೇಪವಿದೆ ಎಂದು ತಿಳಿದ ಪರಿಣಾಮವಾಗಿ ಅನೇಕ ಯೂರೋಪಿಯನ್ನರು ಇಲ್ಲಿಗೆ ಬಂದರು. ಹಾಗೆಯೇ ಕೈಗಾರಿಕಾ ಕ್ರಾಂತಿಯಿಂದಾಗಿಯೂ ಹಲವರು ಬಂದರು. ಏಷ್ಯಾದಿಂದಲೂ ಜನ ವಲಸೆ ಬರಲಾರಂಭಿಸಿದರು. ಕ್ರಿ.ಶ. 1900ರ ವೇಳೆಗೆ ಅಮೆರಿಕಾ ಸಂಯುಕ್ತ ಸಂಸ್ಥಾನವು ಒಂದು 'ಖಂಡ' ಶಕ್ತಿಯಾಗಿ ಬೆಳೆದು ಒಂದು ಕಡಲ ತೀರದಿಂದ ಇನ್ನೊಂದು ಕಡಲ ತೀರದವರೆಗೆ ಜನರಿಂದ ತುಂಬಿಕೊಂಡಿತು (ಪೂರ್ವದಲ್ಲಿ ಅಟ್ಲಾಂಟಿಕ್ ಸಾಗರದ ತೀರ, ಪಶ್ಚಿಮದಲ್ಲಿ ಪೆಸಿಫಿಕ್ ಸಾಗರ ತೀರ).

**ಕೆನಡಾ**

ಜಾನ್ ಕ್ಯಾಬಟ್ 1497ರಲ್ಲಿ ಪೂರ್ವ ಕೆನಡಾ ತೀರ ಪ್ರದೇಶವನ್ನು ಕಂಡುಹಿಡಿದು ಇಂಗ್ಲಿಷರ ಹಕ್ಕುಗಳನ್ನು ಸ್ಥಾಪಿಸಿದನು. ಕ್ರಿ.ಶ. 1534ರಲ್ಲಿ ಫ್ರಾನ್ಸಿನ ಕಾರ್ಟಿಯರ್ ಎಂಬಾತ ಗ್ಯಾಸ್ಪೆ ಪ್ರಸ್ಥಭೂಮಿಯಲ್ಲಿ ಶಿಲುಬೆಯನ್ನು ನೆಟ್ಟನು. ಕ್ರಿ.ಶ. 1763ರವರೆಗೆ ಕೆನಡಾದಲ್ಲಿ ಫ್ರೆಂಚರಿಗೂ ಇಂಗ್ಲಿಷರಿಗೂ ಮೇಲಾಟವಿದ್ದೇ ಇತ್ತು. 'ಏಳು ವರ್ಷಗಳ ಯುದ್ಧ'ದಲ್ಲಿ ಇಂಗ್ಲೆಂಡು ಫ್ರಾನ್ಸನ್ನು ಸೋಲಿಸಿತು. ಕ್ರಿ.ಶ. 1763ರಲ್ಲಿ 'ಪ್ಯಾರಿಸ್ ಸಂಧಾನ' ಏರ್ಪಟ್ಟು ಅದರ ಪ್ರಕಾರ ಬ್ರಿಟನ್ನಿಗೆ ಕೆನಡಾದ ಮೇಲೆ ನಿಯಂತ್ರಣ ಸಿಕ್ಕಿತು. ಕೆನಡಾದ ಅನ್ವೇಷಣೆ ಭಾರಿ ಪ್ರಮಾಣದಲ್ಲಿ ಸಾಗಿತು. ಮುಂದೆ ಬ್ರಿಟನ್ ವಿರುದ್ಧ ನಡೆದ ಅಮೆರಿಕಾ ಕ್ರಾಂತಿಯನ್ನು ವಿರೋಧಿಸಿದ ಜನ ಕೆನಡಾಕ್ಕೆ ವಲಸೆ ಬಂದರು. ಕೆನಡಾದ ಅಗಾಧ ಸಂಪನ್ಮೂಲಗಳನ್ನು ಕಂಡು ಆಕರ್ಷಿತರಾದ ಯೂರೋಪ್ ಮತ್ತು ಇತರ ಖಂಡಗಳ ಜನ ವಲಸೆ ಬರಲಾರಂಭಿಸಿದರು. ಕೆನಡಾ ಬ್ರಿಟಿಷ್ ಕಾಮನ್‌ವೆಲ್ತ್ ರಾಷ್ಟ್ರವಾಗಿ ಬ್ರಿಟಿಷ್ ಸಾಮ್ರಾಜ್ಯದಲ್ಲೇ ಉಳಿದು ವಿಕಾಸ ಹೊಂದಿತು.

**ಲ್ಯಾಟಿನ್ ಅಮೆರಿಕಾ ಅಥವಾ ದಕ್ಷಿಣ ಅಮೆರಿಕಾ**

ಸ್ಪೇನ್ ಮತ್ತು ಪೋರ್ಚುಗಲ್ ಜನರು ಹೊಸಜಗತ್ತಿನ ಈ ಭಾಗದಲ್ಲಿ ವಸಾಹತುಗಳನ್ನು ಸ್ಥಾಪಿಸಿದರು. ಇಲ್ಲಿಗೆ ಬಂದ ಸ್ಪ್ಯಾನಿಷ್ ಸಾಹಸಿಗಳು ಮತ್ತು ಅನ್ವೇಷಕರುಗಳನ್ನು ಕಾಂಕ್ವಿ ಸ್ಟಾಡೋರ್ಸ್ ಎಂದು ಕರೆಯಲಾಗಿದೆ. ಕ್ರಿ.ಶ. 1493ರಲ್ಲಿ ಅವರು ಸಾಂಟೊ ಡೊಮಿಂಗೊ ಎಂಬಲ್ಲಿ ಬಂದಿಳಿದರು. ಅವರು ವೆಸ್ಟ್ ಇಂಡೀಸ್ ದ್ವೀಪಗಳನ್ನೂ, ಉರುಗ್ವೆವರೆಗೆ ದಕ್ಷಿಣ ಅಮೆರಿಕವನ್ನೂ ಕಂಡು ಹಿಡಿದರು. ಕ್ರಿ.ಶ. 1521ರಲ್ಲಿ ಕೊರ್ಟೆಸ್ ಎಂಬುವನು ಮೆಕ್ಸಿಕೋವನ್ನು ಗೆದ್ದುಕೊಂಡನು. ಕ್ರಿ.ಶ. 1553ರಲ್ಲಿ

ಪಿಜಾರೋ ಎಂಬಾತನು ಪೆರು ಪ್ರದೇಶವನ್ನು ಸ್ಪ್ಯಾನಿಷ್ ಆಡಳಿತಕ್ಕೆ ಒಳಪಡಿಸಿದನು. ಕ್ರಿ.ಶ. 1532 ರಲ್ಲಿ ಪೋರ್ಚುಗೀಸರು ಬ್ರೆಜಿಲ್‌ನಲ್ಲಿ ವಸಾಹತನ್ನು ಸ್ಥಾಪಿಸಿದರು. ಹದಿನಾರನೆಯ ಶತಮಾನದ ಕೊನೆಯ ವೇಳೆಗೆ ದಕ್ಷಿಣ ಅಮೆರಿಕಾದ ಮಧ್ಯ ಮತ್ತು ದಕ್ಷಿಣ ಭಾಗಗಳಲ್ಲಿ ಅನೇಕ ಸ್ಪ್ಯಾನಿಷ್ ಮತ್ತು ಪೋರ್ಚುಗೀಸ್ ವಸಾಹತುಗಳು ಏಳಿಗೆ ಹೊಂದಿದವು. ಈ ವಸಾಹತುಗಳಿಂದ ಯೂರೋಪಿಗೆ ಅಪಾರ ಸಂಪತ್ತು ರವಾನೆಯಾಯಿತು.

## ಏಷ್ಯಾದಲ್ಲಿ ವಸಾಹತುಕರಣ ಮತ್ತು ಸಾಮ್ರಾಜ್ಯಶಾಹಿತ್ವ

ಏಷ್ಯಾಕ್ಕೆ ಯೂರೋಪಿಯನ್ ರಾಷ್ಟ್ರಗಳು ನುಗ್ಗಲಾರಂಭಿಸಿದ ಸಮಯದಿಂದ ಏಷ್ಯಾದಿಂದ ವಸಾಹತುಕರಣ ಮತ್ತು ಸಾಮ್ರಾಜ್ಯ ಷಾಹಿನೀತಿಯನ್ನು ಗುರುತಿಸಬಹುದು. ಕ್ರಿ.ಶ. 1498ರಲ್ಲಿ ವಾಸ್ಕೋಡಗಾಮನು ಕೇಪ್ ಆಫ್ ಗುಡ್ ಹೋಪ್ ಮೂಲಕ ಕ್ಯಾಲಿಕಟ್ಟಿಗೆ ಬಂದಿಳಿದನು. ಅಲ್ಲಿಗೆ ಒಂದು ಹೊಸ ಸಮುದ್ರ ಮಾರ್ಗವನ್ನು ಕಂಡುಹಿಡಿದಂತಾಯಿತು. ಇದರೊಂದಿಗೆ ಏಷ್ಯಾದಲ್ಲಿ 'ಗಾಮ ಯುಗ' ಅಥವಾ 'ವಸಾಹತು ಯುಗ' ಆರಂಭವಾಯಿತು. ವಸಾಹತು ಎಂದರೆ ಒಂದು ರಾಷ್ಟ್ರದ ಜನರನ್ನು ಇನ್ನೊಂದು ರಾಷ್ಟ್ರದಲ್ಲಿ ನೆಲೆಗೊಳಿಸುವುದು ಎಂದರ್ಥ. ವ್ಯಾಪಕವಾದ ಅರ್ಥದಲ್ಲಿ ಒಂದು ರಾಷ್ಟ್ರವು ಇನ್ನೊಂದು ರಾಷ್ಟ್ರದ ಮೇಲೆ ರಾಜಕೀಯ ಮತ್ತು ಆರ್ಥಿಕ ಪ್ರಭುತ್ವವನ್ನು ಸ್ಥಾಪಿಸುವುದು ಎಂದರ್ಥ. "ಸಾಮ್ರಾಜ್ಯಷಾಹಿ" ಎಂಬ ಶಬ್ದ ಹತ್ತೊಂಬತ್ತನೆಯ ಶತಮಾನದ ನಂತರ ನಡೆದ ಘಟನೆಗಳನ್ನು ಕುರಿತು ಹೇಳುವಾಗ ಬಳಸಿರುವ ಶಬ್ದವಾಗಿದೆ. ಯೂರೋಪಿಯನ್ ರಾಷ್ಟ್ರಗಳು ಹತ್ತೊಂಬತ್ತನೆಯ ಶತಮಾನದ ನಂತರ ಕೈಗಾರಿಕಾ ಕ್ರಾಂತಿಯನ್ನು ಕಂಡವು. ಅವರ ಕೈಗಾರಿಕೆಗಳಿಗೆ ಕಚ್ಚಾ ಪದಾರ್ಥಗಳು ಬೇಕಾಗಿದ್ದುವು. ಹೊಸ ವಸಾಹತುಗಳು ಕಚ್ಚಾ ಸಾಮಗ್ರಿ ಹಾಗೂ ಸಿದ್ಧ ವಸ್ತುಗಳನ್ನು ಮಾರಲು ಮಾರುಕಟ್ಟೆ ಎರಡನ್ನೂ ಒದಗಿಸಿದುವು. ಈ ಕಾರಣದಿಂದ ವಸಾಹತುಗಳ ಮೇಲೆ ರಾಜಕೀಯ ಪ್ರಾಬಲ್ಯ ಸಾಧಿಸಿ ಅವುಗಳನ್ನು ಆರ್ಥಿಕ ಶೋಷಣೆಗೆ ಒಳಪಡಿಸುವ ಕ್ರಮ ಆರಂಭವಾಯಿತು. ಧ್ವಜದ ಹಿಂದೆಯೇ ವ್ಯಾಪಾರ ಬಂದಿತು.

## ಪೋರ್ಚುಗೀಸರು

ಏಷ್ಯಾದಲ್ಲಿ ಪೋರ್ಚುಗೀಸ್ ವಿಸ್ತರಣೆಯು ಕ್ರಿ.ಶ. 1498ರಲ್ಲಿ ವಾಸ್ಕೋಡಗಾಮನು ಕ್ಯಾಲಿಕಟ್‌ಗೆ ಬಂದಿಳಿದ ದಿನದಿಂದ ಆರಂಭವಾಗುತ್ತದೆ. ಗಾಮನ ನಂತರ ಕಬ್ರಾಲ್ ಮತ್ತು ಆಲ್‌ಬುಕರ್ಕ್ ಬಂದರು. ಪೋರ್ಚುಗೀಸರು ಗೋವಾ, ದೀವ್, ದಮಣ್, ದಾಮನ್ ಸಾಲ್‌ಸೆಟ್, ಬೆಸ್ಸೀನ್, ಸಾನ್‌ತೋವೆ ಮತ್ತು ಹೂಗ್ಲಿಗಳಲ್ಲಿ ವಸಾಹತುಗಳನ್ನು ಸ್ಥಾಪಿಸಿದರು. ಹೆಚ್ಚಾಗಿ ಮೆಣಸು ಮತ್ತಿತರ ಸಂಬಾರ ಪದಾರ್ಥಗಳ ವಹಿವಾಟಿನಲ್ಲಿ ಪೋರ್ಚುಗಿಸರಿಗೆ ಆಸಕ್ತಿ ಇತ್ತು. ಆದರೆ 19ನೆಯ ಶತಮಾನದ ಹೊತ್ತಿಗೆ ವ್ಯಾಪಾರ ಲೋಕದಲ್ಲಿ ಪೋರ್ಚುಗೀಸರು ತಮ್ಮ ವರ್ಚಸ್ಸನ್ನು ಕುಗ್ಗಿಸಿಕೊಂಡಿದ್ದರು. ಸಿಲೋನಿನ ವಿಸ್ತಾರವಾದ ದ್ವೀಪವು ಪೋರ್ಚುಗೀಸರ ಪ್ರಭಾವಕ್ಕೆ ಒಳಗಾಯಿತು.

ಆಲ್‌ಬುಕರ್ಕ್‌ನ ನಾಯಕತ್ವದಲ್ಲಿ ಪೋರ್ಚುಗೀಸರು ಭಾರತಕ್ಕಿಂತ ಹೆಚ್ಚಾಗಿ

ಮಲಯಾ ಮತ್ತು ಪೆಸಿಫಿಕ್ ದ್ವೀಪಗಳ ಕಡೆಗೆ ತಮ್ಮ ಗಮನವನ್ನು ಹರಿಸಿದರು. ಸಂಬಾರ ಪದಾರ್ಥಗಳಲ್ಲಿ ಹೆಚ್ಚಿನವು ಇಂಡೋನೇಸಿಯಾ ದ್ವೀಪಗಳಿಂದಲೇ ಯೂರೋಪಿಗೆ ರಫ್ತಾಗುತ್ತಿದ್ದವು. ಮಲಕ್ಕಾವನ್ನು ಗೆದ್ದುಕೊಂಡ ಆಲ್‌ಬುಕರ್ಕ್ ಜಾವಾದ ಮೇಲೂ ಪೋರ್ಚುಗೀಸರ ಪ್ರಭಾವವನ್ನು ವಿಸ್ತರಿಸಿದನು. ಹೀಗೆ ಏಷ್ಯಾದಲ್ಲಿ ಒಂದು ಪೋರ್ಚುಗೀಸ್ ವಾಣಿಜ್ಯ ಸಾಮ್ರಾಜ್ಯವನ್ನು ಕಟ್ಟಲಾಯಿತು. ಇದು ಒಂದುನೂರು ವರ್ಷಗಳವರೆಗೆ ನಡೆಯಿತು. ಪೋರ್ಚುಗೀಸರ ಮತೀಯ ನೀತಿಯಿಂದಾಗಿ ಜನ ಅವರನ್ನು ದ್ವೇಷಿಸಲು ಆರಂಭಿಸಿದರು. ಅಲ್ಲದೆ ಪೋರ್ಚುಗೀಸರು ವ್ಯಾಪಾರದಲ್ಲಿ ತುಂಬ ಅನೀತಿಯ ಮಾರ್ಗವನ್ನು ಅನುಸರಿಸಿದ್ದರು. ಈ ಪ್ರವೃತ್ತಿ ಭಾರತದ ರಾಜರುಗಳಿಗೆ ಮತ್ತು ವರ್ತಕರಿಗೆ ಹಿಡಿಸಲಿಲ್ಲ. ಬ್ರೆಜಿಲ್‌ನ ಶೋಧ ಮತ್ತು ಕ್ರಿ.ಶ. 1580 ರಲ್ಲಿ ಸ್ಪೇನ್‌ನ ಆಡಳಿತಕ್ಕೆ ಪೋರ್ಚುಗಲ್ ಒಳಗಾದದ್ದು ಈ ಎರಡು ಕಾರಣಗಳಿಂದ ಪೋರ್ಚುಗೀಸರು ಭಾರತದ ಕಡೆ ಹೆಚ್ಚು ಗಮನ ಕೊಡಲಿಲ್ಲ. ಅಂತಿಮವಾಗಿ ಡಚ್ಚರ ಮತ್ತು ಇಂಗ್ಲಿಷರ ಆಗಮನದಿಂದ ಪೋರ್ಚುಗೀಸರು ತಮ್ಮ ಪರಮಾಧಿಕಾರವನ್ನು ಕಳೆದುಕೊಂಡರು.

**ಡಚ್ಚರು**

ಆಗ್ನೇಯ ಏಷ್ಯಾದ ಸಂಬಾರ ಪದಾರ್ಥಗಳ ಮಾರುಕಟ್ಟೆಯೊಂದಿಗೆ ನೇರ ವ್ಯವಹಾರವನ್ನು ಕುದುರಿಸಿಕೊಳ್ಳುವ ಸಲುವಾಗಿ ಹಾಲೆಂಡಿನ ಡಚ್ಚರು ಕ್ರಿ.ಶ. 1596ರಿಂದ ಹಲವಾರು ಪ್ರವಾಸಗಳನ್ನು ಕೈಕೊಂಡು ಕೊನೆಗೆ ಡಚ್ ಈಸ್ಟ್ ಇಂಡಿಯಾ ಕಂಪೆನಿಯನ್ನು ಸ್ಥಾಪಿಸಿದರು.

ಕ್ರಿ.ಶ. 1605ರಲ್ಲಿ ಡಚ್ಚರು ಪೋರ್ಚುಗೀಸರಿಂದ ಅಂಬೋಯ ದ್ವೀಪವನ್ನು ಗೆದ್ದುಕೊಂಡರು. ಕ್ರಮಕ್ರಮವಾಗಿ ಈ ಸಂಬಾರ ಪದಾರ್ಥಗಳ ದ್ವೀಪಗಳ ಮೇಲೆ ತಮ್ಮ ಹತೋಟಿಯನ್ನು ಸ್ಥಾಪಿಸಿದರು. ಪೋರ್ಚುಗೀಸರನ್ನು ನಿಧಾನವಾಗಿ ಓಡಿಸಲಾಯಿತು. ಡಚ್ಚರು ಜಕಾರ್ತವನ್ನು ಗೆದ್ದುಕೊಂಡರು. ಪತನದ ಹಾದಿಯಲ್ಲಿದ್ದ ಬಟೇವಿಯಾವನ್ನು ಕ್ರಿ.ಶ. 1619ರಲ್ಲಿ ಊರ್ಜಿತಗೊಳಿಸಿದರು. ಕ್ರಿ.ಶ. 1658ರಲ್ಲಿ ಸಿಲೋನನ್ನು ಗೆದ್ದುಕೊಂಡರು.

ಮೆಣಸು ಮತ್ತು ಸಂಬಾರ ಪದಾರ್ಥಗಳ ವ್ಯಾಪಾರ ಡಚ್ಚರನ್ನು ಭಾರತದ ಹತ್ತಿರಕ್ಕೆ ತಂದಿತು. ಕೊಚ್ಚಿ, ಮಚಲೀಪಟ್ಟಣ, ಪುಲಿಕಾಟ್, ಸೂರತ್, ಕಾರೈಕಲ್, ಚಿನ್‌ಸುರ ಮತ್ತು ನಾಗಪಟ್ಟಣಗಳಲ್ಲಿ ಡಚ್ಚರು ವಸಾಹತುಗಳನ್ನು ಸ್ಥಾಪಿಸಿದರು.

ಡಚ್ಚರು ಹದಿನೇಳನೇ ಶತಮಾನದಲ್ಲಿ ಮೆಣಸು ಮತ್ತು ಸಂಬಾರ ಪದಾರ್ಥಗಳ ವ್ಯಾಪಾರದಲ್ಲಿ ಏಕಸ್ವಾಮ್ಯವನ್ನು ಪಡೆದುಕೊಂಡಿದ್ದರು. ಅಲ್ಲದೆ ಅವರು ಭಾರತ ಮತ್ತು ಪೂರ್ವ ಏಷ್ಯಾದೇಶಗಳ ನಡುವಣ ವ್ಯಾಪಾರವನ್ನೂ ಮಾಡುತ್ತಿದ್ದರು. ಭಾರಿ ಪ್ರಮಾಣದಲ್ಲಿ ನೀಲಿ, ವಸ್ತ್ರ, ಕಚ್ಚಾ ರೇಷ್ಮೆ, ಪೆಟ್ಲುಪ್ಪು, ಅಕ್ಕಿ ಮತ್ತು ಅಫೀಮುಗಳ ರಫ್ತುಗಾರರಾಗಿದ್ದರು. ಆದರೆ ಕ್ರಿ.ಶ. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಡಚ್ಚರ ಅಧಿಕಾರ ಕ್ಷೀಣಿಸಿತು. ಇದಕ್ಕೆ ಮುಖ್ಯ ಕಾರಣ ಎಂದರೆ ಬ್ರಿಟೀಷರ ಸ್ಪರ್ಧೆ.

**ಇಂಗ್ಲಿಷರು**

ಕ್ರಿ.ಶ. 1600ರಲ್ಲಿ ಎಲಿಜಬೆತ್ ರಾಣಿಯು ಈಸ್ಟ್ ಇಂಡಿಯಾ ಕಂಪೆನಿಗೆ ಒಂದು ಸನ್ನದನ್ನು ನೀಡಿದಳು. ಅದರ ಪ್ರಕಾರ ಈ ಕಂಪನಿಯವರು ಭಾರತ ಮತ್ತು ಪೂರ್ವ ದೇಶಗಳಲ್ಲಿ ವ್ಯಾಪಾರದ ಏಕಸ್ವಾಮ್ಯವನ್ನು ಪಡೆದುಕೊಂಡರು. 1609ರಲ್ಲಿ ಈ ಕಂಪೆನಿಯು ಜಹಾಂಗೀರನ ಆಸ್ಥಾನಕ್ಕೆ ಕ್ಯಾಪ್ಟನ್ ಹಾಕಿನ್ಸ್‌ನನ್ನು ಕಳುಹಿಸಿಕೊಟ್ಟಿತು. ಈಸ್ಟ್ ಇಂಡಿಯಾ ಕಂಪೆನಿಯ ಆರಂಭದ ಕಾರ್ಖಾನೆಗಳು ಸೂರತ್, ಆಗ್ರಾ, ಅಹಮದಾಬಾದ್ ಮತ್ತು ಬ್ರೋಚ್‌ಗಳಲ್ಲಿ ಸ್ಥಾಪಿತವಾದುವು. 1668ರಲ್ಲಿ ಮುಂಬಯಿ ನಗರವನ್ನು ಈಸ್ಟ್ ಇಂಡಿಯಾ ಕಂಪೆನಿಗೆ ಕೊಡಲಾಯಿತು. ಈ ಕಂಪೆನಿಯ ಇತರ ಮುಖ್ಯ ಕೇಂದ್ರಗಳೆಂದರೆ ಮಚಲೀ ಪಟ್ಟಣ, ಮದರಾಸು, ತೆಲ್ಲಿಚೇರಿ, ಮತ್ತು ಕಲಕತ್ತೆ ಇತ್ಯಾದಿ.

ಬ್ರಿಟಿಷರು ತಮ್ಮ ರಫ್ತಿಗೆ ಹಲವಾರು ಸಾಮಗ್ರಿಗಳನ್ನು ಸೇರಿಸಿಕೊಳ್ಳುವುದರಲ್ಲಿ ಗಮನವನ್ನು ಕೇಂದ್ರೀಕರಿಸಿದ್ದರು. ಮೆಣಸು, ಸಂಬಾರ ಪದಾರ್ಥ, ನೀಲಿ, ಪೆಟ್ಲುಪ್ಪು, ವಸ್ತ್ರ, ರೇಷ್ಮೆ ಮತ್ತು ಇತರ ಅನೇಕ ವಸ್ತುಗಳು ಅವರ ರಫ್ತಿನ ಪಟ್ಟಿಯಲ್ಲಿದ್ದವು. ಭಾರತವೇ ಅಲ್ಲದೆ ಮಲಯ, ಬರ್ಮ, ಸಿಂಗಪೂರ್‌ಗಳಲ್ಲಿಯೂ ಅವರ ವಸಾಹತುಗಳು ಇದ್ದವು. ಚೈನಾ ದೇಶದಲ್ಲಿಯೂ ಅವರ ವ್ಯಾಪಾರ ಮಳಿಗೆಗಳು ಇದ್ದವು. ಅಲ್ಲಿ ಅವರಿಗೆ ಅನೇಕ ಸವಲತ್ತುಗಳು ಇದ್ದವು.

**ಫ್ರೆಂಚರು**

ಏಷ್ಯನ್ ದೇಶಗಳಲ್ಲಿ ವಾಣಿಜ್ಯ ಲಾಭಕ್ಕಾಗಿ ಸ್ಪರ್ಧಿಸಿದ ಅನೇಕ ಯೂರೋಪಿಯನ್ ರಾಜ್ಯಗಳಲ್ಲಿ ಫ್ರೆಂಚರೇ ಕೊನೆಯವರಾಗಿದ್ದರು. 1664ರಲ್ಲಿ ಒಂದು ಕಂಪೆನಿಯನ್ನು ಹುಟ್ಟುಹಾಕಿ ಸರಕಾರವೇ ಆರ್ಥಿಕ ಹೊರೆಯನ್ನು ಹೊತ್ತುಕೊಂಡಿತು. ಮೊದಲು ಫ್ರೆಂಚ್ ಕಾರ್ಖಾನೆಯನ್ನು ಕ್ರಿ.ಶ. 1668ರಲ್ಲಿ ಸೂರತ್‌ನಲ್ಲಿ ಆರಂಭಿಸಲಾಯಿತು. 1669 ರಲ್ಲಿ ಮಚಲಿ ಪಟ್ಟಣದಲ್ಲಿ ಒಂದು ಫ್ರೆಂಚ್ ಕಾರ್ಖಾನೆ ಕಾರ್ಯಾರಂಭ ಮಾಡಿತು. 1672ರಲ್ಲಿ ಫ್ರೆಂಚರು ಮದರಾಸಿನ ಸ್ಯಾನ್‌ಥೊಮೆಯನ್ನು ವಶಪಡಿಸಿಕೊಂಡರು. ತುಂಬ ಮಹತ್ವದ ಫ್ರೆಂಚ್ ವಸಾಹತು ಎಂದರೆ ಪಾಂಡಿಚೆರಿ. 1674ರಲ್ಲಿ ಬಂಗಾಳದಲ್ಲಿ ನವಾಬ ಷಯಿಸ್ತಾಖಾನನು ಫ್ರೆಂಚರಿಗೆ ಒಂದು ನಿವೇಶನವನ್ನು ನೀಡಿದನು. 1690–92ರಲ್ಲಿ ಫ್ರೆಂಚರು ಇಲ್ಲಿ ಚಂದ್ರನಾಗೂರ್ ವಸಾಹತನ್ನು ಸ್ಥಾಪಿಸಿದರು.

ಫ್ರೆಂಚ್ ಮತ್ತು ಇಂಗ್ಲಿಷ್ ರಾಜ್ಯಗಳ ನಡುವಣ ಕದನದಲ್ಲಿ ಡಚ್ಚರು ಇಂಗ್ಲಿಷರ ಬೆಂಬಲಕ್ಕೆ ನಿಂತರು. 1663ರಲ್ಲಿ ಡಚ್ಚರು ಪಾಂಡಿಚೆರಿಯನ್ನು ವಶಪಡಿಸಿಕೊಂಡರು. ಆದರೆ ಮುಂದೆ 1697ರ ರಿಸ್ವಿಕ್ ಸಂಧಾನದ ಫಲವಾಗಿ ಫ್ರೆಂಚ್‌ರಿಗೆ ಹಿಂದಿರುಗಿಸಿದರು. ಪಾಂಡಿಚೆರಿಯ ಆಗಿನ ಜನಸಂಖ್ಯೆ ನಲವತ್ತು ಸಾವಿರವಾಗಿತ್ತು.

1723ರಲ್ಲಿ ಫ್ರೆಂಚರು ಮಲಬಾರ್ ತೀರದ ಮಾಹೆ ದ್ವೀಪವನ್ನು ವಶಪಡಿಸಿಕೊಂಡರು. 1739ರಲ್ಲಿ ಕೋರಮಂಡಲ್ ತೀರದಲ್ಲಿ ಕಾರೈಕಲ್ ಅನ್ನು ಗೆದ್ದುಕೊಂಡರು. ಫ್ರೆಂಚರು ಇಂಡೋಚೈನಾದ ಮೇಲೂ ಗಮನವನ್ನು ಕೇಂದ್ರೀಕರಿಸಿದರು. ಈ ಅವಧಿಯುದ್ದಕ್ಕೂ ಇಂಡೋಚೈನಾ ಫ್ರೆಂಚರ ಅಧೀನದಲ್ಲಿತ್ತು. ಆರಂಭದಲ್ಲಿ ಕೇವಲ

ವ್ಯಾಪಾರಕ್ಕೆಂದೇ ಬಂದದ್ದೇನೋ ನಿಜ. ಆದರೆ ಸ್ವಲ್ಪ ಕಾಲದಲ್ಲೇ ಅವರು ರಾಜಕೀಯ ಮಹತ್ವಾಕಾಂಕ್ಷೆಗಳನ್ನು ಉಳ್ಳವರಾದರು. ಡೂಪ್ಲೆಯ ಕಾಲದಲ್ಲಿ ಭಾರತದಲ್ಲಿ ಒಂದು ಫ್ರೆಂಚ್ ಸಾಮ್ರಾಜ್ಯವನ್ನು ಸ್ಥಾಪಿಸುವ ಹವಣಿಕೆಯನ್ನು ಹಾಕಿಕೊಂಡಿದ್ದರು. ಇದರಿಂದ ಸಹಜವಾಗಿ ಇಂಗ್ಲಿಷರ ಮತ್ತು ಫ್ರೆಂಚರ ನಡುವೆ ಘರ್ಷಣೆ ಅನಿವಾರ್ಯವಾಯಿತು.

## ಇಂಗ್ಲಿಷ್ – ಫ್ರೆಂಚರ ನಡುವಣ ಪೈಪೋಟಿ

ಫ್ರೆಂಚರು ಮತ್ತು ಇಂಗ್ಲಿಷರು ದಕ್ಷಿಣ ಭಾರತದಲ್ಲಿ ಮೂರು ಮುಖ್ಯ ಯುದ್ಧಗಳನ್ನು ಮಾಡಿದರು. ಅವು ಕ್ರಮವಾಗಿ ಹೀಗಿವೆ:

1. ಪ್ರಥಮ ಕರ್ನಾಟಕ ಯುದ್ಧ 1740–1748.
2. ಎರಡನೆ ಕರ್ನಾಟಕ ಯುದ್ಧ 1749–1754.
3. ಮೂರನೇ ಕರ್ನಾಟಕ ಯುದ್ಧ 1756–1763.

ಮೊದಲ ಎರಡು ಯುದ್ಧಗಳಲ್ಲಿ ಫ್ರೆಂಚರ ಕೈ ಮೇಲಾಗಿದ್ದರೂ ಮೂರನೇ ಯುದ್ಧದಲ್ಲಿ ಬ್ರಿಟಿಷರು ಅಂತಿಮ ವಿಜಯವನ್ನು ಸಾಧಿಸಿದರು.

## ಬ್ರಿಟಿಷ್ ಪ್ರಾಬಲ್ಯ

1757ರ ಪ್ಲಾಸಿ ಕದನದ ನಂತರ ಬ್ರಿಟಿಷರು ಬಂಗಾಳ ಪ್ರಾಂತ್ಯದ ಅಧಿಪತಿಗಳಾದರು. ಅವರು ಬಂಗಾಳ, ಬಿಹಾರ, ಒರಿಸ್ಸಾಗಳ ವಿಸ್ತಾರ ಪ್ರದೇಶವನ್ನು ಆಳಲು ಆರಂಭಿಸಿ ಭೂಕಂದಾಯ ವಸೂಲಿ ಮಾಡುತ್ತಿದ್ದರು. ದಕ್ಷಿಣದಲ್ಲಿ 18ನೇ ಶತಮಾನದ ಕೊನೆಯ ಭಾಗದಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಬ್ರಿಟಿಷರ ವಿರುದ್ಧ ಹೋರಾಡಿದರು. ಆದರೆ 1799ರಲ್ಲಿ ಟಿಪ್ಪುವು ಸೋತು ನಿಧನ ಹೊಂದಿದಾಗ ಬ್ರಿಟಿಷರು ವಾಸ್ತವವಾಗಿ ಅಖಿಲ ಭಾರತದ ಅಧಿಪತಿಗಳಾಗಿ ಉಳಿದರು.

## ಏಷ್ಯಾದಲ್ಲಿ ಸಾಮ್ರಾಜ್ಯಷಾಹಿತ್ವದ ಸ್ವರೂಪ

ಭಾರತ, ಬರ್ಮಾ, ಮಲಯ, ಇಂಡೋಚೈನಾ, ಇಂಡೋನೇಸಿಯಾ ಮತ್ತು ಫಿಲಿಪೈನ್ಸ್‌ಗಳಲ್ಲಿ ಸಾಮ್ರಾಜ್ಯಷಾಹಿತ್ವ ಒಂದು ಬಗೆಯದು. ಸಾರ್ವಭೌಮ ರಾಷ್ಟ್ರಗಳು ತಮ್ಮ ರಾಜಕೀಯ ಹಾಗೂ ಆರ್ಥಿಕ ಪ್ರಾಬಲ್ಯಗಳ ರೂಪದಲ್ಲಿ ಸಾಮ್ರಾಜ್ಯಷಾಹಿತ್ವವನ್ನು ಪ್ರಕಟಗೊಳಿಸಿದುವು. ಚೈನಾ ದೇಶವು ಹಲವಾರು ಪ್ರಭಾವ ವಲಯಗಳಾಗಿ ವಿಭಜನೆಗೊಂಡು ಎಲ್ಲಾ ಪ್ರಧಾನ ಯೂರೋಪಿಯನ್ ಶಕ್ತಿಗಳ ಸ್ವಾಧೀನದಲ್ಲಿತ್ತು.

ಮೊದಲಿಗೆ ಸಾರ್ವಭೌಮ ರಾಷ್ಟ್ರಗಳು ವ್ಯಾಪಾರದ ಲಾಭ ಪಡೆದು ತಮ್ಮ ಸಂಪತ್ತನ್ನು ಹೆಚ್ಚಿಸಿಕೊಂಡವು. ಆದರೆ ಅವು ರಾಜ್ಯಗಳನ್ನು ಗೆಲ್ಲುತ್ತ ಬಂದಂತೆಲ್ಲ ಅಧೀನ ರಾಜ್ಯಗಳಿಂದ ಕಂದಾಯ ವಸೂಲಿಗೆ ಆರಂಭಿಸಿದುವು. ಬರಿಯ ಭೂ ಕಂದಾಯವೇ ಅಲ್ಲದೆ ಬಗೆ ಬಗೆಯ ತೆರಿಗೆಗಳನ್ನು ಹಾಕಿದುದರಿಂದ ಸಾಮಾನ್ಯ ರೈತಾಪಿ ಜನರಿಗೆ ತುಂಬ ತೊಂದರೆಯಾಯಿತು.

ಕಚ್ಚಾ ಪದಾರ್ಥಗಳ ನಿರಂತರ ಪೂರೈಕೆಯನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಸಾರ್ವಭೌಮ ರಾಷ್ಟ್ರಗಳು ವಾಣಿಜ್ಯ ಬೆಳೆಗಳನ್ನೂ, ಪ್ಲಾಂಟೇಷನ್ ಸ್ಥಾಪನೆಯನ್ನೂ,

ಪ್ರೋತ್ಸಾಹಿಸಿದವು. ರೈಲು ಮಾರ್ಗವನ್ನು ಆರಂಭಿಸಲಾಯಿತು. ಇವು ಬಂದರಿಗೆ ಬರುವಂತೆ ಮಾಡಲಾಯಿತು. ಇದರಿಂದ ಕಚ್ಚಾ ಪದಾರ್ಥಗಳನ್ನು ಹಡಗಿಗೆ ತುಂಬಿಸಲು ಅನುಕೂಲವಾಯಿತು. ಅಲ್ಲದೆ ಇದರಿಂದಾಗಿ ಯೂರೋಪಿಯನ್ ವರ್ತಕರು ತಮ್ಮ ಸರಕುಗಳನ್ನು ದೇಶದ ಮೂಲೆ ಮೂಲೆಗಳಿಗೂ ಒಯ್ದು ಮಾರಾಟ ಮಾಡಲು ಅನುಕೂಲವಾಯಿತು.

ಸಾರ್ವಭೌಮ ರಾಷ್ಟ್ರಗಳು ಏಷ್ಯಾ ದೇಶಗಳಲ್ಲಿ ಕೈಗಾರಿಕೆಯ ಬೆಳವಣಿಗೆಯನ್ನು ಪ್ರೋತ್ಸಾಹಿಸಲಿಲ್ಲ – ಬಹಳ ಮಟ್ಟಿಗೆ ಏಷ್ಯಾದ ಈ ವಸಾಹತುಗಳನ್ನು ಬರಿಯ ಕೃಷಿ ದೇಶಗಳನ್ನಾಗಿ ಉಳಿಸಲಾಯಿತು. ಇವು ತಮಗೆ ಕಚ್ಚಾ ಪದಾರ್ಥಗಳನ್ನು ಸದಾ ಸರಬರಾಜು ಮಾಡುವಂತೆ ಪ್ರೇರಿಸುವುದೇ ಈ ರಾಷ್ಟ್ರಗಳ ಉದ್ದೇಶವಾಗಿತ್ತು. ಹೀಗೆ ಏಷ್ಯನ್ ದೇಶಗಳಲ್ಲಿ ಜನತೆಯನ್ನು ಶೋಷಿಸಲಾಯಿತು. ಈ ಶೋಷಣೆ ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ನಡೆಯಿತು.

## ಸಾಮ್ರಾಜ್ಯಷಾಹಿತ್ವದ ವಿರುದ್ಧ ಪ್ರತಿಕ್ರಿಯೆ

ಅನೇಕ ಏಷ್ಯನ್ ರಾಜ್ಯಗಳಲ್ಲಿ ರಾಷ್ಟ್ರೀಯ ಆಂದೋಲನಗಳು ನಡೆಯಲಾರಂಭವಾಯಿತು. ವಿದೇಶೀ ನೊಗವನ್ನು ಕಿತ್ತೊಗೆಯುವುದೇ ಈ ಆಂದೋಲನಗಳ ಆಶಯವಾಗಿತ್ತು. ಏಷ್ಯದ ಮಧ್ಯಮವರ್ಗದ ಪಾಶ್ಚಾತ್ಯ ಶಿಕ್ಷಣ ಪಡೆದ ಜನರ ನೇತೃತ್ವದಲ್ಲೇ ಆಂದೋಲನಗಳು ಆರಂಭಗೊಂಡವು. ಮಹಾತ್ಮಾ ಗಾಂಧಿ (ಭಾರತ) ಸನ್ಯಾತ್ ಸೇನ್ (ಚೈನಾ) ಹೋಚಿಮಿನ್ (ವಿಯೆಟ್ನಾಂ) ಡಾ. ಸುಕರ್ನೋ (ಇಂಡೋನೇಷಿಯಾ) ಮೊದಲಾದವರು ಸಾಮ್ರಾಜ್ಯಷಾಹಿತ್ವವನ್ನೆ ವಿರೋಧಿಸಿದ ನಾಯಕರುಗಳಲ್ಲಿ ಕೆಲವರು. ಸಾರ್ವಭೌಮರ ಶೋಷಣೆಯಿಂದಾಗಿ ಅನೇಕ ದೇಶಗಳಲ್ಲಿ ರೈತರ, ಗುಡ್ಡಗಾಡು ಜನರ ಮತ್ತು ಕಾರ್ಮಿಕರ ಹೋರಾಟ ಆರಂಭಗೊಂಡಿತು. 20ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಏಷ್ಯದ ಬಹುತೇಕ ರಾಷ್ಟ್ರಗಳೆಲ್ಲ ಸ್ವತಂತ್ರವಾಗಿದ್ದವು.

## ಅಭ್ಯಾಸ

**I. ಕೆಳಕಂಡ ಪ್ರಶ್ನೆಗಳನ್ನು ಉತ್ತರಿಸಿ.**

1. ವಸಾಹತುಕರಣ ಎಂದರೇನು ?
2. ಏಷ್ಯಾದಲ್ಲಿ ಪೋರ್ಚುಗೀಸರ ಮತ್ತು ಡಚ್ಚರ ಚಟುವಟಿಕೆಗಳನ್ನು ಸಂಗ್ರಹಿಸಿ ಬರೆಯಿರಿ.
3. ಸಾರ್ವಭೌಮತ್ವದ ಸ್ವರೂಪವನ್ನು ವಿವರಿಸಿ.

**II. ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಪೋರ್ಚುಗೀಸರು | ಕಲ್ಕತ್ತ |
| 2. ಫ್ರೆಂಚರು | ಇಂಡೋನೇಷಿಯಾ |

3. ಬ್ರಿಟಿಷರು ಗೋವಾ
4. ಡಚ್ಚರು ಇಂಡೋಚೀನಾ

**III. ಭರ್ತಿ ಮಾಡಿ.**

1. ಭಾರತದಲ್ಲಿ ವಾಸ್ಕೋಡಗಾಮನು ಮೊದಲು ಬಂದು ಇಳಿದದ್ದು........
2. ಈಸ್ಟ್ ಇಂಡಿಯ ಕಂಪೆನಿಯು ಹಾಕಿನ್ಸ್‌ನನ್ನು......... ಆಸ್ಥಾನಕ್ಕೆ ಕಳುಹಿಸಿತ್ತು.
3. ಫ್ರೆಂಚರು ಸ್ಯಾನ್‌ಥೋಮಿಗೆ ಕ್ರಿ.ಶ. ......... ರಲ್ಲಿ ಮುತ್ತಿಗೆ ಹಾಕಿದರು.

## ಕೈಗಾರಿಕಾ ಕ್ರಾಂತಿ

ಕ್ರಿ.ಶ. 1750 ರಿಂದ ಕೈಗಾರಿಕಾ ಕ್ರಾಂತಿಯ ಆರಂಭವನ್ನು ಗುರುತಿಸಬಹುದು. ಅಲ್ಪಾವಧಿಯಲ್ಲೇ ಇಂಗ್ಲೆಂಡಿನಲ್ಲಿ ಭಾರಿ ಸಂಖ್ಯೆಯ ಹೊಸ ಯಂತ್ರಗಳ ಸೃಷ್ಟಿಯಾಯಿತು. ಇದರಿಂದ ಸಾಗಾಣಿಕೆ ಮತ್ತು ಸಂಪರ್ಕಗಳ ಕ್ಷೇತ್ರದಲ್ಲೂ ಪ್ರಗತಿ ಕಂಡುಬಂದಿತು. ಹೀಗಾಗಿ ಹೆಚ್ಚು ಹೆಚ್ಚು ವಸ್ತುಗಳನ್ನು ಕಡಿಮೆ ಬೆಲೆಯಲ್ಲಿ ತಯಾರಿಸಿ ಹೆಚ್ಚು ಲಾಭ ಗಳಿಸಲು ಅವಕಾಶವಾಯಿತು. ಈ ಲಾಭವನ್ನು ಗಮನಿಸಿ ಶ್ರೀಮಂತರು ಬಂಡವಾಳ ಹೂಡಿ ದೊಡ್ಡ ಪ್ರಮಾಣದಲ್ಲಿ ಉತ್ಪಾದನೆ ಮಾಡಲಾರಂಭಿಸಿದರು. ಕಾರ್ಖಾನೆ ಪದ್ಧತಿ ಶುರುವಾಗಿ ಅನೇಕ ಕೈಗಾರಿಕಾ ನಗರಗಳು ಹುಟ್ಟಿಕೊಂಡವು. ಈ ಬದಲಾವಣೆಗಳು ಕ್ಷಿಪ್ರಗತಿಯಲ್ಲಿ ಕ್ರಾಂತಿಕಾರಕವಾಗಿ ನಡೆದದ್ದರಿಂದ 'ಕೈಗಾರಿಕಾ ಕ್ರಾಂತಿ' ಎಂದು ಈ ಅವಧಿಯನ್ನು ಗುರುತಿಸಲಾಗಿದೆ. ಇಂಗ್ಲೆಂಡಿನ ಈ ಕೈಗಾರಿಕಾ ಕ್ರಾಂತಿಯ ಮುಖ್ಯ ಅಂಶಗಳನ್ನೂ ಮತ್ತು ಅದು ಇತರ ರಾಷ್ಟ್ರಗಳಿಗೆ ಹರಡಿದ ಬಗೆಯನ್ನೂ ಪರಿಶೀಲಿಸೋಣ.

**ಆರ್ಥಿಕ ಹಿನ್ನೆಲೆ**

ಪೂರ್ವ ಮತ್ತು ಪಶ್ಚಿಮಗಳೊಂದಿಗೆ ಸಮುದ್ರ ವ್ಯಾಪಾರ ಬೆಳೆದ ಪರಿಣಾಮವಾಗಿ ಯೂರೋಪು ಏಳಿಗೆ ಹೊಂದಿತು. ಇದರಿಂದ ಬಹು ವ್ಯಾಪಕವಾದ ಆರ್ಥಿಕ ಬದಲಾವಣೆಗಳಾದವು. ವಸಾಹತುಗಳೊಂದಿಗೆ ವ್ಯವಹಾರ ಆರಂಭವಾದುದರ ಪರಿಣಾಮವಾಗಿ ವಸ್ತುಗಳ ಆಮದು ಮತ್ತು ರಫ್ತು ಭಾರಿ ಪ್ರಮಾಣದಲ್ಲಿ ನಡೆಯಲು ಪ್ರಚೋದನೆ ದೊರಕಿತು. ಉಣ್ಣೆ, ಪಿಂಗಾಣಿ ಪಾತ್ರೆಗಳು, ಗೃಹೋಪಕರಣಗಳು, ಗಾಜು, ಪಾದರಕ್ಷೆಗಳು, ಕಬ್ಬಿಣದ ಸಾಮಗ್ರಿ, ಮೆಣಸು, ತಂಬಾಕು, ಚರ್ಮದ ವಸ್ತುಗಳು, ಚಿನ್ನ, ಬೆಳ್ಳಿ ಇತ್ಯಾದಿಗಳಿಗೆ ಭಾರಿ ಬೇಡಿಕೆ ಉಂಟಾಯಿತು. ವಸಾಹತು ರಾಜ್ಯಗಳಿಂದ ಇವುಗಳನ್ನು ಇಂಗ್ಲೆಂಡಿಗೆ ಮತ್ತು ಇತರ ಯೂರೋಪಿಯನ್ ರಾಷ್ಟ್ರಗಳಿಗೆ ಆಮದು ಮಾಡಿಕೊಳ್ಳಲು ಆರಂಭವಾಯಿತು. ಇದರಿಂದಾಗಿ ವ್ಯವಹಾರದಲ್ಲಿ ಪೈಪೋಟಿ ನಡೆದು ಯೂರೋಪಿನ ರಾಷ್ಟ್ರಗಳ ಪೈಕಿ ಇಂಗ್ಲೆಂಡು ಮೇಲ್ಮೆಯನ್ನು ಸಾಧಿಸಿತು. ಇಂಗ್ಲೆಂಡಿಗೆ ಕಚ್ಚಾ ಸಾಮಗ್ರಿಗಳ ಸತತ ಪೂರೈಕೆಯ ಭರವಸೆ ದೊರೆಯಿತು. ಊಳಿಗಮಾನ್ಯ ಪದ್ಧತಿ (ಫ್ಯೂಡಲಿಸಂ) ಪತನ ಹೊಂದಿದ್ದುದರಿಂದ ಜನರು ಹೊಸ ಉದ್ಯೋಗವನ್ನರಸಿ ಪಟ್ಟಣಗಳಿಗೆ ಬರಲಾರಂಭಿಸಿದರು. ಇದರಿಂದ ದೊಡ್ಡ ಪ್ರಮಾಣದಲ್ಲಿ ಶ್ರಮಿಕ ವರ್ಗ ಸಿಗುವುದು

ಸಾಧ್ಯವಾಯಿತು. ಇಂಗ್ಲೆಂಡಿನಲ್ಲಿ ಕಬ್ಬಿಣ, ಕಲ್ಲಿದ್ದಲು ಮೊದಲಾದ ಪ್ರಾಕೃತಿಕ ಸಾಮಗ್ರಿಗಳು ಯಥೇಚ್ಛವಾಗಿದ್ದವು. ಅಲ್ಲದೆ ಇಂಗ್ಲೆಂಡು ತನ್ನ ನೌಕಾ ಕೈಗಾರಿಕೆಯನ್ನು ಉತ್ತಮಗೊಳಿಸಿಕೊಂಡಿತ್ತು. ಇದರಿಂದ ಉತ್ಪಾದನೆಗಳ ಸಾಗರೋತ್ತರ ಸಾಗಾಣಿಕೆಗೆ ತುಂಬ ಸಹಾಯವಾಯಿತು. ಇಂಗ್ಲಿಷ್ ವ್ಯಾಪಾರಿಗಳು ಆಗಲೇ ಭಾರಿ ಲಾಭವನ್ನು ಗಳಿಸಿದ್ದರು. ಈ ಸಂಪತ್ತನ್ನು ಅವರು ಕೈಗಾರಿಕೆಗಳಲ್ಲಿ ಬಂಡವಾಳವಾಗಿ ಹೂಡಿದರು. ಎಲ್ಲಕ್ಕಿಂತ ಹೆಚ್ಚಾಗಿ ಬೇರೆ ಯೂರೋಪಿಯನ್ ದೇಶಗಳಲ್ಲಿ ಕಾಣ ಬರದ ಸುಭದ್ರ ರಾಜಕೀಯ ವ್ಯವಸ್ಥೆ ಇಂಗ್ಲೆಂಡಿನಲ್ಲಿತ್ತು.

## ವೈಜ್ಞಾನಿಕ ಶೋಧಗಳು ಮತ್ತು ತಂತ್ರ ವಿಜ್ಞಾನ

ಮೊದ ಮೊದಲ ಶೋಧನೆಗಳೆಲ್ಲ ವಸ್ತುಗಳ ಉತ್ಪಾದನೆಯನ್ನು ಸುಧಾರಿಸುವ ಸಂಶೋಧನೆಗಳಾಗಿದ್ದವು. 'ಫ್ಲೈಯಿಂಗ್ ಷಟಲ್' ಎಂದು ಕರೆಯಲಾಗಿರುವ ಸುಧಾರಿತ ಮಗ್ಗದ ಯಂತ್ರವನ್ನು 1733ರಲ್ಲಿ ಜಾನ್ ಕೇ ಎಂಬಾತನು ಸೃಷ್ಟಿಸಿದನು. 1764ರಲ್ಲಿ ಜೇಮ್ಸ್ ಹಾರ್‌ಗ್ರೀವ್ಸನು ಸ್ಪಿನಿಂಗ್ ಜೆನ್ನಿಯನ್ನು ತಯಾರಿಸಿದನು. ಇದರಿಂದ ವೇಗವಾಗಿ ನೂಲುವುದು ಸಾಧ್ಯವಾಯಿತು. ಮುಂದೆ 1769ರಲ್ಲಿ ರಿಚರ್ಡ್ ಆರ್ಕ್‌ರೈಟ್ ಎಂಬಾತನು ತಯಾರಿಸಿದ 'ವಾಟರ್ ಫ್ರೇಮ್' ಮಗ್ಗದಲ್ಲಿ ಇನ್ನೂ ಹೆಚ್ಚಿನ ಸುಧಾರಣೆಯನ್ನು ತಂದಿತು. ಅನಂತರ ಸ್ಯಾಮ್ಯುಯೆಲ್ ಕ್ರಾಂಪ್ಟನ್ನನ 'ಮ್ಯೂಲ್' (1799)ಎಂಬ ಯಂತ್ರವು ಇನ್ನೂರು ಜನ ಕೈಯಲ್ಲಿ ನೂಲಬಹುದಾದಷ್ಟು ಪ್ರಮಾಣದ ಸಾಧನೆಯನ್ನು ತೋರಿತು. ಕಚ್ಚಾ ಹತ್ತಿಯಿಂದ ಕಾಳನ್ನು ಬೇರ್ಪಡಿಸುವ ಸಲುವಾಗಿ ಎಲಿ ವಿಟ್ನೆ ಎಂಬಾತನು 1793ರಲ್ಲಿ 'ಕಾಟನ್ ಜಿನ್' ಯಂತ್ರವನ್ನು ತಯಾರಿಸಿದನು. ಕಾರ್ಟ್‌ರೈಟ್ ಎಂಬಾತನು ವಿದ್ಯುತ್‌ಚಾಲಿತ ಮಗ್ಗವನ್ನು ತಯಾರಿಸಿದನು. ಎಲಿಯಾಸ್ ಹೊವ್ ಎಂಬಾತನು 1846ರಲ್ಲಿ ಹೊಲಿಗೆ ಯಂತ್ರವನ್ನು ಕಂಡುಹಿಡಿದದ್ದು ವಸ್ತುಗಳ ಉತ್ಪಾದನೆಯ ಪ್ರಮಾಣವನ್ನು ಹೆಚ್ಚಿಸಿತು.

ಜೇಮ್ಸ್ ವ್ಯಾಟನು ಉಗಿಯ ಯಂತ್ರವನ್ನು 1765ರಲ್ಲಿ ನಿರ್ಮಿಸಿದ್ದರಿಂದ ಸಾಗಾಣಿಕೆ ಮತ್ತು ಕೈಗಾರಿಕೆಗಳ ಲೋಕದಲ್ಲಿ ಕ್ರಾಂತಿಕಾರಕ ಬದಲಾವಣೆಗಳಾದವು. ವ್ಯಾಟನ ಉಗಿ ಯಂತ್ರವನ್ನು ವಾಹನ ಚಾಲನೆಗೆ ಬಳಸಲು ಸಾಧ್ಯವಾಯಿತು. ಜಾರ್ಜ್ ಸ್ಟೀಫೆನ್‌ಸನ್ 1844ರಲ್ಲಿ ಪ್ರಥಮ ಶಕ್ತಿಚಾಲಿತ ವಾಹನವನ್ನು ಸಿದ್ಧಪಡಿಸಿದನು. ಉಗಿ ನೌಕಾಯಂತ್ರವನ್ನು ಕಂಡುಹಿಡಿದದ್ದು ಜಲ ಸಾಗಾಣಿಕೆಯಲ್ಲಿ ಇನ್ನೊಂದು ಮಹತ್ವದ ಸುಧಾರಣೆಯಾಗಿತ್ತು.

## ಕಾರ್ಖಾನೆ ಪದ್ಧತಿ – ಬಂಡವಾಳ ಮತ್ತು ಶ್ರಮಿಕರು

ತಾಂತ್ರಿಕ ಸುಧಾರಣೆಗಳಿಂದಾಗಿ ಆಧುನಿಕ ಗಿರಣಿ ವ್ಯವಸ್ಥೆಗಳು ರೂಪುಗೊಂಡವು. ಆಧುನಿಕ ಕಾರ್ಖಾನೆಗಳಲ್ಲಿ ಕೆಲವರ ಮೇಲ್ವಿಚಾರಣೆಯಲ್ಲಿ ಅನೇಕ ಸಂಖ್ಯೆಯ ಶ್ರಮಿಕರು ಯಂತ್ರ ಚಾಲನೆಯ ಕಾರ್ಯದಲ್ಲಿ ನೆರವಾಗುತ್ತಿದ್ದರು. ಹಿಂದಿನ ಪರಂಪರೆಯ ಪದ್ಧತಿಯಲ್ಲಿ ಒಬ್ಬನೇ ಕುಶಲಕರ್ಮಿ ಸಮಗ್ರ ವಸ್ತುವನ್ನು ಉತ್ಪಾದಿಸಬೇಕಾಗಿತ್ತು. ಆದರೆ ಆಧುನಿಕ ಕಾರಖಾನೆಯಲ್ಲಿ ಒಬ್ಬ ಕೆಲಸಗಾರನಿಗೆ ಈ ಶ್ರಮವಿರುತ್ತಿರಲಿಲ್ಲ. ಒಬ್ಬೊಬ್ಬನೂ

ಉತ್ಪಾದನೆಯ ಒಂದೊಂದು ಭಾಗವನ್ನು ತಯಾರಿಸುತ್ತಿದ್ದನು. ಹೀಗಾಗಿ 'ಕಾರ್ಯವಿಭಜನೆ'ಯ ವ್ಯವಸ್ಥೆ ಉಂಟಾಯಿತು.

ಆಧುನಿಕ ಕಾರ್ಖಾನೆಗಳಲ್ಲಿ ಬಂಡವಾಳವು ಪ್ರಮುಖ ಭಾಗವಾಗಿತ್ತು. ಧನಿಕ ವರ್ತಕರು ಮತ್ತು ಲೇವಾದೇವಿಗಾರರು, ಕೈಗಾರಿಕೆಗಳಲ್ಲಿ ಭಾರಿ ಮೊತ್ತವನ್ನು ಹೂಡಲು ಆರಂಭಿಸಿದರು. ಹೀಗೆ ಆಧುನಿಕ ಬಂಡವಾಳಗಾರರ ಒಂದು ವರ್ಗ ಹುಟ್ಟಿಕೊಂಡಿತು. ಉದ್ಯಮಗಳು ಹೆಚ್ಚಾಗುತ್ತ ಬಂದಂತೆಲ್ಲ ಮಾಲೀಕ – ಕಾರ್ಮಿಕ ವರ್ಗಗಳ ನಡುವೆ ಸಂಬಂಧ ಹದಗೆಡುತ್ತ ಬಂದಿತು. ಆರಂಭಕಾಲದ ಕೈಗಾರಿಕೋದ್ಯಮಗಳಲ್ಲಿ ಕೆಲಸಗಾರರಿಗೆ ಇದ್ದ ಅನುಕೂಲಗಳು ತುಂಬ ಕಡಿಮೆ. ಸಂಬಳ ಕಡಿಮೆಯಾಗಿತ್ತು. ಕೆಲಸದ ಅವಧಿ ದೀರ್ಘಕಾಲದ್ದಾಗಿರುತ್ತಿತ್ತು. ರಜಾ ದಿನಗಳಾಗಲಿ, ವಿಶ್ರಾಂತಿ ಎಂಬುದಾಗಲಿ ಇರುತ್ತಿರಲಿಲ್ಲ. ಅಪಾಯಕರ ಯಂತ್ರಗಳನ್ನು ನಡೆಸುವವರಿಗೆ ಯಾವುದೇ ರಕ್ಷಣೆ ಇರಲಿಲ್ಲ. ಉದ್ಯೋಗಿಗಳಿಗೆ ವಸತಿ ಸೌಕರ್ಯವನ್ನಾಗಲಿ, ವೈದ್ಯಕೀಯ ಸೌಲಭ್ಯವನ್ನಾಗಲಿ ಒದಗಿಸಿರಲಿಲ್ಲ.

**ಕೃಷಿ ಕ್ಷೇತ್ರದಲ್ಲಿ ಪ್ರಗತಿ**

ಕೈಗಾರಿಕಾ ಕ್ರಾಂತಿಯು ಕೃಷಿ ಕ್ಷೇತ್ರದ ವಿಕಾಸಕ್ಕೂ ಕಾರಣವಾಯಿತು. ಕೃಷಿ ಕ್ಷೇತ್ರದಲ್ಲಿ ಹೊಸ ಹೊಸ ಯಂತ್ರಗಳ ಬಳಕೆ, ಹೊಸ ಬೆಳೆಗಳ ವ್ಯವಸಾಯ, ಬಂಜರು ಭೂಮಿಯನ್ನು ಬಳಸಿಕೊಳ್ಳುವ ಬಗೆ, ಗೊಬ್ಬರಗಳ ಬಳಕೆ, ತಳಿ ಅಭಿವೃದ್ಧಿ ಮೊದಲಾದವುಗಳಿಂದಾಗಿ ಕೃಷಿ ಕ್ರಾಂತಿಯೂ ಆಯಿತು. ಹೊಸ ಬೇಸಾಯ ಪದ್ಧತಿಯಲ್ಲಿ ಭೂಮಿಯ ಹೆಂಟೆ ಒಡೆಯಲು ಉಕ್ಕಿನ ನೇಗಿಲು ಮತ್ತು ಕೂರಿಗೆಗಳನ್ನು ಉತ್ಪಾದಿಸಲಾಯಿತು. ಉಳುಮೆಗಾರರು ಹೆಚ್ಚು ಗೊಬ್ಬರದ ಬಳಕೆಯನ್ನೂ ಬೆಳೆಗಳ ಆವರ್ತನೆಯ ವ್ಯವಸ್ಥೆಯನ್ನೂ ರೂಢಿಸಿಕೊಂಡರು. ಶ್ರೀಮಂತ ಜಮೀನುದಾರರು ಕೃಷಿಯ ಬಯಲನ್ನು ವಿಸ್ತರಿಸಿಕೊಳ್ಳುತ್ತ ಹೋದರು. ಒತ್ತುವರಿ ಬೇಲಿ ಹಾಕುವ ಪದ್ಧತಿಯ ಪರಿಣಾಮವಾಗಿ ಅಲ್ಲಲ್ಲಿ ತೇಪೆಯಾಗಿ ಹರಡಿದ್ದ ಜಮೀನು ಒಂದೇ ವಿಶಾಲ ಹಿಡುವಳಿಯಾಗಿ ಸಿಗುವಂತಾಯಿತು. ಕೃಷಿ ಉತ್ಪಾದನೆ ಅದ್ಭುತ ಪ್ರಗತಿಯನ್ನು ಸಾಧಿಸಿತು. ಆದರೆ ಬಡ ರೈತರು ಜಮೀನಿನ ಮೇಲೆ ತಮ್ಮ ಹಿಡಿತವನ್ನು ಕಳೆದುಕೊಂಡು ನಗರಗಳಿಗೆ ವಲಸೆ ಬರಬೇಕಾಯಿತು.

**ಪರಿಣಾಮಗಳು**

ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಕಾರ್ಖಾನೆಗಳು ಹಾಗೂ ನಗರಗಳು ತಲೆಯೆತ್ತಿದವು. ಇದರಿಂದ ಆರ್ಥಿಕ ಜೀವನದ ಕೇಂದ್ರವು ಹಳ್ಳಿಯಿಂದ ನಗರಕ್ಕೆ ಬದಲಾವಣೆ ಹೊಂದಿತು. ಕೈಗಾರಿಕಾ ಪ್ರಗತಿಯಿಂದ ಆರ್ಥಿಕ ಸಂಪನ್ನತೆ ಬಂದಿತು. ಆದರೆ ಸಂಪತ್ತಿನ ಹಂಚಿಕೆಯಲ್ಲಿ ಸಮಾನತೆ ಇರಲಿಲ್ಲ. ಜನರ ವಲಸೆ ಹಳ್ಳಿಯಿಂದ ನಗರ ಪ್ರದೇಶಗಳಿಗೆ ಹೆಚ್ಚಾಗುತ್ತ ಬಂತು. ಕೃಷಿಯನ್ನು ಅವಲಂಬಿಸಿದವರ ಸಂಖ್ಯೆ ಕುಸಿಯುತ್ತ ಬಂದಿತು. ಹೆಚ್ಚು ಹೆಚ್ಚು ಜನ ಉದ್ಯಮ ಸಂಸ್ಥೆಗಳಲ್ಲಿ ಉದ್ಯೋಗವನ್ನು ಬಯಸಿದರು. ಕೈಗಾರಿಕಾ ನಗರಗಳಲ್ಲಿ ವಸತಿ ಸಮಸ್ಯೆ, ಆರೋಗ್ಯ ಸಮಸ್ಯೆ, ನೈರ್ಮಲ್ಯದ ಸಮಸ್ಯೆ

ಹಾಗೂ ವಾಹನ ಸಮಸ್ಯೆಗಳು ಹೆಚ್ಚಾದವು. ಇಂಗ್ಲೆಂಡಿನಲ್ಲಿ ಮತ್ತು ಯೂರೋಪಿನ ಅನೇಕ ರಾಷ್ಟ್ರಗಳಲ್ಲಿ ಆರಂಭದ ಕೈಗಾರಿಕಾ ಕೆಲಸಗಾರರ ಹೀನ ಜೀವನ ಸ್ಥಿತಿಗಳನ್ನು ಕಾಣಬಹುದಾಗಿತ್ತು.

ಬಂಡವಾಳಗಾರರ ಮತ್ತು ಕೆಲಸಗಾರರ ನಡುವಣ ಅಂತರ, ಶ್ರೀಮಂತರ ಮತ್ತು ಬಡವರ ನಡುವಣ ಅಂತರ ದೊಡ್ಡದಾಗುತ್ತ ಬಂದಂತೆ ಸಾಮಾಜಿಕ ಒತ್ತಡಗಳೂ, ಸಾಮಾಜಿಕ ಘರ್ಷಣೆಗಳೂ ಕಾಣಿಸಿಕೊಂಡವು. ಕೈಗಾರಿಕಾ ಕ್ರಾಂತಿಯಿಂದ ವಸಾಹತು ವಾದ ಮತ್ತು ಸಾಮ್ರಾಜ್ಯ ವಾದದ ನೀತಿಗಳಿಗೆ ಇನ್ನು ಹೆಚ್ಚಿನ ಭರ ಸಿಕ್ಕುವಂತಾಯಿತು.

## ಅಭ್ಯಾಸ

**I. ಈ ಕೆಳಕಂಡ ಪ್ರಶ್ನೆಗಳನ್ನು ಉತ್ತರಿಸಿ.**

1. ಕೈಗಾರಿಕಾ ಕ್ರಾಂತಿ ಎಂದರೇನು ?
2. ಕೈಗಾರಿಕಾ ಕ್ರಾಂತಿಗೆ ಕಾರಣವಾದ ಮಹತ್ವದ ವೈಜ್ಞಾನಿಕ ಶೋಧಗಳನ್ನು ವಿವರಿಸಿ.
3. ಕಾರ್ಖಾನೆ ವ್ಯವಸ್ಥೆಯ ಲಕ್ಷಣಗಳೇನು ?

**II. ಇವುಗಳನ್ನು ಹೊಂದಿಸಿ ಬರೆಯಿರಿ.**

| ಎ | ಬಿ |
|---|---|
| 1. ಜಾನ್ ಕೇ | ಸ್ಪಿನಿಂಗ್ ಜೆನ್ನಿ |
| 2. ಜೇಮ್ಸ್ ಹಾರ್‌ಗ್ರೀವ್ಸ್ | ಫ್ಲೈಯಿಂಗ್ ಷಟಲ್ |
| 3. ಕಾರ್ಟ್‌ರೈಟ್ | ರಿಚರ್ಡ್ ಆರ್ಕ್‌ರೈಟ್ |
| 4. ಹೊಲಿಗೆ ಯಂತ್ರ | ವಿದ್ಯುತ್‌ಚಾಲಿತ ಮಗ್ಗ |
| 5. ವಾಟರ್ ಫ್ರೇಮ್ | ಎಲಿಯಾಸ್ ಹೊವ್ |

**III. ಭರ್ತಿ ಮಾಡಿ**

1. ಸುಧಾರಿಸಿದ ತಾಂತ್ರಿಕ ಜ್ಞಾನವು...... ಕ್ಕೆ ಕಾರಣವಾಯಿತು.
2. ಕಾರ್ಖಾನೆಗಳು ಮತ್ತು ನಗರಗಳು ........ ನ ಪರಿಣಾಮವಾಗಿ ತಲೆಯೆತ್ತಿದವು.

## ಅಮೆರಿಕಾ ಕ್ರಾಂತಿ

**ಪೀಠಿಕೆ**

ಕೊಲಂಬಸನು 1492ರಲ್ಲಿ ಹೊಸ ಖಂಡಗಳಿಗೆ ಮಾರ್ಗವನ್ನು ಕಂಡುಹಿಡಿದನು. ಇಂಗ್ಲೆಂಡು ಉತ್ತರ ಅಮೆರಿಕಾದ ಕರಾವಳಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡಿತು. ಅವರು ಮೊದಲು ನೆಲಸಿದ ಭಾಗ ಜೇಮ್ಸ್‌ಟೌನ್. ಇದನ್ನು 1603ರಲ್ಲಿ ಸ್ಥಾಪಿಸಲಾಯಿತು. 1603ರಿಂದ ಕ್ರಾಂತಿಯ ಆರಂಭದವರೆಗೆ ಇಂಗ್ಲೆಂಡಿನ ಧ್ವಜದಡಿಯಲ್ಲಿ 13ವಸಾಹತುಗಳನ್ನು ಸ್ಥಾಪಿಸಲಾಯಿತು. ಮುಖ್ಯವಾಗಿ ಇಂಗ್ಲೆಂಡಿನಿಂದ ಮತ್ತು ಇತರ ಯೂರೋಪಿಯನ್

ರಾಜ್ಯಗಳಿಂದ ಜನರು ಈ ವಸಾಹತುಗಳಿಗೆ ವಲಸೆ ಬಂದರು. ಹದಿಮೂರು ವಸಾಹತುಗಳಲ್ಲಿನ ಆರಂಭದ ನೆಲಸಿಗರನ್ನು 'ಪಿಲಿಗ್ರಿಮ್ ಫಾದರ್ಸ್' ಎಂದು ಕರೆಯಲಾಗಿದೆ.

**ವಸಾಹತುಗಳ ಕಾಲ:** 1607ರಿಂದ 1763ರ ಅವಧಿಯನ್ನು ವಸಾಹತುಗಳ ಕಾಲ ಎಂದು ಕರೆಯಲಾಗಿದೆ. ತನ್ನ ಆರ್ಥಿಕ ಆಕಾಂಕ್ಷೆಗಳನ್ನು ಬೆಳೆಸುವ ಉದ್ದೇಶದಿಂದ ಇಂಗ್ಲೆಂಡು ವಸಾಹತುಗಳನ್ನು ಬೆಳೆಸಿತು. ಈ ಹದಿಮೂರು ವಸಾಹತುಗಳೆಂದರೆ 1) ನ್ಯೂಹ್ಯಾಂಪ್ ಷೈರ್ 2) ಮಸಾಚುಸೆಟ್ಸ್ 3) ರ್ಹೋಡ್ ದ್ವೀಪ 4) ಕನೆಕ್ಟಿ ಕಟ್ 5) ನ್ಯೂಯಾರ್ಕ್ 6) ನ್ಯೂಜೆರ್ಸಿ 7) ಪೆನ್‌ಸಿಲ್ವೇನಿಯಾ 8) ಡೆಲಾವೇರ್ 9) ಮೇರಿಲ್ಯಾಂಡ್ 10) ವರ್ಜೀನಿಯಾ 11) ನಾರ್ತ್ ಕೆರೋಲಿನಾ 12) ಸೌತ್ ಕೆರೋಲಿನಾ 13) ಜಾರ್ಜಿಯಾ.

ಇಂಗ್ಲೆಂಡ್ ಮತ್ತು ಇತರ ಯೂರೋಪಿಯನ್ ದೇಶಗಳೊಡನೆ ಅವ್ಯಾಹತವಾದ ಸಂಪರ್ಕವಿದ್ದುದರಿಂದ ಈ ವಸಾಹತುಗಳ ಜನರಲ್ಲಿ ಪ್ರಜಾಪ್ರಭುತ್ವ, ವ್ಯಕ್ತಿ ಸ್ವಾತಂತ್ರ್ಯ ಮೊದಲಾದ ವೈಚಾರಿಕ ನಿಲುವುಗಳು ಮೂಡಿಬಂದವು. ಈ ರಾಜ್ಯಗಳು ತಮ್ಮದೇ ಆದ ವಿಶ್ವವಿದ್ಯಾನಿಲಯಗಳನ್ನು, ಶೈಕ್ಷಣಿಕ ಸಂಸ್ಥೆಗಳನ್ನು, ಪತ್ರಿಕೆಗಳನ್ನು ಹಾಗೂ ಸ್ಥಾನಿಕ ಸರಕಾರಗಳನ್ನು ಹೊಂದಿದ್ದವು. ಈ ವಸಾಹತುಗಳ ಜನರಿಗೆ ಮೂಡಿಬಂದ ಜಾಗೃತ ಭಾವವನ್ನು 'ಅಮೆರಿಕನ್ ಜ್ಞಾನೋದಯ' ಎಂದು ಕರೆಯುತ್ತಾರೆ. ಈ ಜ್ಞಾನೋದಯವೇ ಮುಂದೆ ಅಮೆರಿಕನ್ ಕ್ರಾಂತಿಗೆ ಪ್ರೇರಣೆ ನೀಡಿತು.

**ಕ್ರಾಂತಿಯ ಕಾರಣಗಳು**

ಅಮೆರಿಕನ್ ಕ್ರಾಂತಿಯು ಆರ್ಥಿಕ ಮತ್ತು ರಾಜಕೀಯ ಮೂಲಗಳಿಂದ ಹೊಮ್ಮಿದೆ. ಮೂರನೇ ಜಾರ್ಜ್ ದೊರೆಯ ಕಾಲದ ಇಂಗ್ಲೆಂಡ್ ಸರಕಾರ ಈ ವಸಾಹತುಗಳಿರುವುದು ತಾಯಿನಾಡಾದ ಇಂಗ್ಲೆಂಡಿಗಾಗಿ ಎಂದು ನಂಬಿತ್ತು. ಈ ವಸಾಹತುಗಳು ಹತ್ತಿ, ತಂಬಾಕು, ಕಬ್ಬು ಮತ್ತು ಖನಿಜ ಸಂಪತ್ತಿನ ಕಚ್ಚಾ ಪದಾರ್ಥಗಳನ್ನು ಇಂಗ್ಲೆಂಡಿಗೆ ಒದಗಿಸುತ್ತಿದ್ದವು. ಈ ವಸಾಹತುಗಳು ಕೇವಲ ಇಂಗ್ಲೆಂಡಿನಿಂದ ಇಂಗ್ಲಿಷ್ ಹಡಗುಗಳಲ್ಲಿ ಸಿದ್ಧವಸ್ತುಗಳನ್ನು ತರಿಸಿಕೊಳ್ಳುತ್ತಿದ್ದುವು. ಆಮದು ಮತ್ತು ರಫ್ತಿನ ಎರಡೂ ಸುಂಕಗಳನ್ನು ಹಾಕಲಾಗಿತ್ತು. ಎರಡರಲ್ಲೂ ಇಂಗ್ಲೆಂಡಿಗೆ ಲಾಭವಾಗುತ್ತಿತ್ತು. ಅಮೆರಿಕದಲ್ಲಿ ಕಬ್ಬಿಣದ ಉಪಕರಣಗಳನ್ನಾಗಲಿ, ಉಣ್ಣೆಯ ಸಾಮಗ್ರಿಯನ್ನಾಗಲಿ ತಾವೇ ಉತ್ಪಾದಿಸಲು ಇಂಗ್ಲೆಂಡು ಒಪ್ಪಿಗೆ ಕೊಟ್ಟಿರಲಿಲ್ಲ.

ರಾಜಕೀಯವಾಗಿ ಈ ರಾಜ್ಯಗಳಿಗೆ ಆಡಳಿತ ಸ್ವಾತಂತ್ರ್ಯ ಇರಲಿಲ್ಲ. ಗವರ್ನರ್‌ರನ್ನು ಇಂಗ್ಲಿಷ್ ದೊರೆಗಳೇ ಆಯ್ಕೆ ಮಾಡಿ ಕಳಿಸುತ್ತಿದ್ದರು. ಆ ಗವರ್ನರುಗಳು ನಿರಂಕುಶ ಸ್ವಭಾವದವರಾಗಿದ್ದರು. ಎಲ್ಲ ವಸಾಹತುಗಳೂ ಕೊಡಬೇಕಾದ ಸುಂಕವನ್ನು ಇಂಗ್ಲೆಂಡಿನ ಪಾರ್ಲಿಮೆಂಟ್ ತೀರ್ಮಾನಿಸುತ್ತಿತ್ತು. ಅವುಗಳನ್ನು ಅಮೆರಿಕನ್ನರು ಮಾನ್ಯ ಮಾಡಬೇಕಾಗಿತ್ತು. ಇಂಗ್ಲೆಂಡಿನಲ್ಲಿ ಜನರಿಗೆ ಎಲ್ಲ ಹಕ್ಕುಗಳಿದ್ದವು. ಆದರೆ ಅಟ್ಲಾಂಟಿಕ್ ಸಮುದ್ರದ ಆಚೆ 3000ಮೈಲಿಗಳ ದೂರದಲ್ಲಿದ್ದ ಅದೇ ಇಂಗ್ಲಿಷ್ ಜನರಿಗೆ ಈ ಹಕ್ಕುಗಳು ಇರಲಿಲ್ಲ. ಇದರಿಂದಾಗಿ ಆ ಜನರಿಗೆ ಇಂಗ್ಲೆಂಡಿನ ಬಗೆಗೆ ಅಸಂತೃಪ್ತಿ ಮೂಡಿತು.

ಬ್ರಿಟಿಷರನ್ನು ವಿರೋಧಿಸಿ ತಮ್ಮ ಹಕ್ಕುಗಳನ್ನು ಉಳಿಸಿಕೊಳ್ಳಲು ಈ ಜನ ಅವಕಾಶಗಳಿಗಾಗಿ ಕಾಯುತ್ತಿದ್ದರು.

**ಕ್ರಾಂತಿ ಹಾದಿ**

1765ರಲ್ಲಿ ಆರಂಭಗೊಂಡ ಕ್ರಾಂತಿ 1781ರವರೆಗೆ ಮುಂದುವರಿಯಿತು. 1783ರ ಪ್ಯಾರಿಸ್ ಸಂಧಾನದ ಮೂಲಕ ಅಂತಿಮವಾಗಿ ಇಂಗ್ಲೆಂಡು ಈ ಹದಿಮೂರು ರಾಜ್ಯಗಳ ಸ್ವಾತಂತ್ರ್ಯವನ್ನು ಒಪ್ಪಿಕೊಂಡಿತು.

ಇಂಗ್ಲೆಂಡು 1765ರಲ್ಲಿ 'ಸ್ಟಾಂಪ್ ಆಕ್ಟ್' ಅನ್ನು ಅಮೇರಿಕಾದ ವಸಾಹತುಗಳ ಮೇಲೆ ಹೇರಿತು. ಆಗ ಅಮೆರಿಕನ್ನರು 'ಸ್ಟಾಂಪ್ ಆಕ್ಟ್ ಕಾಂಗ್ರೆಸ್' ಅನ್ನು ಸ್ಥಾಪಿಸಿ ಅದನ್ನು ಕಿತ್ತು ಹಾಕಬೇಕೆಂದು ಚಳುವಳಿ ಹೂಡಿದರು. ಈ ಸ್ಟಾಂಪ್ ಆಕ್ಟಿನ ಪ್ರಕಾರ ಅಮೆರಿಕನ್ನರು ಪ್ರತಿಯೊಂದು ವಾಣಿಜ್ಯದ ಹಾಗೂ ನ್ಯಾಯಾಂಗದ ಪತ್ರಕ್ಕೆ ಗೊತ್ತುಪಡಿಸಿದ ಮೊಬಲಗಿನ ಸ್ಟಾಂಪ್ ಅಂಟಿಸಬೇಕಾಗಿತ್ತು. ಇದರ ಆದಾಯ ಇಂಗ್ಲೆಂಡಿಗೆ ಹೋಗುತ್ತಿತ್ತು. ಜನರ ಚಳುವಳಿ ಯಶಸ್ವಿಯಾಯಿತು. ಇಂಗ್ಲೆಂಡ್ ಸ್ಟಾಪ್ ಆಕ್ಟನ್ನೇನೋ ಕಿತ್ತುಹಾಕಿತು. ಆದರೆ 1769ರಲ್ಲಿ 'ಟೌನ್ ಷೆಡ್' ತೆರಿಗೆಯನ್ನು ವಿಧಿಸಿತು. ವಸಾಹತುಗಳು ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ತಮಗೆ 'ಪ್ರಾತಿನಿಧ್ಯವಿಲ್ಲದೆ ತೆರಿಗೆಯಿಲ್ಲ' ಎಂದು ಘೋಷಿಸಿದವು. ಮುಂದೆ ಟೀ ಒಂದನ್ನು ಹೊರತುಪಡಿಸಿ ಉಳಿದೆಲ್ಲ ವಸ್ತುಗಳ ಮೇಲಿನ ಕರವನ್ನು ಇಂಗ್ಲೆಂಡ್ ಹಿಂದೆದುಕೊಂಡಿತು. 1773ರ ಟೀ ಆಕ್ಟ್‌ನ ಪರಿಣಾಮವಾಗಿ 'ಬೋಸ್ಟನ್ ಟೀ ಪಾರ್ಟಿ' ಎಂದು ಕರೆಯಲಾಗುವ ಒಂದು ಘಟನೆ ನಡೆಯಿತು. ಇದು ನಡೆದದ್ದು 1773ರ ಡಿಸೆಂಬರಿನಲ್ಲಿ. ಕೆಲವು ಕ್ರಾಂತಿಕಾರರು ರೆಡ್ ಇಂಡಿಯನ್ ಕೂಲಿಯಾಳುಗಳಂತೆ ವೇಷ ಧರಿಸಿ ಬೋಸ್ಟನ್ ಬಂದರಿಗೆ ಬಂದು ಈಸ್ಟ್ ಇಂಡಿಯಾ ಕಂಪೆನಿಯ ಹಡಗಿನೊಳಕ್ಕೆ ಹೋಗಿ ಅನೇಕ ಟೀ ಡಬ್ಬಗಳನ್ನು ಸಮುದ್ರಕ್ಕೆ ಎಸೆದರು. ಕ್ರಾಂತಿಕಾರಿಗಳ ಈ ಕ್ರಮಕ್ಕೆ ಸಂವಾದಿಯಾಗಿ ಇಂಗ್ಲೆಂಡ್ ಸರಕಾರವು 1774ರಲ್ಲಿ ಅಸಹಿಷ್ಣುತಾ ವಿಧಿ (ಇನ್-ಟಾಲರಬಲ್ ಆಕ್ಟ್)ಯನ್ನು ಜಾರಿಗೊಳಿಸಿತು. ಇದರ ಪ್ರಕಾರ ಇಂಗ್ಲೆಂಡು ಈ ವಸಾಹತುಗಳಿಗೆ ಸೇನೆಗಳನ್ನು ಕಳಿಸಿತು. ಬೋಸ್ಟನ್ನಿನ ಬಂದರನ್ನು ಮುಚ್ಚಿತು ಮತ್ತು ಸೈನಿಕ ಆಡಳಿತ (ಮಾರ್ಷಲ್ ಲಾ)ವನ್ನು ಜಾರಿಗೆ ತಂದಿತು. ಇದು ಹದಿಮೂರು ವಸಾಹತುಗಳ ಸಂಯುಕ್ತ ಸಂಸ್ಥೆಯ ಉದಯಕ್ಕೆ ದಾರಿಮಾಡಿಕೊಟ್ಟಿತು. 'ಕಾಂಟಿನೆಂಟಲ್ ಕಾಂಗ್ರೆಸ್' ಎಂದು ಪ್ರಸಿದ್ಧವಾದ ಈ ಪರಿಷತ್ತು 1774ರ ಸೆಪ್ಟೆಂಬರ್ ತಿಂಗಳಲ್ಲಿ ಫಿಲಡೆಲ್ಫಿಯಾದಲ್ಲಿ ಸಭೆ ಸೇರಿತು. 1775ರಲ್ಲಿ ಲೆಕ್ಸಿಂಗ್ಟನ್ ಮತ್ತು ಕನ್‌ಕಾರ್ಡ್‌ಗಳಲ್ಲಿ ಸ್ವಾತಂತ್ರ್ಯ ಯುದ್ಧದ ಘೋಷಣೆ ಮಾಡಿದ ಹದಿಮೂರು ವಸಾಹತುಗಳು ಹಾಗೂ ಇಂಗ್ಲೆಂಡಿನ ಸೇನೆಗಳ ನಡುವೆ ಹೋರಾಟ ಆರಂಭವಾಯಿತು. ಈ ಕಾಂಟಿನೆಂಟಲ್ ಕಾಂಗ್ರೆಸ್ ಮುಂದೆ ಒಂದು ಸೈನ್ಯವನ್ನು ಕೂಡಿಸಿ ಜಾರ್ಜ್ ವಾಷಿಂಗ್ಟನ್‌ನನ್ನು ಅಮೆರಿಕದ ಸೇನಾನಾಯಕನನ್ನಾಗಿ ನೇಮಕ ಮಾಡಿತು.

**ಸ್ವಾತಂತ್ರ್ಯ ಘೋಷಣೆ**

1776 ಜುಲೈ ನಾಲ್ಕರಂದು ಅಮೆರಿಕನ್ನರು ಏಕಪಕ್ಷೀಯವಾಗಿ ತಾವು ಇಂಗ್ಲೆಂಡ್

ಆಡಳಿತದಿಂದ ವಿಮುಕ್ತರೆಂದು ಘೋಷಿಸಿಕೊಂಡರು. ಥಾಮಸ್ ಜೆಫರ್‌ಸನ್ ಬರೆದ ಈ ಘೋಷಣೆಯು ಆಧುನಿಕ ಜಗತ್ತಿನ ಮೌಲಿಕ ದಾಖಲೆಗಳಲ್ಲಿ ಒಂದಾಗಿದೆ. ಈ ಘೋಷಣೆಯಲ್ಲಿ ಅಮೆರಿಕನ್ನರು ಮೂರು ಪ್ರಮುಖ ಮೂಲಭೂತ ಮಾನವೀಯ ಹಕ್ಕುಗಳಲ್ಲಿ ತಮ್ಮ ನಂಬಿಕೆಯನ್ನು ದೃಢಪಡಿಸಿದರು. ಅವು ಯಾವುವೆಂದರೆ **ಜೀವನ, ಸ್ವಾತಂತ್ರ್ಯ** ಮತ್ತು **ಸುಖದ ಅನುಸಂಧಾನ.** ಇವು ಮೂರು ತೊಡೆದು ಹಾಕಲಾಗದ ಹಕ್ಕುಗಳು. ಜನತಾ ಸರಕಾರಗಳನ್ನು ರಚಿಸಿ ಆಯ್ದ ಜನರನ್ನು ಅಧಿಕಾರಿಗಳಾಗಿ ನೇಮಿಸಲಾಯಿತು. ಈ ಜನತಾ ಸರಕಾರವು ಜನಗಳ ಈ ಹಕ್ಕನ್ನು ದಮನ ಮಾಡದೆ ರಕ್ಷಿಸಬೇಕೆಂದು ತೀರ್ಮಾನಿಸಿತು. ಈ ಘೋಷಣೆಯಲ್ಲಿ "ಅನೇಕ ಹಕ್ಕುಗಳನ್ನು ದಮನ ಮಾಡುವ ಸರಕಾರವನ್ನು ಕಿತ್ತೆಸೆಯುವ ಹಕ್ಕು ಜನತೆಗಿದೆ" ಎನ್ನಲಾಗಿದೆ. ಮೂರನೇ ಜಾರ್ಜ್ ದೊರೆಯ ಬಗ್ಗೆ ಈ ಪರಿಷತ್ತು ಸ್ಪಷ್ಟ ದೂರುಗಳ ಯಾದಿಯೊಂದನ್ನು ಕೊಟ್ಟುದೇ ಅಲ್ಲದೆ ಹದಿಮೂರು ವಸಾಹತುಗಳಿಗೆ 'ಅಮೆರಿಕಾ ಸಂಯುಕ್ತ ರಾಜ್ಯ' ಎಂಬ ಹೆಸರಿಟ್ಟಿತು.

ಮುಂದೆ ನಡೆದ ಯುದ್ಧದಲ್ಲಿ ಜಾರ್ಜ್ ವಾಷಿಂಗ್‌ಟನ್ ಮಹತ್ವದ ಪಾತ್ರವನ್ನು ವಹಿಸಿದನು. ಸರಿಯಾದ ಆಹಾರ, ಉಡುಪು, ಯುದ್ಧ ಸಾಮಗ್ರಿಗಳೊಂದೂ ಅವರಲ್ಲಿರಲಿಲ್ಲ. ಆದರೆ ಜಾರ್ಜ್ ವಾಷಿಂಗ್‌ಟನ್ ಜನರಲ್ಲಿ ತುಂಬಿದ ಸ್ಥೈರ್ಯ ಮತ್ತು ದೇಶಾಭಿಮಾನದ ಅಂಶಗಳು ಕೊನೆಗೆ ಅಮೆರಿಕಕ್ಕೆ ತುಂಬ ದಕ್ಷವೂ, ಸನ್ನದ್ಧವೂ ಆದ ಬ್ರಿಟಿಷ್ ಸರಕಾರವನ್ನು ಧೈರ್ಯದಿಂದ ಎದುರಿಸುವುದನ್ನು ಕಲಿಸಿಕೊಟ್ಟವು. ಇಂಗ್ಲೆಂಡಿನ ಬದ್ಧ ವೈರಿಯಾದ ಫ್ರಾನ್ಸ್ ದೇಶವು ಈ ಯುದ್ಧದಲ್ಲಿ ಅಮೆರಿಕದ ಸೇನೆಗೆ ಸಹಾಯ ಮಾಡಲು ನಿರ್ಧರಿಸಿತು. 1781ರ ಅಕ್ಟೋಬರ್ 11ರಂದು ನಡೆದ ಯಾರ್ಕ್‌ಟೌನ್ ಕದನದಲ್ಲಿ ಕಾರನ್‌ವಾಲಿಸ್ ಎಂಬ ಬ್ರಿಟಿಷ್ ಸೇನಾಪತಿಯು ತನ್ನ 8000ಸೇನೆಯೊಂದಿಗೆ, ಕೆಲವು ಸಾವಿರ ನಾವಿಕರೊಂದಿಗೆ ಜಾರ್ಜ್ ವಾಷಿಂಗ್‌ಟನ್‌ಗೆ ಶರಣಾಗತನಾದನು. ಕ್ರಾಂತಿಕಾರಕವಾದ ಈ ಯುದ್ಧ ನಿಲುಗಡೆಗೆ ಬಂದಿತು. 1783 ಏಪ್ರಿಲ್ ಹನ್ನೊಂದರ ಪ್ಯಾರಿಸ್ ಸಂಧಾನದ ಪ್ರಕಾರ ಇಂಗ್ಲೆಂಡು ಅಮೆರಿಕಾದ ಸಂಯುಕ್ತ ಸಂಸ್ಥಾನಗಳ ಸ್ವಾತಂತ್ರ್ಯವನ್ನು ಒಪ್ಪಿಕೊಂಡಿತು.

**ಕ್ರಾಂತಿಯ ಫಲಿತಾಂಶಗಳು**

ಅಮೆರಿಕಾ ಕ್ರಾಂತಿಯು ಇತಿಹಾಸದಲ್ಲಿ ಪ್ರಥಮ ಆಧುನಿಕ ಕ್ರಾಂತಿಯಾಗಿದೆ. ಸಾರ್ವತ್ರಿಕ ಮಾನವ ಹಕ್ಕುಗಳನ್ನೂ, ಪ್ರಜಾಸಾರ್ವಭೌಮತ್ವವನ್ನೂ ಅದು ಘೋಷಿಸಿಕೊಂಡಿದ್ದು ಮಾತ್ರವಲ್ಲದೆ ಆಧುನಿಕ ಯುಗದಲ್ಲಿ ಮೊತ್ತಮೊದಲ ರಿಪಬ್ಲಿಕನ್ ಮಾದರಿಯ ಸರಕಾರದ ಸ್ಥಾಪನೆಗೆ ಕಾರಣವಾಯಿತು. ಮುಂದೆ 1789ರ ಫ್ರಾನ್ಸಿನ ಮಹಾಕ್ರಾಂತಿಗೆ ಇದು ಪ್ರೋತ್ಸಾಹದಾಯಕವಾಯಿತು. "ಎಲ್ಲರೂ ಸಮಾನವಾಗಿ ಹುಟ್ಟಿದ್ದಾರೆ" ಎಂಬ ಪ್ರಚಾರ ವಾಕ್ಯವು ಅಮೆರಿಕಾದ ಮತ್ತು ಜಗತ್ತಿನ ನಾನಾಭಾಗದ ಜನರ ಸಾಮಾಜಿಕ ಕ್ರಾಂತಿಗೆ ಪ್ರೇರಕವಾಯಿತು.

## ಅಭ್ಯಾಸ

**I. ಒಂದೆರಡು ವಾಕ್ಯಗಳಲ್ಲಿ ಬರೆಯಿರಿ.**

1. 'ಅಮೆರಿಕ ಜ್ಞಾನೋದಯ' ಎಂದರೇನು ?
2. ಅಮೆರಿಕಾ ಸಂಯುಕ್ತ ಸಂಸ್ಥಾನದ ಸೇನೆಗಳ ಮಹಾದಂಡನಾಯಕ ಯಾರಾಗಿದ್ದರು ?
3. ಬೋಸ್ಟನ್ ಬಂದರಿನಲ್ಲಿ 13 ಕಾಲೊನಿಗಳ ಜನರು 'ಬೋಸ್ಟನ್ ಟೀ ಪಾರ್ಟಿ'ಯ ಅಂಗವಾಗಿ ಟೀ ಡಬ್ಬಗಳನ್ನು ಏಕೆ ಎಸೆದರು ?
4. ಅಮೆರಿಕಾದ ಸ್ವಾತಂತ್ರ್ಯ ಯುದ್ಧದ ಕಾರಣಗಳನ್ನೂ, ವಿವರಗಳನ್ನೂ, ಫಲಿತಾಂಶಗಳನ್ನೂ ಬರೆಯಿರಿ.

**ಚಟುವಟಿಕೆ**

1. ಜಾರ್ಜ್ ವಾಷಿಂಗ್‌ಟನ್ನನ ಜೀವನ ಮತ್ತು ಸಾಧನೆಗಳನ್ನು ಓದಿ ತಿಳಿಯಿರಿ.
2. ಉತ್ತರ ಅಮೆರಿಕಾದ ನಕ್ಷೆಯಲ್ಲಿ ಹದಿಮೂರು ಕಾಲೊನಿಗಳನ್ನು ಗುರುತಿಸಿ.

## ಫ್ರಾನ್ಸಿನ ಮಹಾಕ್ರಾಂತಿ

ಮಾನವನ ಇತಿಹಾಸದಲ್ಲಿ ಸ್ಮರಣೀಯವಾದ ಘಟನೆಗಳಲ್ಲಿ ಫ್ರಾನ್ಸಿನ ಮಹಾಕ್ರಾಂತಿಯೂ (ಕ್ರಿ.ಶ. 1789) ಒಂದಾಗಿದೆ. 1688ರ ಇಂಗ್ಲೆಂಡಿನ ಕ್ರಾಂತಿಯ ಹಾಗೆ ಅಥವಾ 1776ರ ಅಮೆರಿಕದ ಸ್ವಾತಂತ್ರ್ಯ ಸಮರದ ಹಾಗೆ ಈ ಘಟನೆ ಕೇವಲ ತನ್ನ ದೇಶದ ಎಲ್ಲೆಗಳಿಗಷ್ಟೇ ಸೀಮಿತ ಸ್ವರೂಪದ್ದಾಗಿರಲಿಲ್ಲ. ಈ ಕ್ರಾಂತಿ ಸ್ವೇಚ್ಛಾಚಾರದ ಆಡಳಿತದ ಮೇಲೆ ಪ್ರಜಾಪ್ರಭುತ್ವದ ಗೆಲುವನ್ನು ಸಾಧಿಸಿದ ಘಟನೆ ಎನಿಸಿತು. ಹೊಸ ಸಮಾಜವನ್ನು ನಿರ್ಮಿಸುವಲ್ಲಿ ಒಂದು ಗಂಭೀರ ಸ್ವರೂಪದ ಪ್ರಯತ್ನವನ್ನು ಈ ಕ್ರಾಂತಿ ಸೂಚಿಸಿತು. ಸ್ವಾತಂತ್ರ್ಯ, ಸಮಾನತೆ, ಸಹೋದರತೆ ಮುಂತಾದ ತತ್ವಗಳನ್ನು ಆಧರಿಸಿ ಹೊಸ ಸಮಾಜ ನಿರ್ಮಾಣವಾಗಬೇಕಾಗಿತ್ತು.

**ಕಾರಣಗಳು**

ಅನೇಕ ಕಾರಣಗಳು ಫ್ರಾನ್ಸಿನ ಕ್ರಾಂತಿ ಸಂಭವಿಸುವಂತೆ ಮಾಡಿದವು. ಅವುಗಳಲ್ಲಿ ಮುಖ್ಯವಾದುವು ರಾಜಕೀಯ, ಸಾಮಾಜಿಕ, ಆರ್ಥಿಕ, ಬೌದ್ಧಿಕ ಹಾಗೂ ಇತರ ಕಾರಣಗಳು.

**ರಾಜಕೀಯ ಕಾರಣಗಳು:** ಫ್ರಾನ್ಸ್ ದೇಶವನ್ನು ಆಳುತ್ತಿದ್ದ ಬೂರ್ಬೊ ರಾಜವಂಶದವರು ನಿರಂಕುಶವಾದ ಮತ್ತು ಸ್ವೇಚ್ಛಾಚಾರದ ಆಡಳಿತವನ್ನು ನಡೆಸುತ್ತಿದ್ದರು. ರಾಜನು ನೆಪಮಾತ್ರಕ್ಕೆ ದೇಶದ ಮುಖ್ಯಸ್ಥನೆನಿಸಿದ್ದರೂ ಅವನು ಅನೇಕ ಹಂತಗಳಲ್ಲಿ ಅಧಿಕಾರವನ್ನು ಚಲಾಯಿಸುತ್ತಿದ್ದ ಅಧಿಕಾರಿಗಳನ್ನು ಆಶ್ರಯಿಸಿದ್ದನು. ಅಧಿಕಾರಿಗಳ ಹಂತಗಳ ರಚನೆಯೇ ತೊಡಕಿನದಾಗಿತ್ತು. ಅಲ್ಲದೆ ಅನೇಕ ಯುದ್ಧಗಳಲ್ಲಿ

ಭಾಗಿಯಾಗುವುದರ ಮೂಲಕ ಫ್ರಾನ್ಸ್ ಅವನತಿಯ ತುದಿಯನ್ನು ತಲುಪಿತ್ತು. ತೆರಿಗೆ ಕೊಡಲು ಅಶಕ್ತರಾದ ರೈತರನ್ನು ಸೆರೆಮನೆಗೆ ತಳ್ಳುತ್ತಿದ್ದರು. ರಾಜರ ನಿರಂಕುಶ ಅಧಿಕಾರವನ್ನು ವಿರೋಧಿಸುತ್ತಿದ್ದ ವ್ಯಕ್ತಿಗಳಿಗೆ ಕಿರುಕುಳವನ್ನು ಕೊಡಲಾಗುತ್ತಿತ್ತು. ಫ್ರಾನ್ಸಿನ ಕಾನೂನುಗಳನ್ನು ರೂಪಿಸುತ್ತಿದ್ದ ಸ್ಟೇಟ್ಸ್ ಜನರಲ್ ಪ್ರತಿನಿಧಿ ಸಭೆ ಹೆಸರಿಗೆ ಮಾತ್ರ ಅಸ್ತಿತ್ವದಲ್ಲಿತ್ತು. ಅದರ ಅಧಿವೇಶನವನ್ನು ರಾಜರು ಕರೆಯುತ್ತಲೇ ಇರಲಿಲ್ಲ. ಚಕ್ರವರ್ತಿಯಾದ ಹದಿನಾಲ್ಕನೆಯ ಲೂಯಿ (1638–1715) ವೈಭವವನ್ನು ಪ್ರದರ್ಶಿಸುವ ಹಾಗೂ ದುಂದು ವೆಚ್ಚವನ್ನು ಮಾಡುವ ಅರಸನೆನಿಸಿದ್ದನು. ಅವನು ದಕ್ಷನಾದ ರಾಜನಾಗಿದ್ದನು. ಅವನು ಅನೇಕ ಯುದ್ಧಗಳಲ್ಲಿ ಫ್ರಾನ್ಸನ್ನು ತೊಡಗಿಸಿದನು. ಭವ್ಯವಾದ ಅರಮನೆಗಳ ನಿರ್ಮಾಣಕ್ಕೆ ಹಣವನ್ನು ಯಥೇಚ್ಛವಾಗಿ ಖರ್ಚು ಮಾಡಿದನು. ಅಲ್ಲದೆ ಅವನು ವಿಲಾಸ ಪ್ರಿಯನಾಗಿದ್ದನು. ಹೀಗಾಗಿ ಬೊಕ್ಕಸದ ಹಣವೆಲ್ಲ ಸೋರಿ ಹೋಯಿತು. ದೇಶ ದಾರಿದ್ರ್ಯದ ಸ್ಥಿತಿಗೆ ಬಂತು. ಭ್ರಷ್ಟಾಚಾರ ಅಧಿಕವಾಯಿತು. ಅಧಿಕಾರಿಗಳು ಸತ್ವಹೀನರೆನಿಸಿದ್ದರು. ಇಡೀ ದೇಶಕ್ಕೆ ಅನ್ವಯಿಸುವ ಏಕರೂಪದ ಕಾನೂನು ದೇಶದಲ್ಲಿ ಜಾರಿಯಲ್ಲಿರಲಿಲ್ಲ. ಹದಿನೈದನೆಯ ಲೂಯಿಯ ನಂತರ ಹದಿನಾರನೆಯ ಲೂಯಿ (1775–93) ಅಧಿಕಾರಕ್ಕೆ ಬಂದನು. ಹದಿನಾರನೆಯ ಲೂಯಿ ಒಬ್ಬ ಅಶಕ್ತ ರಾಜನಾಗಿದ್ದನು. ಅವನು ಬುದ್ಧಿವಂತನಾಗಿರಲಿಲ್ಲ. ದೃಢವಾದ ನಿರ್ಧಾರಗಳನ್ನು ತಳೆಯುಬಲ್ಲ ವ್ಯಕ್ತಿಯಾಗಿರಲಿಲ್ಲ. ಅವನು ತನ್ನ ಚಿಕ್ಕಮ್ಮ ಮತ್ತು ಹೆಂಡತಿಯಿಂದ ಪ್ರಭಾವಿಸಲ್ಪಟ್ಟಿದ್ದ. ಆತನ ಹೆಂಡತಿ ಮೇರಿ ಆಂಟೊನೆಟ್, ಆಸ್ಟ್ರಿಯಾ ದೇಶದ ರಾಜಕುಮಾರಿಯಾಗಿದ್ದಳು. ಅರಸನು ರಾಣಿಯ ಹಿಡಿತಕ್ಕೆ ಒಳಗಾಗಿದ್ದನು. ಮೇರಿ ಆಂಟೊನೆಟ್, ಆಸ್ಟ್ರಿಯಾ ದೇಶದ ಮಹಿಳೆಯಾಗಿದ್ದರಿಂದ ಫ್ರಾನ್ಸಿನ ಜನ ಆಕೆಯನ್ನು ದ್ವೇಷಿಸುತ್ತಿದ್ದರು.

**ಸಾಮಾಜಿಕ ಕಾರಣಗಳು:** ಹದಿನೆಂಟನೆಯ ಶತಮಾನದಲ್ಲಿ ಫ್ರಾನ್ಸಿನ ಸಮಾಜದಲ್ಲಿ ಮೂರು ವರ್ಗಗಳಿದ್ದವು. ಇವನ್ನು ಎಸ್ಟೇಟ್ಸ್ ಎಂದು ಕರೆಯುತ್ತಿದ್ದರು. ಮೊದಲ ವರ್ಗದಲ್ಲಿ ಪ್ರಭಾವಶಾಲಿಗಳಾದ ಪಾದ್ರಿಗಳು ಹಾಗೂ ಧರ್ಮಾಧಿಕಾರಿಗಳಿದ್ದರು. ಇವರು ಸಮಾಜದ ಉಳ್ಳವರ ವರ್ಗದ ಪ್ರತಿನಿಧಿ ಎನಿಸಿದ್ದರು. ಫ್ರಾನ್ಸ್ ದೇಶದ ಒಟ್ಟು ಭೂಮಿಯ ಐದನೆಯ ಒಂದು ಭಾಗ ಈ ವರ್ಗಕ್ಕೆ ಸೇರಿತ್ತು. ಅರಸನ ಬೊಕ್ಕಸದ ಅರ್ಧದಷ್ಟು ಆದಾಯ ಚರ್ಚ್ ಅಥವಾ ಧರ್ಮ ಪೀಠಕ್ಕೆ ಸಂದಾಯವಾಗುತ್ತಿತ್ತು. ಪಾದ್ರಿಗಳಿಗೆ ವಿಶೇಷ ಸೌಲಭ್ಯಗಳಿದ್ದವು. ವಿಶೇಷ ಹಕ್ಕುಗಳಿದ್ದವು. ಅವರು ತೆರಿಗೆಗಳನ್ನು ಕೊಡುತ್ತಿರಲಿಲ್ಲ. ಅವರಲ್ಲಿ ನೈತಿಕತೆ ಇರಲಿಲ್ಲ. ಎರಡನೆಯ ವರ್ಗದಲ್ಲಿ ಶ್ರೀಮಂತ ವರ್ಗದವರಿದ್ದರು. ಭೂಮಿಯ ಆದಾಯದ ಐದನೆಯ ಒಂದು ಭಾಗ ಇವರಿಗೆ ಸಂದಾಯವಾಗುತ್ತಿತ್ತು. ಇವರಿಗೂ ಸಹ ವಿಶೇಷ ಸೌಲಭ್ಯಗಳಿದ್ದವು. ಇವರು ತೆರಿಗೆಗಳನ್ನು ಕೊಡುತ್ತಿರಲಿಲ್ಲ. ಆಡಳಿತದಲ್ಲಿ ಉನ್ನತ ವರ್ಗದ ಅಧಿಕಾರಗಳೆಲ್ಲ ಇವರ ಸ್ವಾಧೀನದಲ್ಲಿದ್ದವು. ಇದಲ್ಲದೆ ತಮ್ಮ ಸೇವೆಗೆ ರಾಜನಿಂದ ನಿವೃತ್ತಿ ವೇತನವನ್ನು ಪಡೆಯುತ್ತಿದ್ದರು. ಮೂರನೆಯ ವರ್ಗ, ಜನಸಮುದಾಯದ ಶೇ. 80 ರಷ್ಟು ಜನರನ್ನು ಒಳಗೊಂಡಿತ್ತು. ಅವರಲ್ಲಿ ಮಧ್ಯಮ ವರ್ಗದ ಸದಸ್ಯರು, ರೈತರು, ಕುಶಲ ಕೆಲಸಗಾರರು

ಮತ್ತು ಕಾರ್ಮಿಕ ವರ್ಗದವರಿದ್ದರು. ಈ ವರ್ಗದ ಸದಸ್ಯರಿಗೆ ಯಾವ ಸೌಲಭ್ಯಗಳೂ ಇರಲಿಲ್ಲ. ಎಲ್ಲ ವಿನಾಯಿತಿಗಳಿಂದ ಇವರು ವಂಚಿಸಲ್ಪಟ್ಟಿದ್ದರು. ಅಲ್ಲದೆ ವಿಶೇಷ ಸೌಲಭ್ಯಗಳಿಗೊಳಪಟ್ಟ ಮೊದಲ ವರ್ಗದವರಿಂದ ಶೋಷಿಸಲ್ಪಟ್ಟಿದ್ದರು. ತೆರಿಗೆಯ ಅತ್ಯಧಿಕ ಹೊರೆ ಇವರ ಮೇಲಿತ್ತು. ಶ್ರೀಮಂತರಿಂದ ನಿರ್ದೇಶಿಸಲ್ಪಟ್ಟ ಯಾವುದೇ ಕೆಲಸವನ್ನೂ ಇವರು ನಿರಾಕರಿಸುವಂತಿರಲಿಲ್ಲ. ಒತ್ತಾಯದಿಂದ ಇವರನ್ನು ದುಡಿಸಿಕೊಳ್ಳಲಾಗುತ್ತಿತ್ತು. ತಮ್ಮ ಆದಾಯದ ಶೇ. ಎಂಬತ್ತರಷ್ಟನ್ನು ಇವರು ತೆರಿಗೆ ರೂಪದಲ್ಲಿ ರಾಜ್ಯಕ್ಕೆ, ಶ್ರೀಮಂತರಿಗೆ ಹಾಗೂ ಚರ್ಚಿಗೆ ಕೊಡಬೇಕಾಗಿತ್ತು. ಇವರ ಹಿತಚಿಂತನೆಗೆ ಸರ್ಕಾರ ಗಮನವನ್ನೇ ಹರಿಸಲಿಲ್ಲ. ಫ್ರಾನ್ಸ್ ಕ್ರಾಂತಿ ಹೆಚ್ಚಾಗಿ ರೂಪಿತವಾದದ್ದೇ ಈ ವರ್ಗದಿಂದ. ವಿದ್ಯಾವಂತ ವರ್ಗದವರೆನಿಸಿದ ವಕೀಲರು, ವರ್ತಕರು, ಶಿಕ್ಷಕರು, ವೈದ್ಯರು ಹಾಗೂ ಇತರರು ಸಮಾಜದ ಅಸಮಾನತೆಯ ಸ್ಥಿತಿಯನ್ನು ಮನಗಂಡರು. ಅಲ್ಲದೆ ನಿರಂಕುಶ ದರ್ಪಿಷ್ಠ ರಾಜ ಪ್ರಭುತ್ವದ ಆಡಳಿತದ ಅನ್ಯಾಯ ಹಾಗೂ ಶೋಷಣೆಯ ವಸ್ತು ಸ್ಥಿತಿಯನ್ನು ಗ್ರಹಿಸಿದರು.

**ಆರ್ಥಿಕ ಕಾರಣಗಳು:** ಹದಿನೆಂಟನೆಯ ಶತಮಾನದ ಫ್ರಾನ್ಸಿನ ಆರ್ಥಿಕ ಸ್ಥಿತಿ ಶೋಚನೀಯವೆನಿಸಿತ್ತು. ಅರಸರು ಹಾಗೂ ಅಧಿಕಾರಿಗಳು ವೈಭವದ ಜೀವನವನ್ನು ನಡೆಸುತ್ತಿದ್ದರು. ಈ ವರ್ಗದ ವೆಚ್ಚವನ್ನು ಸರ್ಕಾರದ ಬೊಕ್ಕಸವೇ ಭರಿಸಬೇಕಾಗಿತ್ತು. ತೆರಿಗೆಯ ನೀತಿ ಅನ್ಯಾಯ ಹಾಗೂ ಅಕ್ರಮಗಳಿಂದ ಕೂಡಿತ್ತು. ದೇಶದ ಸಂಪತ್ತಿನ ಶೇ. 40ರಷ್ಟು ಉನ್ನತ ವರ್ಗಕ್ಕೆ ಸೇರಿತ್ತು. ಆದರೆ ಇವರು ತೆರಿಗೆಗಳನ್ನು ಕೊಡಬೇಕಾಗಿರಲಿಲ್ಲ. ತೆರಿಗೆಯ ಹೊರೆಯಿಂದ ರೈತರು ತುಳಿಯಲ್ಪಟ್ಟಿದ್ದರು. ಅನವಶ್ಯಕವೆನಿಸಿದ ಯುದ್ಧಗಳಿಂದ ದೇಶದ ಬೊಕ್ಕಸದ ಹಣವೆಲ್ಲ ಹರಿದು ಹೋಗಿತ್ತು. ಹದಿನಾರನೆಯ ಲೂಯಿ, ಟರ್ಗತ್‌ನನ್ನು ಅರ್ಥಸಚಿವನನ್ನಾಗಿ ನೇಮಿಸಿದನು. ಆದರೆ ಅವನ ಸಲಹೆಗಳನ್ನು ಮಾನ್ಯ ಮಾಡಲಿಲ್ಲ. ಟರ್ಗತ್ ನಂತರ ನೆಕರ್ ಹಣಕಾಸಿನ ಸಚಿವನಾಗಿ ನೇಮಕಗೊಂಡನು. ಆದರೆ ಶ್ರೀಮಂತರ ಫಿತೂರಿಯಿಂದ ಅವನ ಯತ್ನಗಳು ಫಲಪ್ರದವೆನಿಸಲಿಲ್ಲ. ಫ್ರಾನ್ಸ್ ದೇಶದ ದಾರುಣ ಆರ್ಥಿಕ ಸ್ಥಿತಿ ಕ್ರಾಂತಿಗೆ ಪ್ರಚೋದಕವೆನಿಸಿತು. ತೆರಿಗೆ ವಸೂಲಿಗಾಗಿ ರಾಜನು ಪ್ರತಿನಿಧಿ ಸಭೆಯ (ಸ್ಟೇಟ್ಸ್ ಜನರಲ್) ಅಧಿವೇಶನವನ್ನು ಕರೆಯಲೇಬೇಕಾಯ್ತು.

**ಬೌದ್ಧಿಕ ಪ್ರಜ್ಞೆಯ ಜಾಗೃತಿ:** ಹದಿನೆಂಟನೆಯ ಶತಮಾನ ಅತ್ಯುತ್ತಮ ಮಟ್ಟದ ತತ್ವಜ್ಞಾನಿಗಳನ್ನು, ಚಿಂತಕರನ್ನು ಜಗತ್ತಿಗೆ ನೀಡಿತು. ಸಮಾಜದ ದುಷ್ಟ ಪಿಡುಗುಗಳ ವಿರುದ್ಧ ಈ ವ್ಯಕ್ತಿಗಳು ತಮ್ಮ ಪ್ರತಭಟನೆಯ ಧ್ವನಿಯನ್ನು ಮೊಳಗಿಸಿದರು. ಹಾಗೆಯೇ ಆ ಕಾಲದ ರಾಜಕೀಯ ಅಸ್ಥಿರತೆ ಹಾಗೂ ಗೊಂದಲಗಳ ಸ್ಥಿತಿಗತಿಗಳನ್ನು ಅಧ್ಯಯನ ಮಾಡಿದರು. ಸಮಾಜದ ಅನೇಕ ವಿಚಾರಗಳನ್ನು ಕುರಿತು ಜನರಲ್ಲಿ ಕಾಳಜಿ, ಪ್ರಜ್ಞೆ ಬೆಳೆಯುವಂತೆ ಮಾಡಿದರು. ರೂಸೊ ಮತ್ತು ವಾಲ್ಟೇರ್ ಅಸಮಾನತೆಯ ಆಧಾರದ ಮೇಲೆ ರಚಿತವಾದ ಸಮಾಜದ ಕಟ್ಟುಪಾಡುಗಳನ್ನು ಉಗ್ರವಾಗಿ ಟೀಕೆ ಮಾಡಿದರು ಹಾಗೂ ಖಂಡಿಸಿದರು. ವ್ಯಕ್ತಿಯ ವ್ಯಕ್ತಿತ್ವವನ್ನು ಆತನ ಜನನ, ಸಾಮಾಜಿಕ ಅಂತಸ್ತು, ಹಾಗೂ ಐಶ್ವರ್ಯಗಳ ಆಧಾರದ ಮೇಲೆ ನಿರ್ಣಯಮಾಡದೇ ಅದು ಸ್ವಾತಂತ್ರ್ಯ, ಸಮಾನತೆ, ಸಹೋದರತೆ ತತ್ವಗಳನ್ನು ಆಧರಿಸಿರಬೇಕೆಂದು ವಾಲ್ಟೇರ್ ಗಟ್ಟಿಯಾಗಿ

ಪ್ರತಿಪಾದಿಸಿದನು. ರೂಸೊ ತನ್ನ ಗ್ರಂಥವಾದ 'ಸಾಮಾಜಿಕ ಒಪ್ಪಂದ'ದಲ್ಲಿ ಪ್ರಜೆಗಳೇ ದೇಶದ ನಿಜವಾದ ಒಡೆಯರೆಂದು ರಾಜನು ಅವರ ಸಮ್ಮತಿಯ ಮೂಲಕವೇ ಆಡಳಿತ ನಡೆಸಬೇಕೆಂದು ಪ್ರತಿಪಾದಿಸಿದನು. ಆತನ ಮುಖ್ಯ ನಿರೂಪಣೆ 'ಮಾನವ ಸ್ವತಂತ್ರವಾಗಿ ಹುಟ್ಟುತ್ತಾನೆ, ಆದರೆ ಈ ಜಗತ್ತು ಆತನನ್ನು ಸಂಕೋಲೆಗಳಿಂದ ಬಂಧಿಸುತ್ತದೆ' ಎನ್ನುವುದು ಪ್ರಸಿದ್ಧವಾದ ಹೇಳಿಕೆಯಾಗಿದೆ. ಮಾಂಟೆಸ್ಕ್ಯೂ ಒಬ್ಬ ಪ್ರಸಿದ್ಧ ಕಾನೂನು ತಜ್ಞನೂ, ರಾಜನೀತಿಜ್ಞನೂ ಆಗಿದ್ದನು. ವೈಜ್ಞಾನಿಕ ಚಿಂತನೆಯ ಮೂಲಕ ಫ್ರಾನ್ಸ್ ಸಮಾಜವನ್ನು ಆವರಿಸಿದ್ದ ನ್ಯೂನತೆಗಳನ್ನು, ಹಾಗೂ ರಾಜಕೀಯದ ಸ್ಥಿತಿಗಳನ್ನು ವಸ್ತುನಿಷ್ಠವಾಗಿ ಅವಲೋಕನಕ್ಕೆ ಒಳಪಡಿಸಿದನು. ತನ್ನ ಗ್ರಂಥ 'ದಿ ಸ್ಪಿರಿಟ್ ಆಫ್ ಲಾಸ್' (The Spirit of Laws) ನಲ್ಲಿ ರಾಜಪ್ರಭುತ್ವದ ಕ್ಷೀಣವಾದ ಅಸ್ತಿತ್ವವನ್ನು ಹಾಗೂ 'ಅರಸುತನ ದೈವಿಕ ಹಕ್ಕು' ಎಂಬ ಸಿದ್ಧಾಂತದ ಅನ್ಯಾಯವನ್ನು ವಿಶ್ಲೇಷಣೆಗೆ ಒಳಪಡಿಸಿದನು. ಫ್ರಾನ್ಸಿನ ಜನಸಾಮಾನ್ಯರನ್ನೂ ಇವರ ಚಿಂತನೆಗಳು ಗಾಢವಾಗಿ ಪ್ರಭಾವಿಸಿ ಕ್ರಾಂತಿಗೆ ಭೂಮಿಕೆಯನ್ನು ಒದಗಿಸಿದವು.

**ಅಮೆರಿಕಾ ಕ್ರಾಂತಿಯ ಪರಿಣಾಮಗಳು:** ಅಮೆರಿಕನ್ನರು ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಯಶಸ್ಸುಗಳಿಸಿದ್ದರು. ಈ ಸಮರದಲ್ಲಿ ಫ್ರಾನ್ಸ್ ದೇಶದ ಸೈನಿಕರು ಇಂಗ್ಲಿಷರ ವಿರುದ್ಧ ಹೋರಾಡಿದ್ದರು. ಅಮೆರಿಕದಿಂಧ ಹಿಂತಿರುಗಿ ಫ್ರಾನ್ಸಿಗೆ ಬಂದ ಮೇಲೆ ಅವರೂ ಸಹ ಸ್ವಾತಂತ್ರ್ಯವನ್ನು ಕುರಿತು ಪ್ರಸ್ತಾಪ ಮಾಡಿ ದೇಶದ ಜನರನ್ನು ರಾಜನ ಆಡಳಿತದ ವಿರುದ್ಧ ತಿರುಗಿ ಬೀಳುವಂತೆ ಮಾಡಿದರು.

**ಕ್ರಾಂತಿಯ ಗತಿ**

ಫ್ರಾನ್ಸಿನ ಚಕ್ರವರ್ತಿ ಹದಿನಾರನೆಯ ಲೂಯಿ ಆರ್ಥಿಕ ಮುಗ್ಗಟ್ಟಿನಿಂದ ಬಳಲುತ್ತಿದ್ದನು. ಬೇರೆ ಮಾರ್ಗವಿಲ್ಲದೆ 1789ರ ಮೇ ತಿಂಗಳಿನಲ್ಲಿ ಅವನು ಫ್ರಾನ್ಸಿನ ಸಂಸತ್ತಾದ ಸ್ಟೇಟ್ಸ್ ಜನರಲ್ ಸಭೆಯ ಅಧಿವೇಶನಕ್ಕೆ ಕರೆಕೊಟ್ಟನು. ಈ ಪಾರ್ಲಿಮೆಂಟಿನಲ್ಲಿ ಮೊದಲ ಎರಡು ವರ್ಗದ ಪ್ರತಿನಿಧಿಗಳ ಎರಡರಷ್ಟು ಸಂಖ್ಯೆಯ ಪ್ರತಿನಿಧಿಗಳು ಮೂರನೆಯ ವರ್ಗದಲ್ಲಿದ್ದರೂ ಚಕ್ರವರ್ತಿಯು ಮೂರೂ ವರ್ಗದ ಪ್ರತಿನಿಧಿಗಳನ್ನು ಪ್ರತ್ಯೇಕವಾಗಿ ಸಮಾಲೋಚನೆಗೆ ಕರೆಯಲು ಪ್ರಯತ್ನಿಸಿದನು. ಆದರೆ ಇದನ್ನು ಮೂರನೆಯ ವರ್ಗದವರು ತಿರಸ್ಕರಿಸಿದರು. ಮೂರೂ ವರ್ಗಗಳ ಪ್ರತಿನಿಧಿಗಳು ಒಟ್ಟಾಗಿ ಸೇರುವಂತೆ ಆದೇಶ ನೀಡಬೇಕೆಂದೂ ಹಾಗೂ ಎಲ್ಲರಿಗೂ ಸಮಾನ ಮತದಾನದ ಅವಕಾಶವಿರಬೇಕೆಂದೂ ಹಕ್ಕೊತ್ತಾಯ ತಂದರು. ಆದರೆ ಅರಸ, ಶ್ರೀಮಂತರು ಹಾಗೂ ಪಾದ್ರಿಗಳು ಈ ಬೇಡಿಕೆಯನ್ನು ಒಪ್ಪಲಿಲ್ಲ. ಮೂರನೆಯ ವರ್ಗದ ಸದಸ್ಯರು ಅರಮನೆಗೆ ಹೊಂದಿಕೊಂಡಿದ್ದ ಟೆನಿಸ್ ಮೈದಾನದಲ್ಲಿ ಸಭೆ ಸೇರಿ ವಾಪಸ್ಸು ಹೋಗದಿರುವ ಪಣ ತೊಟ್ಟರು. ತಮ್ಮ ಪ್ರತ್ಯೇಕವಾದ ಸಭೆಗೆ 'ರಾಷ್ಟ್ರೀಯ ಪ್ರತಿನಿಧಿ ಸಭೆ' ಎಂಬ ಹೆಸರು ಕೊಟ್ಟು ತಮ್ಮ ಬೇಡಿಕೆಗಳನ್ನು ಮಾನ್ಯ ಮಾಡಬೇಕೆಂದೂ, ಕುಂದು ಕೊರತೆಗಳನ್ನು ನಿವಾರಿಸಬೇಕೆಂದೂ, ಸಂವಿಧಾನವನ್ನು ಸುಧಾರಿಸಬೇಕೆಂದೂ ಬೇಡಿಕೆಗಳನ್ನು

ಮುಂದಿಟ್ಟರು. ರಾಜನು, ರಾಣಿ ಹಾಗೂ ಶ್ರೀಮಂತರ ಸಲಹೆಯ ಮೇರೆಗೆ ರಾಷ್ಟ್ರೀಯ ಸಭೆಯನ್ನು ವಿಸರ್ಜಿಸಲು ಸೈನ್ಯಕ್ಕೆ ಆಜ್ಞೆ ಕೊಟ್ಟನು.

ರಾಜನ ಈ ಯೋಜನೆಯನ್ನು ಅರಿತು ಮೂರನೆಯ ವರ್ಗದ ಸದಸ್ಯರು ಕುಪಿತಗೊಂಡರು. ಹಾಗೂ ಪ್ಯಾರಿಸ್ ನಗರದಲ್ಲಿದ್ದ ಮಧ್ಯಯುಗದ ಬಂಧೀಖಾನೆ ಹಾಗೂ ಕೋಟೆ ಎನಿಸಿದ್ದ ಬೇಸ್ಟಿಲ್ ಕಡೆಗೆ ದಂಡೆತ್ತಿ ಹೋದರು. ಆ ಜೈಲಿನ ಬಾಗಿಲುಗಳನ್ನು ಮುರಿದುಹಾಕಿ ಎಲ್ಲ ಕೈದಿಗಳನ್ನು ಬಿಡುಗಡೆ ಮಾಡಿದರು. ಈ ಘಟನೆ 14.7.1789ರಂದು ಸಂಭವಿಸಿತು. ಹಸಿದ ಪ್ಯಾರಿಸ್ ನಗರದ ಹೆಂಗಸರು ವರ್ಸೇಲ್ಸ್‌ನಲ್ಲಿದ್ದ ಅರಮನೆಗೆ ಚಳುವಳಿ ಮಾಡ ಹೊರಟು ಆಹಾರಕ್ಕಾಗಿ ಬೇಡಿಕೆಯನ್ನು ಮುಂದಿಟ್ಟರು. ಉದ್ರಿಕ್ತ ಜನಸಮೂಹ ಅರಮನೆಗೆ ನುಗ್ಗಿ ಅದನ್ನು ಅವ್ಯವಸ್ಥೆಗೊಳಿಸಿತು. ಅದು ರಾಜ, ರಾಣಿ ಹಾಗೂ ಅವರ ಮಕ್ಕಳನ್ನು ಪ್ಯಾರಿಸ್‌ನಲ್ಲಿ ಬಂದು ವಾಸಿಸುವಂತೆ ಬಲಾತ್ಕಾರ ಮಾಡಿತು.

1791ರಲ್ಲಿ ರಾಷ್ಟ್ರೀಯ ಸಮಿತಿ ಪ್ರತ್ಯೇಕವಾದ ಸಂವಿಧಾನವನ್ನು ಸಿದ್ಧಪಡಿಸಿ ಮಂಡಿಸಿತು. ಈ ಸಭೆ ತನ್ನ ಘೋಷಣೆಯಂತೆ ಊಳಿಗ ಮಾನ್ಯ ಪದ್ಧತಿಯನ್ನೂ, ಗುಲಾಮಗಿರಿಯನ್ನೂ ಹಾಗೂ ಕೆಲವು ವರ್ಗಗಳಿಗಿದ್ದ ವಿಶೇಷ ಸವಲತ್ತುಗಳನ್ನೂ ರದ್ದುಪಡಿಸಿತು. ಇದು ವ್ಯಕ್ತಿ ಸ್ವಾತಂತ್ರ್ಯವನ್ನು ಘೋಷಿಸಿತು. ದೀರ್ಘವಾದ ಚರ್ಚೆಯ ನಂತರ ಈ ಸಭೆ ಮಾನವ ಹಕ್ಕುಗಳ ಪ್ರಸಿದ್ಧವಾದ ಘೋಷಣೆಯನ್ನು ಅನುಮೋದಿಸಿತು. ಇದು ಇಡೀ ಫ್ರಾನ್ಸ್‌ಗೆ ಅನ್ವಯಿಸುವ ಏಕರೂಪದ ಆಡಳಿತದ ಕ್ರಮವನ್ನು ಸ್ಥಾಪಿಸಿತು. ರಾಜನು ರಾಜ್ಯಾಂಗ ದಾಖಲೆಗೆ ವಿಧಿಯಿಲ್ಲದೆ ರುಜು ಹಾಕಿದನು. ಈ ದಾಖಲೆಯ ಪ್ರಕಾರ ರಾಜನ ಅಧಿಕಾರಗಳು ಮೊಟಕುಗೊಳಿಸಲ್ಪಟ್ಟವು. ದೇಶಕ್ಕೆ ಅಗತ್ಯವಾದ ಕಾನೂನುಗಳನ್ನು ರಾಷ್ಟ್ರೀಯ ಸಭೆ ರೂಢಿಸಬೇಕಾಯಿತು. ಇದರಿಂದ ಅವಮಾನಗೊಂಡ ಹದಿನಾರನೆಯ ಲೂಯಿ ತನ್ನ ಪರಿವಾರದೊಡನೆ ದೇಶಾಂತರ ಹೋಗಲು ಪ್ರಯತ್ನಿಸಿದ. ಆದರೆ ಗಡಿನಾಡಿನ ಊರೊಂದರಲ್ಲಿ ಸೆರೆಹಿಡಿಯಲ್ಪಟ್ಟ. 21ನೆ ಸೆಪ್ಟೆಂಬರ್ 1792ರಲ್ಲಿ ರಾಷ್ಟ್ರೀಯ ಸಮಾವೇಶವು ಫ್ರಾನ್ಸಿನಲ್ಲಿ ಪ್ರಭುತ್ವವನ್ನು ರದ್ದುಗೊಳಿಸಿತು. ರಾಜ ಮತ್ತು ರಾಣಿಯರ ವಿರುದ್ಧ ರಾಜದ್ರೋಹದ ಆಪಾದನೆಯನ್ನು ಹೊರಿಸಲಾಯಿತು. ಸೂಕ್ತ ವಿಚಾರಣೆಯ ನಂತರ 1793ರಲ್ಲಿ ಇಬ್ಬರನ್ನೂ ಗಿಲೊಟಿನ್ ಯಂತ್ರಕ್ಕೆ ಕೊಟ್ಟು ಮರಣದಂಡನೆಗೆ ಗುರಿ ಮಾಡಲಾಯಿತು. ಫ್ರಾನ್ಸ್ ಗಣರಾಜ್ಯವಾಗಿ ಘೋಷಿಸಲ್ಪಟ್ಟಿತು. ಕ್ರಾಂತಿಕಾರಿಗಳ ಒಂದು ಗುಂಪು ಆಗ ಅಧಿಕಾರಕ್ಕೆ ಬಂದಿತು. ಈ ಗುಂಪಿಗೆ ಜಾಕೊಬಿನ್ ಎಂಬ ಹೆಸರಿತ್ತು. ಇದು ನೇರ ಪ್ರಜಾಪ್ರಭುತ್ವವನ್ನು ಅಧಿಕಾರಕ್ಕೆ ತಂದಿತು. 2ವರ್ಷಗಳ ಕಾಲ ಫ್ರಾನ್ಸಿನಲ್ಲಿ ರಕ್ತಪಾತದ ಆಳ್ವಿಕೆ ಕಂಡುಬಂದಿತು. ಈ ಗುಂಪಿನ ನಾಯಕ ರಾಬ್ಸ್‌ಪಿಯರ್. ಈ ಅವಧಿಯಲ್ಲಿ ಸಾವಿರಾರು ಸಂಖ್ಯೆಯ ಮುಗ್ಧ ಪ್ರಜೆಗಳನ್ನು ಹಾಗೂ ರಾಜಸಂಬಂಧಿಗಳನ್ನು ಗಿಲೊಟಿನ್ ಯಂತ್ರಕ್ಕೆ ಬಲಿ ಕೊಡಲಾಯ್ತು. ಈ ಮಧ್ಯೆ ರಾಷ್ಟ್ರೀಯ ಪ್ರತಿನಿಧಿ ಸಭೆಯ ಡೈರೆಕ್ಟರುಗಳೆಂಬ ಅಧಿಕಾರಿಗಳಿಗೆ ಸಂಪೂರ್ಣ ಅಧಿಕಾರವನ್ನು ಕೊಟ್ಟಿತು. ಈ ಡೈರೆಕ್ಟರುಗಳ ಆಡಳಿತ, ವ್ಯವಸ್ಥೆಗಿಂತ ಅವ್ಯವಸ್ಥೆಯನ್ನು ಸೃಷ್ಟಿ ಮಾಡಿತು. ಪ್ರಭುತ್ವ ಸ್ಥಾಪನೆಗೆ ಬೆಂಬಲವಿತ್ತು, ಯೂರೋಪಿನ ರಾಷ್ಟ್ರಗಳು ಆಸ್ಟ್ರಿಯಾದ ನೇತೃತ್ವದಲ್ಲಿ ಫ್ರಾನ್ಸ್ ವಿರುದ್ಧ ಯುದ್ಧ ಸಾರಿದವು. ಈ ಅವಧಿಯಲ್ಲಿ ಫ್ರಾನ್ಸಿನ ಬಲಿಷ್ಠ ಸೇನಾಧಿಪತಿ ನೆಪೋಲಿಯನ್

ಯುದ್ಧದಲ್ಲಿ ಫ್ರಾನ್ಸ್‌ನ ಪಕ್ಷಕ್ಕೆ ಅಪಾರ ಯಶಸ್ಸು ಗಳಿಸಿದನು. ಆಗ ಅನೇಕ ಫ್ರಾನ್ಸ್ ನಾಗರೀಕರು ನೆಪೋಲಿಯನ್ ಆಡಳಿತಕ್ಕೆ ಸೂಕ್ತವ್ಯಕ್ತಿಯೆಂದು ಅಭಿಪ್ರಾಯಪಟ್ಟರು. ನೆಪೋಲಿಯನ್ ಡೈರೆಕ್ಟರುಗಳ ಆಡಳಿತವನ್ನು ರದ್ದುಗೊಳಿಸಿ ತನ್ನ ಸೈನ್ಯ ಬಲದಿಂದ ಹೊಸ ಗಣರಾಜ್ಯವನ್ನು ಜಾರಿಗೆ ತಂದನು.

**ಕ್ರಾಂತಿಯ ಪರಿಣಾಮಗಳು**

ಸ್ವಾತಂತ್ರ್ಯ, ಸಮಾನತೆ, ಸಹೋದರತೆ ಇವು ಫ್ರಾನ್ಸ್ ಕ್ರಾಂತಿಯ ಪ್ರಸಿದ್ಧ ಘೋಷಣೆಗಳೆನಿಸಿದ್ದವು. ಯೂರೋಪ್ ಖಂಡದ ಅನೇಕ ದೇಶಗಳು ಈ ತತ್ವಗಳಿಂದ ಪ್ರಭಾವಿತವಾಗಿ ರಾಜಪ್ರಭುತ್ವದ ಆಳ್ವಿಕೆಯನ್ನು ಪ್ರಜಾಪ್ರಭುತ್ವದ ಆಳ್ವಿಕೆಯನ್ನಾಗಿ ಬದಲಾಯಿಸಿದವು.

ಈ ಕ್ರಾಂತಿಯಿಂದ ಫ್ರಾನ್ಸಿನಲ್ಲಿ ಊಳಿಗ ಮಾನ್ಯಪದ್ಧತಿಯು ಸಂಪೂರ್ಣ ನಿರ್ನಾಮಗೊಂಡಿತು. ಶ್ರೀಮಂತರು ಹೊಂದಿದ್ದ ಹಕ್ಕುಗಳನ್ನು ಹಾಗೂ ಪಾದ್ರಿಗಳು ಹೊಂದಿದ್ದ ವಿಶೇಷ ವಿನಾಯತಿಗಳನ್ನು ಈ ಕ್ರಾಂತಿ ತೊಡೆದುಹಾಕಿತು.

ಹೊಸ ಆರ್ಥಿಕ ವ್ಯವಸ್ಥೆಯನ್ನು ನೆಪೋಲಿಯನ್ ನ್ಯಾಯ ವ್ಯವಸ್ಥೆ 'ಕೋಡ್ ನೆಪೋಲಿಯನ್'ಯೊಂದಿಗೆ ಜಾರಿಗೆ ತರಲಾಯಿತು.

ರಾಷ್ಟ್ರೀಯತೆಯ ಪ್ರಜ್ಞೆ ಈ ಕ್ರಾಂತಿಯಿಂದ ಇನ್ನೂ ಬಲವಾಯಿತು. ಫ್ರಾನ್ಸಿನ ಮಹಾಕ್ರಾಂತಿ ಇಂದಿನವರೆಗೂ ಇತಿಹಾಸದಲ್ಲಿ ಮೂರು ಮುಖ್ಯ ಮೌಲ್ಯಗಳನ್ನು ಪ್ರತಿಪಾದಿಸಿ ಎತ್ತಿ ಹಿಡಿಯಿತು. ರಾಜಕೀಯ ಸ್ವಾತಂತ್ರ್ಯ, ಸಾಮಾಜಿಕ ಸಮಾನತೆ ಮತ್ತು ತಾಯ್ನಾಡಿನ ಪ್ರೇಮ ಇವೇ ಈ ಮೂರು ಮೌಲ್ಯಗಳು.

## ಅಭ್ಯಾಸಗಳು

**I. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಅಥವಾ ಎರಡು ವಾಕ್ಯಗಳಲ್ಲಿ ಉತ್ತರಿಸಿ.**

1. ಫ್ರಾನ್ಸಿನ ಮಹಾಕ್ರಾಂತಿ ಉಳಿದ ಕ್ರಾಂತಿಗಳಿಗಿಂತ ಹೇಗೆ ಭಿನ್ನವಾಗಿತ್ತು ?
2. ಫ್ರಾನ್ಸಿನ ಕ್ರಾಂತಿಯನ್ನು ಪ್ರಭಾವಿಸಿದ ಬರಹಗಾರರು ಯಾರು ?
3. ಫ್ರಾನ್ಸಿನ ಸಮಾಜದ ಮೂರು ವರ್ಗಗಳನ್ನು ಹೆಸರಿಸಿ ಹಾಗೂ ಈ ವರ್ಗಗಳಲ್ಲಿದ್ದ ಸದಸ್ಯರು ಯಾರು ?
4. ಫ್ರಾನ್ಸ್ ಕ್ರಾಂತಿಯನ್ನು ಪ್ರಭಾವಿಸಿದ ವಾಲ್ಟೇರ್‌ನ ಘೋಷಣೆಗಳೇನು ?
5. ರಕ್ತಪಾತದ ಆಳ್ವಿಕೆ ಎಂದರೇನು ? ಈ ಆಳ್ವಿಕೆಯ ನಾಯಕರು ಯಾರು ?
6. ಅಮೆರಿಕ ಸ್ವಾತಂತ್ರ್ಯ ಸಮರ ಫ್ರಾನ್ಸಿನ ಕ್ರಾಂತಿಯನ್ನು ಹೇಗೆ ಪ್ರಭಾವಿಸಿತು ?
7. 'ಮಾನವನು ಸ್ವತಂತ್ರನಾಗಿ ಹುಟ್ಟುತ್ತಾನೆ. ಆದರೆ ಅವನನ್ನು ಎಲ್ಲೆಡೆ ಸಂಕೋಲೆಯಿಂದ ಬಂಧಿಸಲಾಗಿದೆ' – ಈ ಹೇಳಿಕೆ ಯಾರದು ? ಇದರ ಅರ್ಥವೇನು ?

**II. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಫ್ರಾನ್ಸಿನ ಕ್ರಾಂತಿಯ ಸಾಮಾಜಿಕ ಹಾಗೂ ರಾಜಕೀಯ ಕಾರಣಗಳನ್ನು ವಿವರಿಸಿ.
2. ನೆಪೋಲಿಯನ್ ಫ್ರಾನ್ಸಿನಲ್ಲಿ ಹೇಗೆ ಅಧಿಕಾರಕ್ಕೆ ಬಂದನು ?
3. ಫ್ರಾನ್ಸಿನ ಕ್ರಾಂತಿಯ ಕಾರಣ ಮತ್ತು ಪರಿಣಾಮಗಳನ್ನು ವಿವರಿಸಿ.

**III. ಬಿಟ್ಟ ಜಾಗಗಳನ್ನು ಭರ್ತಿ ಮಾಡಿ.**

1. ಫ್ರಾನ್ಸಿನ ರಾಜಕೀಯ ಕೈದಿಗಳಿದ್ದ ಸ್ಥಳ.........
2. ಫ್ರಾನ್ಸಿನ ಕ್ರಾಂತಿ......... ವರ್ಷದಲ್ಲಿ ಸಂಭವಿಸಿತು.
3. ರಕ್ತಪಾತದ ಆಳ್ವಿಕೆಯ ಅವಧಿಯಲ್ಲಿ ಜನರ ಸಾವಿಗೆ ಕಾರಣವಾದ ಯಂತ್ರ.........
4. ಜಾಕೊಬಿನ್ ಸದಸ್ಯರು......... ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇಟ್ಟಿದ್ದರು.
5. ನೆಪೋಲಿಯನ್ ಕ್ರೋಡೀಕರಿಸಿದ ಕಾನೂನುಗಳಿಗೆ......... ಎಂದು ಹೆಸರು.

## ಇಟಲಿಯ ಏಕೀಕರಣ

19ನೇ ಶತಮಾನದ ಕೊನೆಯ ವೇಳೆಗೆ ಇಟಲಿ ಹಲವಾರು ಭಾಗಗಳಾಗಿ ಹಂಚಿಹೋಗಿತ್ತು. ಟಸ್ಕನಿ, ಮೊದೆನ, ಪರ್ಮ, ಲೊಂಬಾರ್ಡಿ ಮತ್ತು ವೆನಿಷಿಯಾಗಳು ಆಸ್ಟ್ರಿಯಾಕ್ಕೆ ಸೇರಿದ್ದವು. ನೇಪಲ್ಸ್, ಸಿಸಿಲಿಗಳು ಫ್ರೆಂಚರ ವಶದಲ್ಲಿದ್ದವು. ರೊಮಾಗ್ನ, ಅಂಬ್ರಿಯ ಮತ್ತು ರೋಮ್ ಈ ಮೂರು ಪೋಪ್ ರಾಜ್ಯಗಳು ಪೋಪನ ವಶದಲ್ಲಿದ್ದವು. ಸಾರ್ಡಾನಿಯಾ ಮತ್ತು ಪೀಡ್ ಮಾಂಟ್ ಈ ಎರಡು ಪ್ರದೇಶಗಳು ಮಾತ್ರ ಇಟಲಿಯವನಾದ ದೊರೆ ವಿಕ್ಟರ್ ಎಮಾನ್ಯುಯೆಲ್‌ಗೆ ಸೇರಿದ್ದವು.

1871ರಲ್ಲಿ ಈ ಎಲ್ಲ ರಾಜ್ಯಗಳೂ ಒಂದುಗೂಡಿದವು. ಸಾರ್ಡಾನಿಯಾದ ದೊರೆ ವಿಕ್ಟರ್ ಎಮಾನ್ಯುಯೆಲ್ ಇಟಲಿಯ ರಾಜನಾಗಿ ನೇಮಕಗೊಂಡನು.

ಇಟಲಿಯ ಏಕೀಕರಣ ಮುಖ್ಯವಾಗಿ ಮೂವರ ಪರಿಶ್ರಮದ ಫಲ. ಅವರೆಂದರೆ ಮ್ಯಾಜಿನಿ, ಕಾವೂರ್ ಮತ್ತು ಗ್ಯಾರಿಬಾಲ್ಡಿ.

### ಮ್ಯಾಜಿನಿ (1805–1872)

ಮ್ಯಾಜಿನಿ ಒಬ್ಬ ಕ್ರಾಂತಿಕಾರೀ ಚಿಂತಕ ಹಾಗೂ ಉತ್ತಮ ಬರಹಗಾರ. ಇಟಲಿಯ ಏಕೀಕರಣದ ಪ್ರವಾದಿ. ಕಲ್ಲಿದ್ದಲು ಉರಿಸುವವರ ಒಂದು ಗುಪ್ತ ಸಂಸ್ಥೆಯಾದ **'ಕಾರ್ಬೊನರಿ'**ಗೆ ಮ್ಯಾಜಿನಿ ಸದಸ್ಯನಾಗಿದ್ದ. ಸದಸ್ಯರೆಲ್ಲ ಇಟಲಿಯನ್ನು ಒಂದು ರಾಷ್ಟ್ರವಾಗಿ ಮಾಡುವ ಪಣತೊಟ್ಟರು. ಮುಂದೆ 'ಯಂಗ್ ಇಟಲಿ' ಎಂಬ ತರುಣರ ಗುಪ್ತ ಸಂಸ್ಥೆಯನ್ನು 1831ರಲ್ಲಿ ಅವನು ಸ್ಥಾಪಿಸಿದ. ಅವರ ಘೋಷಣಾ ಶಬ್ದಗಳೆಂದರೆ 'ಏಕತೆ ಮತ್ತು ಸ್ವಾತಂತ್ರ್ಯ'. ವ್ಯಕ್ತಿ ಸ್ವಾತಂತ್ರ್ಯ, ಸಮಾನತೆ ಮತ್ತು ಮಾನವ ಬಂಧುತ್ವ ಅದರ ಧ್ಯೇಯಗಳು. 1846ರಲ್ಲಿ ಇಟಲಿಯಲ್ಲೆಲ್ಲ ದಂಗೆಗಳು ಎದ್ದವು. ಆಸ್ಟ್ರಿಯನ್‌ರನ್ನು ಇಟಲಿಯಿಂದ ಓಡಿಸುವುದೇ ಇವರ ಗುರಿಯಾಗಿತ್ತು. ದಂಗೆಕೋರರಿಗೂ ಆಸ್ಟ್ರಿಯನ್ನರಿಗೂ ಯುದ್ಧ ನಡೆದು ಇಟಲಿಯ ದಂಗೆಕೋರರ ಸೇನೆ 1848ರಲ್ಲಿ ಸೋಲನ್ನಪ್ಪಿತು. ಹೀಗೆ

ವಿಫಲನಾದರೂ ಇಟಲಿಯ ಏಕೀಕರಣ ಕ್ರಿಯೆಯನ್ನು ಆರಂಭಿಸಿದವನು ಮ್ಯಾಜಿನಿ ಎಂದು ಹೇಳಬಹುದು.

**ಕೌಂಟ್ ಕಾವೂರ್ (1810–1861)**

ಈತ 1852ರಲ್ಲಿ ಸಾರ್ಡಿನಿಯಾದ ದೊರೆಯ ಪ್ರಧಾನ ಮಂತ್ರಿಯಾಗಿ ನೇಮಕಗೊಂಡನು. ಜನತೆಯನ್ನು ಏಕೀಕರಣದತ್ತ ಹುರಿದುಂಬಿಸುವ ಸಲುವಾಗಿ 'ರಿಸಾರ್ಜಿಮೆಂತೊ' ಎಂಬ ಪತ್ರಿಕೆಯನ್ನು ಆರಂಭಿಸಿದನು. ಅಲ್ಲದೆ ಇಟಲಿಯ ಏಕೀಕರಣದ ವಿಷಯವಾಗಿ ಹಲವಾರು ಲೇಖನಗಳನ್ನು ಬರೆದನು.

1854ರಲ್ಲಿ ಪೂರ್ವ ಯೂರೋಪಿನಲ್ಲಿ ಕ್ರಿಮಿಯನ್ ಯುದ್ಧ ಆರಂಭವಾಯಿತು. ಕಾವೂರ್ ಫ್ರಾನ್ಸ್ ಮತ್ತು ಬ್ರಿಟನ್‌ಗಳ ಪರವಾಗಿ ರಷ್ಯದ ವಿರುದ್ಧ ತನ್ನ ಸೇನೆಯನ್ನು ಕಳಿಸಿದನು. ಯುದ್ಧದಲ್ಲಿ ಸೇರುವುದರ ಉದ್ದೇಶವು ಬ್ರಿಟನ್ ಮತ್ತು ಫ್ರಾನ್ಸ್‌ಗಳ ವಿಶ್ವಾಸವನ್ನು ಸಂಪಾದಿಸಿ ಇಟಲಿಯ ಏಕೀಕರಣವನ್ನು ಸಾಧಿಸುವುದೇ ಆಗಿತ್ತು. ಅವನ ಇಚ್ಛೆಯಂತೆಯೇ ಇಟಲಿಯ ಮಿತ್ರರಾಷ್ಟ್ರವಾಗಿ, ಇಟಲಿಯು ಆಸ್ಟ್ರಿಯದ ವಿರುದ್ಧ ಹೋರಾಡಿದಾಗ ಬ್ರಿಟನ್ ಸಹಾಯ ಮಾಡಿತು. ಆಸ್ಟ್ರಿಯಾ ಯುದ್ಧದಲ್ಲಿ ಪರಾಜಿತವಾಯಿತು. ಲೊಂಬಾರ್ಡಿಯನ್ನು ಪೀಡ್‌ಮಾಂಟ್‌ಗೆ ಸೇರಿಸಿಕೊಳ್ಳಲಾಯಿತು.

ಮುಂದೆ ಕಾವೂರ್ ಟಸ್ಕನಿಯಲ್ಲಿ ದಂಗೆಯನ್ನೆಬ್ಬಿಸಿದನು. ಮೊಡೆನ, ಪರ್ಮ ಮತ್ತು ರೊಮಾಗ್ನಗಳ ರಾಜ್ಯಗಳಲ್ಲಿ ಇಟಲಿಯ ಏಕೀಕರಣಕ್ಕೆ ಮಹತ್ವದ ಬೆಂಬಲ ದೊರಕಿತು. ಪೀಡ್‌ಮಾಂಟ್‌ನೊಂದಿಗೆ ಸೇರಿಕೊಳ್ಳಲು ಅವರೆಲ್ಲ ಒಪ್ಪಿದರು. ಕಾವೂರ್ 1866ರಲ್ಲಿ ದೈವಾಧೀನನಾದನು.

1866ರಲ್ಲಿ ಆಸ್ಟ್ರಿಯಾ – ಪ್ರಷ್ಯಾಗಳ ನಡುವೆ ಯುದ್ಧ ಆರಂಭವಾಯಿತು. ಇಟಲಿ ಯುದ್ಧದಲ್ಲಿ ಪ್ರಷ್ಯಾದ ಜತೆ ಸೇರಿತು. ಪ್ರಷ್ಯಾ ಗೆದ್ದಾಗ ಇಟಲಿಗೆ ವೆನಿಷಿಯಾ ಬಳುವಳಿಯಾಗಿ ಬಂತು. ಇಟಾಲಿಯನ್ ಸೇನೆ ರೋಮ್‌ಗೆ ನುಗ್ಗಿ ಅದನ್ನು ವಶಪಡಿಸಿಕೊಂಡಿತು. ಅನಂತರ ರೋಮ್ ಇಟಲಿಯ ರಾಜಧಾನಿಯಾಯಿತು.

**ಗ್ಯಾರಿಬಾಲ್ಡಿ (1807–1882)**

ಗ್ಯಾರಿಬಾಲ್ಡಿ ಒಬ್ಬ ಕ್ರಾಂತಿಕಾರೀ ಸೈನಿಕನಾಗಿದ್ದು ಇಟಲಿಯ ಏಕೀಕರಣಕ್ಕಾಗಿ ಹೋರಾಡಿದನು. ಮ್ಯಾಜಿನಿ ಸ್ಥಾಪಿಸಿದ 'ಯಂಗ್ ಇಟಲಿ'ಯ ಸದಸ್ಯನಾಗಿದ್ದನು. 1834ರಲ್ಲಿ ಒಂದು ದಂಗೆಯನ್ನು ವ್ಯವಸ್ಥೆಗೊಳಿಸಿ ಅದರಲ್ಲಿ ಸ್ವತಃ ಪಾಲುಗೊಂಡನು. ಸೆರೆಸಿಕ್ಕು ಮರಣದಂಡನೆಗೆ ಗುರಿಯಾದನು. ಆದರೆ ಸೆರೆಮನೆಯಿಂದ ತಪ್ಪಿಸಿಕೊಂಡು ದಕ್ಷಿಣ ಆಫ್ರಿಕಕ್ಕೆ ಓಡಿಹೋದನು. 1848ರಲ್ಲಿ ಇಟಲಿಗೆ ಹಿಂದಿರುಗಿ ಬಂದು ಒಂದು ದಂಗೆಯಲ್ಲಿ ಭಾಗವಹಿಸಿದನು. ಅಲ್ಲೂ ವಿಫಲನಾದಾಗ ನ್ಯೂಯಾರ್ಕಿಗೆ ಓಡಿಹೋಗಿ 1854ರಲ್ಲಿ ಇಟಲಿಗೆ ಮರಳಿದನು. ನಂತರ ಒಂದು ಸ್ವಯಂಸೇವಕ ಸೇನೆಯನ್ನು ಕಟ್ಟಿದನು. ಇದಕ್ಕೆ 'ಕೆಂಪಂಗಿಯವರು' ಎಂಬ ಹೆಸರು ಬಂತು. 1860ರಲ್ಲಿ ಸಿಸಿಲಿ, ನೇಪಲ್ಸ್‌ಗಳನ್ನು ಗೆದ್ದು ಫ್ರೆಂಚ್ ದೊರೆಗಳನ್ನು ಅಲ್ಲಿಂದ ಓಡಿಸಿದನು. ಅನಂತರ ತಾನು ಗೆದ್ದ ಸಿಸಿಲಿ,

ನೇಪಲ್ಸ್‌ಗಳನ್ನು ವಿಕ್ಟರ್ ಎಮಾನ್ಯುಯೆಲನಿಗೆ ಒಪ್ಪಿಸಿಕೊಟ್ಟು ತನ್ನ ಹುಟ್ಟೂರಿಗೆ ಹಿಂದಿರುಗಿ ಬೇಸಾಯ ವೃತ್ತಿಯನ್ನು ಮುಂದುವರಿಸಿದನು.

ಹೀಗೆ ಇಟಲಿಯ ಏಕೀಕರಣದ ಮೆದುಳು, ಆತ್ಮ ಮತ್ತು ಖಡ್ಗಗಳೆಂದು .ಈ ಮೂವರನ್ನೂ ಕರೆಯುತ್ತಾರೆ.

*1. ಮೆದುಳು:* ಕ್ರಾಂತಿಕಾರೀ ಚಿಂತಕ ಮ್ಯಾಜಿನಿ.

*2.ಆತ್ಮ:* ಕಾವೂರ್ ರಾಜಕೀಯ ಮುತ್ಸದ್ದಿ.

*3.ಖಡ್ಗ:* ಯೋಧ ಗ್ಯಾರಿಬಾಲ್ಡಿ.

ಈ ಮೂವರೂ ಇಟಲಿಯ ಏಕೀಕರಣಕ್ಕೆ ತಮ್ಮ ಬದುಕನ್ನು ಮುಡುಪಾಗಿಟ್ಟವರು.

## ಜರ್ಮನಿಯ ಏಕೀಕರಣ

18ನೇಯ ಶತಮಾನದ ಕೊನೆಯ ಹೊತ್ತಿಗೆ ಜರ್ಮನಿಯು ಸಣ್ಣ ಪುಟ್ಟ ರಾಜರುಗಳು ಆಳುತ್ತಿದ್ದ ಮುನ್ನೂರಕ್ಕಿಂತ ಹೆಚ್ಚಿನ ರಾಜ್ಯ ಘಟಕಗಳಾಗಿ ಚದುರಿಹೋಗಿತ್ತು. ನೆಪೋಲಿಯನ್ ಇವುಗಳನ್ನು ಗೆದ್ದುಕೊಂಡು ಮೂವತ್ತು ರಾಜ್ಯಗಳಾಗಿ ವಿಂಗಡಿಸಿ ಏಕೀಕರಣ ಕಾರ್ಯದಲ್ಲಿ ಮೊದಲಿಗನಾದನು. ಕೊನೆಗೆ ಸಂಯುಕ್ತ ಜರ್ಮನಿಯ ಏಕೀಕರಣ ವಿಧಾನಕ್ಕೆ ಇದು ನಾಂದಿ ಹಾಡಿತು. ನೆಪೋಲಿಯನ್ನನ ಪತನಾನಂತರ ಉದಾರವಾದೀ ಜರ್ಮನರು ಜರ್ಮನಿಯ ಏಕೀಕರಣದ ಆಶಯವನ್ನು ಇರಿಸಿಕೊಂಡರು. ಆದರೆ ನೆಪೋಲಿಯನ್ ಸೋತ ನಂತರ 1815ರಲ್ಲಿ ಪ್ರತಿ ಸುಧಾರಣಾವಾದಿಗಳ ವಿಯೆನ್ನಾ ಒಪ್ಪಂದದಿಂದ ಈ ಕನಸು ನುಚ್ಚು ನೂರಾಯಿತು. ಆಸ್ಟ್ರಿಯಾದ ನೇತೃತ್ವದಲ್ಲಿ ವಿಯನ್ನಾ ಕಾಂಗ್ರೆಸ್ ಮೂವತ್ತೊಂಬತ್ತು ಜರ್ಮನ್ ರಾಜ್ಯಗಳ ಒಕ್ಕೂಟವನ್ನು ಸೃಷ್ಟಿಸಿತು.

**ಝೂಾಲ್‌ವೆರಿನ್‌ನ ಉದಯ:** ಝೂಾಲ್‌ವೆರಿನ್ ಅಥವಾ ಸುಂಕದ ಮುಕ್ತ ಸಂಘ 1834ರಲ್ಲಿ ಸಭೆ ಸೇರಿ ಒಂದು ಜರ್ಮನ್ ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಸಾಗುವ ಸರಕುಗಳ ಮೇಲಿನ ಸುಂಕಗಳನ್ನು ತೆಗೆದುಹಾಕಿತು. ಇದರ ಫಲವಾಗಿ ವಾಣಿಜ್ಯ ವ್ಯವಹಾರ ವಿಸ್ತೃತಗೊಂಡಿತು. ಅಲ್ಲದೆ ಪ್ರಷ್ಯನ್ ಸಾಮ್ರಾಟನ ಸ್ಥಾನಮಾನವೂ ಸುಧಾರಿಸಿತು. 1848ರಲ್ಲಿ ಜರ್ಮನಿಯ ಪ್ರತಿಯೊಂದು ರಾಜ್ಯದಲ್ಲೂ ದಂಗೆಗಳೆದ್ದು ರಾಜರುಗಳು ಪ್ರಜಾಪ್ರಭುತ್ವದ ಸಂವಿಧಾನಗಳನ್ನು ನೀಡಲೇಬೇಕಾಯಿತು. ಫ್ರಾಂಕ್‌ಫರ್ಟನಲ್ಲಿ ಒಂದು ಸಂಸತ್ತಿನ ಸಭೆ ಸಮಾವೇಶಗೊಂಡು ಅಲ್ಲಿ ರಾಜವ್ಯವಸ್ಥೆಯ ಜರ್ಮನ್ ಒಕ್ಕೂಟವನ್ನು ಸ್ಥಾಪಿಸಬೇಕೆಂದು, ಪ್ರಷ್ಯಾದ ದೊರೆಯನ್ನು ಈ ಒಕ್ಕೂಟದ ಸಾರ್ವಭೌಮನನ್ನಾಗಿ ನೇಮಿಸಬೇಕೆಂದು ತೀರ್ಮಾನಿಸಲಾಯಿತು. ಆದರೆ ಪ್ರಷ್ಯದ ದೊರೆ ಈ ಕೋರಿಕೆಯನ್ನು ತಿರಸ್ಕರಿಸಿದನು. ಮುಂದೆ ದಮನಕಾಂಡ ನಡೆದು ಆರಂಭದ ಘಟ್ಟದಲ್ಲಿ ಜನರಿಗೆ ಕೊಟ್ಟಿದ್ದ ಹಕ್ಕುಗಳನ್ನು ಕೂಡ ಕಿತ್ತುಕೊಳ್ಳಲಾಯಿತು. ಸಾವಿರಾರು ಜರ್ಮನರು ದೇಶವನ್ನು ಬಿಟ್ಟು ಓಡಬೇಕಾಯಿತು. ಅನಂತರ ಪ್ರಷ್ಯನ್ ಶ್ರೀಮಂತ ಕುಟುಂಬಕ್ಕೆ ಸೇರಿದ ಒಟ್ಟೊ ವಾನ್ ಬಿಸ್ಮಾರ್ಕ್ ಎಂಬ ನಾಯಕನ ಉದಯವಾಯಿತು. ಜರ್ಮನಿಯ ಏಕೀಕರಣವನ್ನು

ಸಾಧಿಸಲು ಜಮೀನ್ದಾರ, ಶ್ರೀಮಂತ ವರ್ಗ ಹಾಗೂ ಸೇನೆಗಳ ಪ್ರಾಬಲ್ಯವನ್ನು ಉಳಿಸಿಕೊಳ್ಳುವುದು ಈತನ ಆಶಯವಾಗಿತ್ತು. ತನ್ನ ಏಕೀಕರಣ ನೀತಿಯನ್ನು ಆತ 'ರಕ್ತ ಮತ್ತು ಉಕ್ಕು'ಗಳ ಸೂತ್ರ ಎಂದು ಕರೆದನು. ಅಂದರೆ ಆತನದು ಯುದ್ಧನೀತಿ ಎಂದಂತಾಯಿತು.

ರಾಜಕೀಯ ನೈಪುಣ್ಯದಲ್ಲಿ ಬಿಸ್ಮಾರ್ಕ್‌ನನ್ನು ಮೀರಿಸುವವರೇ ಇರಲಿಲ್ಲ. ಬಿಸ್ಮಾರ್ಕ್ ಬಂದ ಮೇಲೆ ಯೂರೋಪಿನ ರಾಜಕೀಯ ಕೇಂದ್ರ ಬಿಂದು ಆಸ್ಟ್ರಿಯಾದ ರಾಜಧಾನಿ ವಿಯೆನ್ನಾದಿಂದ ಬರ್ಲಿನ್ನಿಗೆ ಸ್ಥಳಾಂತರಗೊಂಡಿತು.

ಈಗ ಆಗಬೇಕಾದದ್ದು ಏನು ಎಂಬ ಬಗೆಗೆ ಬಿಸ್ಮಾರ್ಕ್‌ನು ಸಂಸತ್ತಿನ ಸದಸ್ಯರನ್ನು ಕುರಿತು ಮಾಡಿದ ಉಪನ್ಯಾಸದಲ್ಲಿ ಮನವರಿಕೆ ಮಾಡಿಕೊಟ್ಟನು. ಆತನು ಅವರಿಗೆ ಎಚ್ಚರಿಕೆ ಕೊಟ್ಟದ್ದು ಹೀಗೆ:

"ಇಂದಿನ ಪ್ರಬಲ ಸಮಸ್ಯೆಗಳನ್ನು ಬಹುಮತದಿಂದ, ಭಾಷಣಗಳಿಂದ ಅಥವಾ ಠರಾವುಗಳಿಂದ ಪರಿಹರಿಸಲು ಸಾಧ್ಯವಿಲ್ಲ. ರಕ್ತ ಮತ್ತು ಉಕ್ಕಿನಿಂದ ಮಾತ್ರ ಸಾಧ್ಯ" ಬಿಸ್ಮಾರ್ಕ್‌ನಿಗೆ ಪ್ರಜಾಪ್ರಭುತ್ವದ ಬಗೆಗೆ ಅಪಾರ ದ್ವೇಷವಿತ್ತು. ಆತ ಹಳೆಯ ಕಾಲದ ಒಂದು ಪಳಯುಳಿಕೆಯಂತೆ ಕಾಣುತ್ತಾನೆ. ಆದರೆ ಸಂಕಲ್ಪ ಶಕ್ತಿ ಹಾಗೂ ಸಾಮರ್ಥ್ಯದ ಬಲದಿಂದ ಆತನು ಸಮಕಾಲೀನ ಲೋಕವನ್ನು ತನ್ನಿಚ್ಛೆಗೆ ಮಣಿಯುವಂತೆ ಮಾಡಿದನು.

1861ರಲ್ಲಿ ಮೊದಲನೆಯ ವಿಲಿಯಮ್ ಪ್ರಷ್ಯಾದ ದೊರೆಯಾಗಿ ಪಟ್ಟವೇರಿದ್ದು ಮತ್ತು ಬಿಸ್ಮಾರ್ಕ್ ಪ್ರಧಾನಮಂತ್ರಿಯಾಗಿ ನೇಮಕಗೊಂಡಿದ್ದು ಜರ್ಮನಿಯಲ್ಲಿ ಒಂದು ಹೊಸ ಶಕೆಯನ್ನು ಉದ್ಘಾಟಿಸಿದಂತಾಯಿತು. ಪ್ರಷ್ಯಾ ಮಾತ್ರ ಜರ್ಮನಿಯ ಒಕ್ಕೂಟವನ್ನು ಸಾಧಿಸಬಲ್ಲುದು ಎಂದು ಬಿಸ್ಮಾರ್ಕ್ ನಂಬಿದ್ದನು. ಜರ್ಮನಿಯ ಏಕೀಕರಣದ ಹಂಬಲ ಆತನಿಗೆ ಹೆಚ್ಚಾಯಿತು. ಪ್ರಷ್ಯನ್ ಸೇನೆಯನ್ನು ಪುನರ್ವ್ಯವಸ್ಥೆಗೊಳಿಸಿದ್ದರಿಂದ ಜರ್ಮನಿ ಆತನ ಕಾಲದಲ್ಲಿ ಯೂರೋಪಿನ ಪ್ರಬಲ ಸೇನಾಶಕ್ತಿಯಾಗಿ ಬೆಳೆಯಿತು.

ಬಿಸ್ಮಾರ್ಕನು ಜರ್ಮನಿಯ ಏಕೀಕರಣವನ್ನು ಮೂರು ಘಟ್ಟಗಳಲ್ಲಿ ಸಾಧಿಸಿದನು.

1. ಡೆನ್ಮಾರ್ಕಿನೊಂದಿಗೆ ಸಮರ
2. ಆಸ್ಟ್ರಿಯಾದೊಂದಿಗೆ ಸಮರ
3. ಫ್ರಾನ್ಸಿನೊಂದಿಗೆ ಸಮರ

### ಡೆನ್ಮಾರ್ಕಿನೊಂದಿಗೆ ಸಮರ

ಜರ್ಮನಿಯ ಹೊಲೆಸ್ಟೀನ್ ಮತ್ತು ಶ್ಲೆಸ್‌ವಿಗ್ ಜಿಲ್ಲೆಗಳು ಡೆನ್ಮಾರ್ಕಿನ ದೊರೆಯ ಆಡಳಿತಕ್ಕೆ ಒಳಪಟ್ಟಿದ್ದುವು. ಬಿಸ್ಮಾರ್ಕ್ ಆಸ್ಟ್ರಿಯಾದ ಸಹಾಯದಿಂದ ಡೇನಿಷ್ ರಾಜನ ಮೇಲೆ ಯುದ್ಧ ಹೂಡಿದನು. 1864ರಲ್ಲಿ ನಡೆದ ಯುದ್ಧದಲ್ಲಿ ಡೆನ್ಮಾರ್ಕ್ ಸೋತುಹೋಯಿತು. ಎರಡು ಜರ್ಮನ್ ಜಿಲ್ಲೆಗಳು ಪ್ರಷ್ಯಾದ ಆಧೀನಕ್ಕೆ ಬಂದುವು.

### ಆಸ್ಟ್ರಿಯಾದೊಂದಿಗೆ ಯುದ್ಧ

ಡೆನ್ಮಾರ್ಕ್ ಸಮರದಲ್ಲಿ ಗೆದ್ದ ಎರಡು ಜಿಲ್ಲೆಗಳ ಹಂಚಿಕೆಯ ವಿಷಯದಲ್ಲಿ

ಆಸ್ಟ್ರಿಯಾ–ಪ್ರಷ್ಯಾಗಳ ನಡುವೆ ಭಿನ್ನಾಭಿಪ್ರಾಯ ತಲೆದೋರಿತು. ಬಿಸ್ಮಾರ್ಕನು ಜರ್ಮನ್ ರಾಜಕಾರಣದಲ್ಲಿ ಆಸ್ಟ್ರಿಯಾ ತಲೆಹಾಕದಂತೆ ಮಾಡಲು ತೀರ್ಮಾನಿಸಿದನು. 1866ರಲ್ಲಿ ಯುದ್ಧ ನಡೆದು ಆಸ್ಟ್ರಿಯಾ ಸೋತಿತು. ಪ್ರಾಗ್ ಸಂಧಾನದ ಪ್ರಕಾರ ಆಸ್ಟ್ರಿಯಾ ಎರಡು ಜಿಲ್ಲೆಗಳ ಮೇಲಿನ ಹಕ್ಕನ್ನು ಪ್ರಷ್ಯಾಕ್ಕೆ ಬಿಟ್ಟುಕೊಟ್ಟಿತು. ಇಟಲಿಗೆ ವೆನಿಸ್ ಅನ್ನು ಬಿಟ್ಟುಕೊಟ್ಟಿತು ಮತ್ತು ಜರ್ಮನ್ ಮೈತ್ರಿಕೂಟದಿಂದ ಹೊರಗುಳಿಯಿತು.

### ಫ್ರಾನ್ಸ್ – ಪ್ರಷ್ಯಾ ಯುದ್ಧ

1871ರಲ್ಲಿ ನಡೆದ ಫ್ರಾನ್ಸ್ ಮತ್ತು ಪ್ರಷ್ಯಾ ನಡುವಣ ಯುದ್ಧವು ಜರ್ಮನಿಯ ಸಮಗ್ರ ಏಕೀಕರಣಕ್ಕೆ ಸಹಾಯಕವಾಯಿತು. 1870ರಲ್ಲಿ ಫ್ರಾನ್ಸಿನ ಚಕ್ರವರ್ತಿಯಾಗಿದ್ದವನು ಮೂರನೇ ನೆಪೋಲಿಯನ್. ಈತನ ಅಧಿಕಾರ ಪತನದ ಹಾದಿಯಲ್ಲಿತ್ತು. ಈತನು ಪ್ರಷ್ಯದ ಮೇಲೆ ಯುದ್ಧ ಹೂಡಿದನು. ಈ ಸೈನಿಕ ವಿಜಯದಿಂದ ತನ್ನ ಸಾಮ್ರಾಜ್ಯವನ್ನು ಉಳಿಸಿಕೊಳ್ಳಬಹುದೆಂಬುದು ಈತನ ಆಶಯವಾಗಿತ್ತು. ಸ್ಪೇನಿನ ಸಿಂಹಾಸನದ ಉತ್ತರಾಧಿಕಾರಿಯ ವಿಷಯವನ್ನು ನೆಪಮಾಡಿಕೊಂಡು ಪ್ರಷ್ಯಾದ ಮೇಲೆ ಯುದ್ಧಕ್ಕೆ ಬಂದನು. ಫ್ರೆಂಚ್ ಸೇನೆ ಸೋತು ಮೂರನೇ ನೆಪೋಲಿಯನ್ ಕೈಸೆರೆ ಸಿಕ್ಕಿದನು. ಆಗ ಫ್ರಾಂಕ್‌ಫರ್ಟ್ ಸಂಧಾನ ಏರ್ಪಟ್ಟು ಆದರಂತೆ ಫ್ರಾನ್ಸ್ ತನ್ನ ವಶವಿದ್ದ ಜರ್ಮನ್ ಪ್ರದೇಶಗಳಾದ ಆಲ್ಸೇಸ್ ಮತ್ತು ಲೊರೈನ್‌ನ ಒಂದು ಭಾಗವನ್ನೂ ಪ್ರಷ್ಯಾಗೆ ಬಿಟ್ಟು ಕೊಡಬೇಕಾಯಿತು. ಈ ಯುದ್ಧದಿಂದಾಗಿ ಜರ್ಮನಿಯ ಏಕೀಕರಣ ಕ್ರಿಯೆ ಸಂಪೂರ್ಣವಾಗಲು ಸಹಾಯಕವಾಯಿತು. ಏಕೆಂದರೆ ಬಿಸ್ಮಾರ್ಕನು ಉಳಿದ ಜರ್ಮನ್ ರಾಜ್ಯಗಳನ್ನೂ ಜರ್ಮನ್ ಒಕ್ಕೂಟಕ್ಕೆ ಸೇರಿಸಿಕೊಂಡನು.

ಬಿಸ್ಮಾರ್ಕನು ವರ್ಸೇಲ್ಸಿನ ಪ್ರಸಿದ್ಧವಾದ 'ಹಾಲ್ ಆಫ್ ಮಿರರ್ಸ್'ನಲ್ಲಿ ದೊರೆ ಒಂದನೇ ವಿಲಿಯಂನನ್ನು ಸಂಯುಕ್ತ ಜರ್ಮನಿಯ ಸಾರ್ವಭೌಮನನ್ನಾಗಿ ಮಾಡಿದನು. ದೊರೆಯ ಪ್ರಧಾನ ಮಂತ್ರಿಯಾಗಿ ತಾನೇ ಮುಂದುವರಿದನು. ಈ ಏಕೀಕರಣದ ನಂತರ ಜರ್ಮನಿಯು ಯೂರೋಪಿನ ಪ್ರಬಲ ಶಕ್ತಿಯಾಗಿ ಮೇಲೆದ್ದಿತು.

## ಅಭ್ಯಾಸ

**I. ಕೆಳಕಂಡ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. ಇಟಲಿಯ ಏಕೀಕರಣಕ್ಕೆ ಮುನ್ನ ಇಟಲಿಯ ಯಾವ ಪ್ರಾಂತಗಳು ಆಸ್ಟ್ರಿಯಾದ ಅಧೀನದಲ್ಲಿದ್ದುವು ?
2. ಇಟಲಿಯ ಏಕೀಕರಣಕ್ಕೆ ಕಾರಣಕರ್ತರಾದವರು ಯಾರು ?
3. ಜರ್ಮನಿಯ ಏಕೀಕರಣದ ಶಿಲ್ಪಿ ಯಾರು ? ಆತನು ಅನುಸರಿಸಿದ ಸೂತ್ರವೇನು ?
4. "ಇಂದಿನ ಸಮಸ್ಯೆಗಳನ್ನು ಭಾಷಣಗಳಿಂದ, ಠರಾವುಗಳಿಂದ ಪರಿಹರಿಸಲು

ಸಾಧ್ಯವಿಲ್ಲ. ಸಮಸ್ಯೆಗಳ ಪರಿಹಾರ ರಕ್ತ ಮತ್ತು ಉಕ್ಕಿನಿಂದ'' ಈ ಹೇಳಿಕೆ ಯಾರದು ? ಅದು ಆತನ ವ್ಯಕ್ತಿತ್ವದ ಬಗ್ಗೆ ಏನು ಹೇಳುತ್ತದೆ.

**II. ಕೆಳಕಂಡ ಪ್ರಶ್ನೆಗಳಿಗೆ ಸಂಕ್ಷೇಪವಾಗಿ ಉತ್ತರಿಸಿ.**

1. ಇಟಲಿಯ ಏಕೀಕರಣದಲ್ಲಿ ಕೆಳಕಂಡ ನಾಯಕರ ಪಾತ್ರವೇನು ?
   ಅ) ಕಾವೂರ್, ಆ) ಮ್ಯಾಜಿನಿ, ಇ) ಗ್ಯಾರಿಬಾಲ್ಡಿ.
2. ಬಿಸ್ಮಾರ್ಕನು ಜರ್ಮನಿಯ ಏಕೀಕರಣವನ್ನು ಸಾಧಿಸಿದುದು ಹೇಗೆ ?

**III. ಭರ್ತಿ ಮಾಡಿ.**

1. ಏಕತೆ ಮತ್ತು ಸ್ವಾತಂತ್ರ್ಯ ಇವು....... ನ ಘೋಷಣಾ ಶಬ್ದಗಳಾಗಿದ್ದುವು.
2. 'ಯಂಗ್ ಇಟಲಿ'ಯ ಸ್ಥಾಪಕ.....
3. ಕಾವೂರ್ ಆರಂಭಿಸಿದ ಪತ್ರಿಕೆಯ ಹೆಸರು......
4. ಹತ್ತು ಸಾವಿರ 'ಕೆಂಪಂಗಿಯವರ' ಸೇನೆಯನ್ನು ಕಟ್ಟಿದವನು........
5. ಇಟಲಿಯ ಏಕೀಕರಣದ ವಿಷಯದಲ್ಲಿ
   ಮ್ಯಾಜಿನಿ ಅದರ.........
   ಕಾವೂರ್ ಅದರ........
   ಗ್ಯಾಲಿಬಾಲ್ಡಿ ಅದರ........
6. ಬಿಸ್ಮಾರ್ಕನು ಜರ್ಮನಿಯ ಏಕೀಕರಣಕ್ಕೆ...... ಸೂತ್ರವನ್ನು ಪಾಲಿಸಿದನು.

**ಚಟುವಟಿಕೆ**

ಇಟಲಿಯ ಭೂಪಟದಲ್ಲಿ ಆಸ್ಟ್ರಿಯಾ ವಶದಲ್ಲಿದ್ದ, ಡೆನ್ಮಾರ್ಕಿನ ಮತ್ತು ಪೋಪ್‌ನ ವಶದಲ್ಲಿದ್ದ ರಾಜ್ಯಗಳನ್ನು ಗುರುತಿಸಿ.

## ಆಫ್ರಿಕಾ ವಿಭಜನೆ

ಜಗತ್ತಿನ ಎರಡನೆಯ ದೊಡ್ಡ ಖಂಡವೆಂದರೆ ಆಫ್ರಿಕಾ. 15ನೇ ಶತಮಾನದವರೆಗೆ ಅದು ನಡುಗಡ್ಡೆಯಂತೆ ಒಂಟಿಯಾಗಿತ್ತು. ಪೋರ್ಚುಗೀಸರು ಆಫ್ರಿಕದ ದಕ್ಷಿಣ ಕರಾವಳಿಯಲ್ಲಿ ಕೆಲವು ವ್ಯವಹಾರ ರಕ್ಷಕ ಠಾಣೆಗಳನ್ನು ಇರಿಸಿಕೊಂಡಿದ್ದರು. ಹಾಲೆಂಡ್ ಮತ್ತು ಸ್ಪೇನ್ ಕೂಡ ಕೆಲವು ವ್ಯವಹಾರ ಕೇಂದ್ರಗಳನ್ನು ಇರಿಸಿಕೊಂಡಿದ್ದವು. ಹತ್ತೊಂಬತ್ತನೆಯ ಶತಮಾನದಲ್ಲಿ ಆಫ್ರಿಕಾ ಖಂಡವನ್ನು ಅನ್ವೇಷಿಸಲಾಯಿತು. ಈ 'ಕಗ್ಗತ್ತಲೆಯ ಖಂಡ'ವನ್ನು ಡೇವಿಡ್ ಲಿವಿಂಗ್‌ಸ್ಟನ್ ಅನ್ವೇಷಿಸಿದನು. ಇನ್ನೊಬ್ಬ ಅನ್ವೇಷಕ ಹೆನ್ರಿ ಎಂ. ಸ್ಟಾನ್ಲಿ, ಕಾಂಗೋ ವಲಯವನ್ನು ಪರಿಶೋಧಿಸಿದನು. ಈ ಶೋಧನೆಗಳ ಕಥೆಗಳು ಯೂರೋಪಿಯನ್ನರನ್ನು ಈ ಫಲವತ್ತಾದ ಭೂ ಪ್ರದೇಶಗಳ ಕಡೆಗೆ ಆಕರ್ಷಿಸಿದವು.

ಸ್ಟಾನ್ಲಿಯ ಅನ್ವೇಷಣೆಗಳು ಬೆಲ್ಜಿಯಂನ ದೊರೆ ಎರಡನೆ ಲಿಯೋಪೋಲ್ಡನ ಮೇಲೆ ಪರಿಣಾಮ ಬೀರಿದವು. ಆಫ್ರಿಕದ ಜನತೆಯನ್ನು 'ನಾಗರಿಕರನ್ನಾಗಿ ಮಾಡುವ'

ಉದ್ದೇಶದಿಂದ ಆತನು ಒಂದು ಅಂತರ ರಾಷ್ಟ್ರೀಯ ಪರಿಷತ್ತನ್ನು ಕರೆದನು. ಆಫ್ರಿಕದ ಸ್ಥಾನಿಕ ಮುಖಂಡರೊಂದಿಗೆ ಬೇಕಾದಷ್ಟು ಒಪ್ಪಂದಗಳನ್ನು ಮಾಡಿಕೊಂಡನು. ಹೀಗೆ ಅವನಿಗೆ ವಿಸ್ತಾರವಾದ ಭೂಮಿ ದಕ್ಕಿತು. ಆಫ್ರಿಕಾದಲ್ಲಿ 'ಕಾಂಗೋ ಫ್ರೀ ಸ್ಟೇಟ್' ಅನ್ನು ಸ್ಥಾಪಿಸಿದನು. ಮುಂದೆ ಇದು ಬೆಲ್ಜಿಯಮ್‌ನ ವಸಾಹತಾಯಿತು.

ಲಿಯೋಪೋಲ್ಡ್‌ನ ಉದಾಹರಣೆಯನ್ನಿರಿಸಿಕೊಂಡು ಬೇರೆ ಯೂರೋಪಿಯನ್ ದೇಶಗಳು ಆಫ್ರಿಕದಲ್ಲಿ ತಮಗೊಂದು ಭಾಗ ಪಡೆಯಲು ಪ್ರಯತ್ನಿಸಿದವು. ಬ್ರಿಟಿಷರು 1815ರಲ್ಲಿ 'ಕೇಪ್ ಕಾಲೊನಿ'ಯನ್ನು ಆಕ್ರಮಿಸಿದರು. ಮುಂದೆ ರಿಪಬ್ಲಿಕ್ ಆಫ್ ಟ್ರಾನ್ಸ್‌ವಾಲ್ ಮತ್ತು ಆರೆಂಜ್ ಫ್ರೀ ಸ್ಟೇಟ್‌ಗಳನ್ನು ಸ್ಥಾಪಿಸಲಾಯಿತು. ತರುವಾಯ ತಾವು ಗೆದ್ದ ಎಲ್ಲ ಪ್ರದೇಶಗಳನ್ನೂ ಒಗ್ಗೂಡಿಸಿ 'ಸಂಯುಕ್ತ ದಕ್ಷಿಣ ಆಫ್ರಿಕಾ'ವನ್ನು ಸ್ಥಾಪಿಸಿದರು.

ಸುಯೆಜ್ ಕಾಲುವೆಯ ನಿರ್ಮಾಣದ ನಂತರ (1869) ಬ್ರಿಟನ್ ಈಜಿಪ್ಟನ್ನು ಕೈವಶ ಮಾಡಿಕೊಳ್ಳಬೇಕೆಂದು ಆಶಿಸಿತು. ಸುಯೆಜ್ ಕಾಲುವೆ ಕಂಪೆನಿಯ ಹೆಚ್ಚಿನ ಷೇರುಗಳನ್ನೆಲ್ಲ ತಾನೇ ಕೊಂಡುಕೊಂಡು ಕಂಪನಿಯ ಆಡಳಿತದಲ್ಲಿ ತನ್ನ ಯಜಮಾನಿಕೆಯನ್ನು ಸ್ಥಾಪಿಸಿತು. ಸ್ವಲ್ಪವೇ ಕಾಲದಲ್ಲಿ ದಕ್ಷಿಣಕ್ಕೆ ನುಗ್ಗಿ ಸೂಡಾನನ್ನು ಇಂಗ್ಲಿಷರು ಆಕ್ರಮಿಸಿದರು. ಬ್ರಿಟಿಷರು ಇಷ್ಟೇ ಅಲ್ಲದೆ ಕೆನ್ಯಾ, ಉಗಾಂಡ, ಬ್ರಿಟಿಷ್ ಸೋಮಾಲಿ ಲ್ಯಾಂಡ್‌ಗಳನ್ನು ಆಕ್ರಮಿಸಿದರು. ಸೆಸಿಲ್ ರ್ಹೋಡ್ಸ್ ದಕ್ಷಿಣ ಆಫ್ರಿಕಾದಲ್ಲಿ ಒಂದು ವಸಾಹತವನ್ನು ಸ್ಥಾಪಿಸಿದ. ಅದಕ್ಕೆ ರೊಡೇಸಿಯಾ ಎಂಬ ಹೆಸರು ಬಂತು. 1914ರ ವೇಳೆಗೆ ಬ್ರಿಟನ್ ಆಫ್ರಿಕದ ಹಿರಿಯ ಸಾರ್ವಭೌಮ ಶಕ್ತಿಯಾಗಿ ಮೆರೆಯಿತು.

ಫ್ರೆಂಚರೂ ವಸಾಹತುಗಳನ್ನು ಸ್ಥಾಪಿಸುವ ಉತ್ಸಾಹದಿಂದ ಹೊರಟು ಆಲ್ಜಿಯರ್ಸ್, ಸಹರಾ, ಟ್ಯೂನಿಸ್ ಮತ್ತು ಮೊರೊಕ್ಕೋಗಳನ್ನು ಗೆದ್ದುಕೊಂಡರು. ಮುಂದೆ ಫ್ರಾನ್ಸ್ ಮಡಗಾಸ್ಕರ್ ದ್ವೀಪವನ್ನು ಕೂಡ ಆಕ್ರಮಿಸಿಕೊಂಡಿತು. ಪೋರ್ಚುಗೀಸರು ಅಂಗೋಲ ಮೊಝಾಂಬಿಕ್‌ಗಳನ್ನು ಪಡೆದುಕೊಂಡರು. ಜರ್ಮನಿಯೂ ಕೊನೆಯ ಹಂತದಲ್ಲಿ ವಸಾಹತು ಸ್ಪರ್ಧೆಯಲ್ಲಿ ಸೇರಿಕೊಂಡಿತು. ಆಗ್ನೇಯ ಆಫ್ರಿಕಾದಲ್ಲಿ ಅದು ವಸಾಹತನ್ನು ಸ್ಥಾಪಿಸಿ ಕ್ಯಾಮರೂನ್, ಟೋಗೋ ಭೂಪ್ರದೇಶಗಳನ್ನು ವಶಪಡಿಸಿಕೊಂಡಿತು. ಪೂರ್ವದಲ್ಲಿ ಜರ್ಮನರು ಟಾಂಗನೀಕವನ್ನು ಪಡೆದರು. ಇಟಲಿಗೆ ಲಿಬಿಯ, ಸೊಮಾಲಿ ಲ್ಯಾಂಡ್ ಮತ್ತು ಎರಿಟ್ರಿಯಾಗಳು ಲಭಿಸಿದವು. ಸ್ಪೇನ್ ಕೂಡ ಮೊರೊಕ್ಕೊ, ಕ್ಯಾನರಿ ದ್ವೀಪಗಳಲ್ಲಿ ಒಂದು ಭಾಗವನ್ನು ಆಕ್ರಮಿಸಿಕೊಂಡಿತು.

ಕೆಲವು ಬಾರಿ ಯೂರೋಪಿಯನ್ ಶಕ್ತಿಗಳ ನಡುವೆ ವಸಾಹತುಗಳನ್ನು ಸ್ಥಾಪಿಸುವ ಸಂದರ್ಭದಲ್ಲಿ ಘರ್ಷಣೆಗಳು ನಡೆದದ್ದು ನಿಜ. ಆದರೆ ಅವರು ತಮ್ಮ ವಿವಾದಗಳನ್ನು ಸೌಹಾರ್ದಯುತವಾಗಿ ಪರಿಹರಿಸಿಕೊಂಡರು. ಹೀಗೆ 20ನೆಯ ಶತಮಾನದ ಆದಿ ಭಾಗದಲ್ಲಿ ಯೂರೋಪಿಯನ್ನರು ಎಥಿಯೋಪಿಯಾ ಮತ್ತು ಲೈಬೀರಿಯಾಗಳನ್ನು ಹೊರತುಪಡಿಸಿ ಉಳಿದ ಸಮಸ್ತ ಭಾಗವನ್ನು ಆಕ್ರಮಿಸಿದ್ದರು.

ಅವರು ಆಫ್ರಿಕದ ಪ್ರಾಕೃತಿಕ ಸಂಪತ್ತನ್ನು ತಮ್ಮ ಸ್ವಾರ್ಥಕ್ಕಾಗಿ ದುಡಿಸಿಕೊಂಡರು. ಆಫ್ರಿಕದ ಶ್ರೀಮಂತ ಪ್ರಾಕೃತಿಕ ಸಂಪತ್ತಿನಿಂದ ಯೂರೋಪು ಪೂರ್ಣ ಲಾಭ ಪಡೆದು

ಶ್ರೀಮಂತಿಕೆಯಿಂದ ಮೆರೆಯಿತಾದರೂ ಆಫ್ರಿಕದ ಮೂಲನಿವಾಸಿಗಳು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ತುಂಬ ಹಿಂದುಳಿದರು. ಯೂರೋಪಿಯನ್ನರು ಇತರ ಏಷ್ಯನ್ನರನ್ನು ಶೋಷಿಸಿದಂತೆ ಆಫ್ರಿಕನ್ನರನ್ನೂ ಶೋಷಿಸಿದರು. ಈ ದೇಶಗಳು ಕೂಡ ದಾಸ್ಯದ ವಿರುದ್ಧ ಹಾಗೂ ದಮನದ ವಿರುದ್ಧ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಗಳನ್ನು ಆರಂಭಿಸಿದವು.

## ಅಭ್ಯಾಸ

**I. ಈ ಕೆಳಕಂಡ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ಎರಡು ಮೂರು ವಾಕ್ಯಗಳಲ್ಲಿ ಉತ್ತರಿಸಿ.**

1. ಆಫ್ರಿಕದಲ್ಲಿ ವಸಾಹತುಗಳನ್ನು ಸ್ಥಾಪಿಸಿದ ಯೂರೋಪಿನ ರಾಜ್ಯಗಳು ಯಾವುವು ?
2. "ಎರಡು ರಾಜ್ಯಗಳನ್ನು ಹೊರತುಪಡಿಸಿ ಇಡೀ ಆಫ್ರಿಕಾವನ್ನು ವಸಾಹತುಕರಣಕ್ಕೆ ಒಳಪಡಿಸಲಾಯಿತು". ಆ ಎರಡು ರಾಜ್ಯಗಳು ಯಾವುವು ?
3. ಸಾಮ್ರಾಜ್ಯಷಾಹೀ ಆಕಾಂಕ್ಷೆಗಳಿಗೆ ಆಫ್ರಿಕವು ಕೇಂದ್ರ ಬಿಂದುವಾದದ್ದು ಏಕೆ ?
4. ಪೂರ್ವ ಮತ್ತು ಮಧ್ಯ ಆಫ್ರಿಕಾಗಳಲ್ಲಿ ಬೆಲ್ಜಿಯಮ್‌ನ ಲಿಯೊಪೋಲ್ಡ್ ಭೂಪ್ರದೇಶಗಳನ್ನು ಪಡೆದದ್ದು ಹೇಗೆ ?
6. ಆಫ್ರಿಕಾದ ವಿಭಜನೆಯಲ್ಲಿ ಜಗತ್ತಿನ ವಿವಿಧ ರಾಜ್ಯಗಳ ಪ್ರಭಾವವೇನು ?

**II. ಭರ್ತಿ ಮಾಡಿ.**

1. ಆಫ್ರಿಕಾದಲ್ಲಿ ಸಾರ್ವಭೌಮಶಕ್ತಿಯ ಧಾಳಿಯ ಮುಖಂಡನೆಂದರೆ.........
2. ಪೂರ್ವ ಆಫ್ರಿಕಾದ ಮಡಗಾಸ್ಕರ್........ರ ವಸಾಹತಾಗಿತ್ತು.

**III. ಚಟುವಟಿಕೆ**

ಆಫ್ರಿಕಾದ ನಕ್ಷೆಯಲ್ಲಿ ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್, ಜರ್ಮನಿಗಳ ವಶಕ್ಕೆ ಒಳಗಾದ ವಸಾಹತುಗಳನ್ನು ಗುರುತಿಸಿ.

## 19ನೆಯ ಶತಮಾನದ ಅವಧಿಯಲ್ಲಿ ಚೀನಾ

### ಮಂಚೂ ಸಾಮ್ರಾಜ್ಯ

19ನೆಯ ಶತಮಾನದವರೆಗೆ ಚೀನಾ ದೇಶವನ್ನು ಮಂಚೂ ರಾಜವಂಶ (1644–1912) ಆಳಿತು. ಮಂಚೂ ರಾಜರ ಅವಧಿಯಲ್ಲಿ, ಅಮೆರಿಕ, ಜಪಾನ್ ಹಾಗೂ ಯೂರೋಪಿಯನ್ನರ ಸಂಪರ್ಕಕ್ಕೆ ಬರುವ ಮುನ್ನ ಚೀನಾ ದೇಶ ಸಾಕಷ್ಟು ಗರಿಷ್ಠ ಪ್ರಮಾಣದ ಭೌಗೋಳಿಕ ವಿಸ್ತರಣೆಯನ್ನು ಹೊಂದಿತ್ತು. ಕ್ರಿ.ಶ. 1800ರ ವೇಳೆಗೆ ಚೀನಾದ ಜನಸಂಖ್ಯೆ 300 ಮಿಲಿಯನ್ ಆಗಿತ್ತು. ಮಂಚೂ ಚಕ್ರವರ್ತಿಗಳು ತಾವು ಇಡೀ ಜಗತ್ತಿನ

ಪರಮ ಶಕ್ತಿಶಾಲಿ ದೊರೆಗಳೆಂಬ ಭಾವನೆಯನ್ನು ಹೊಂದಿದ್ದರು. ಅವರು ಇತರರನ್ನು ಅನಾಗರಿಕರೆಂದೂ, ದಾಳಿಕೋರರೆಂದೂ ತಮಗೆ ಅಧೀನರೆಂದೂ ಗಣಿಸಿದ್ದರು. ಅವರ ಸಾಮ್ರಾಜ್ಯ ಸ್ವಾವಲಂಬಿಯಾಗಿತ್ತು. ಒಂದು ವಿಶೇಷವಾದ ರಾಜ ಶಾಸನವು ಚೀನಾಕ್ಕೆ, ಯೂರೋಪ್ ದೇಶಗಳ ವಸ್ತುಗಳನ್ನು ತರಿಸುವ ಅಗತ್ಯವಿಲ್ಲವೆಂದು ಘೋಷಿಸಿತು.

## ಯೂರೋಪಿಯನ್ನರ ಆಗಮನ

19ನೆಯ ಶತಮಾನದಲ್ಲಿ ಯೂರೋಪಿಯನ್ನರು ಶಕ್ತಿಶಾಲಿಗಳಾದರು. ವೈಜ್ಞಾನಿಕ ಹಾಗೂ ತಾಂತ್ರಿಕ ಕ್ಷೇತ್ರಗಳಲ್ಲಿ ನಡೆದ ಕ್ರಾಂತಿ, ಕೈಗಾರಿಕಾ ಕ್ರಾಂತಿ ಹಾಗೂ ಬಂಡವಾಳ ಶಾಹಿಯ ಬೆಳವಣಿಗೆ, ಇವರು ಶಕ್ತಿಶಾಲಿಗಳಾಗಲು ಕಾರಣವೆನಿಸಿದವು. ವ್ಯಾಪಾರಕ್ಕೋಸ್ಕರ ಅವರು ಭೂ ಹಾಗೂ ಜಲಮಾರ್ಗದ ಮೂಲಕ ಚೀನಾ ತಲುಪಿದರು. ಪೋರ್ಚುಗೀಸರು, ಸ್ಪೇನ್ ದೇಶದವರು, ಡಚ್ಚರು, ಫ್ರೆಂಚರು, ಇಂಗ್ಲಿಷರು, ಇಟಲಿಯನ್ನರು, ಅಮೆರಿಕನ್ನರು ಮತ್ತು ಜರ್ಮನ್ನರು ಸಮುದ್ರ ಮಾರ್ಗದ ಮೂಲಕ ಚೀನಾ ತಲುಪಿದರು. ರಷ್ಯನ್ನರು ಭೂ ಮಾರ್ಗದ ಮೂಲಕ ಸಂಪರ್ಕ ಸಾಧಿಸಿದರು.

1868ರ ನಂತರ ಜಪಾನಿಯರು ಚೀನಾ ಪ್ರವೇಶ ಮಾಡಿದರು. ಯೂರೋಪಿಯನ್ನರನ್ನು ಅನುಸರಿಸಿ ಅವರೂ ಸಹ ಕೈಗಾರಿಕಾ ಕ್ರಾಂತಿಯನ್ನು ಹಾಗೂ ಆಧುನಿಕತೆಯನ್ನು ಆರಂಭಿಸಿದ್ದರು. ಕ್ರೈಸ್ತ ಪಾದ್ರಿಗಳು ಧರ್ಮ ಪ್ರಚಾರಕ್ಕಾಗಿ ಚೀನಾಕ್ಕೆ ಬಂದರು. ಚೀನಾದ ಪಿಂಗಾಣಿ ವಸ್ತುಗಳು, ರೇಷ್ಮೆ ಹಾಗೂ ಚಹಾ ಯೂರೋಪ್ ಮತ್ತು ಅಮೆರಿಕಗಳಲ್ಲಿ ಹೆಚ್ಚಿನ ಬೇಡಿಕೆ ಗಳಿಸಿದ್ದವು. ಜೊತೆಗೆ ವಿದೇಶೀಯರು ಪಡೆಯಬೇಕೆಂದುಕೊಂಡಿದ್ದ ರಾಜತಾಂತ್ರಿಕ ಹಾಗೂ ವಾಣಿಜ್ಯ ಸ್ವರೂಪದ ಒಪ್ಪಂದಗಳಿಗೆ ಮಂಚೂ ರಾಜರು ಒಪ್ಪಲಿಲ್ಲ. ಚಿನ್ನ ಚೀನಾ ದೇಶದ ಮಾರುಕಟ್ಟೆಗೆ ಹರಿದು ಬರುತ್ತಿದ್ದಂತೆ ಇಂಗ್ಲಿಷರು ಅಫೀಮಿನ ಕಳ್ಳಸಾಗಣೆ ಮಾಡಲು ಆರಂಭಿಸಿದರು. ಇದು ಅಫೀಮು ಯುದ್ಧಗಳಿಗೆ ಕಾರಣವಾಯ್ತು.

## ಎರಡು ಅಫೀಮು ಯುದ್ಧಗಳು

1839–49ರ ನಡುವೆ ಮೊದಲ ಅಫೀಮು ಯುದ್ಧ ನಡೆಯಿತು. ಈ ಯುದ್ಧದಲ್ಲಿ ಇಂಗ್ಲೆಂಡ್ ಚೀನಾ ದೇಶವನ್ನು ಸೋಲಿಸಿ ನಾನ್‌ಕಿಂಗ್ ಒಪ್ಪಂದವನ್ನು (1842) ಮಾಡಿಕೊಂಡಿತು. ಈ ಒಪ್ಪಂದದ ಪ್ರಕಾರ ಚೀನಾ ಇಂಗ್ಲೆಂಡ್ ದೇಶಕ್ಕೆ 6 ಮಿಲಿಯನ್ ಡಾಲರ್‌ಗಳನ್ನು ಯುದ್ಧದ ವೆಚ್ಚವನ್ನಾಗಿ ಕೊಟ್ಟಿತು. ಚೀನಾ ದೇಶದ 5 ಬಂದರುಗಳು ವಾಣಿಜ್ಯ ಹಾಗೂ ವ್ಯಾಪಾರಗಳಿಗೆ ತೆರೆಯಲ್ಪಟ್ಟವು. ಇಂಗ್ಲೆಂಡ್ ದೇಶಕ್ಕೆ ಹಾಂಕಾಂಗ್ ದೊರೆಯಿತು. ವ್ಯಾಪಾರದ ಮೇಲಿದ್ದ ಎಲ್ಲ ನಿರ್ಬಂಧಗಳನ್ನು ತೆಗೆದುಹಾಕಲಾಯಿತು. ಕ್ರೈಸ್ತ ಪಾದ್ರಿಗಳಿಗೆ ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡಲು ಅನುಮತಿ ಸಿಕ್ಕಿತು.

"ನಾನ್ಕಿಂಗ್" ಒಪ್ಪಂದದ ಅನೇಕ ಷರತ್ತುಗಳನ್ನು ಜಾರಿಗೆ ತರಲು ಮಂಚು ಸರ್ಕಾರಕ್ಕೆ ಸಾಧ್ಯವಾಗಲಿಲ್ಲ. 'ಆ್ಯರೋ' ಎಂಬ ಹೆಸರಿನ ಬ್ರಿಟಿಷ್ ನೌಕೆಯನ್ನು ಸೆರೆ ಹಿಡಿಯಲಾಯಿತು. ಚೀನಾದ ನ್ಯಾಯಧೀಶನೊಬ್ಬ ಫ್ರಾನ್ಸ್ ದೇಶದ ಧರ್ಮಪ್ರಚಾರಕನೊಬ್ಬನಿಗೆ ಮರಣ ದಂಡನೆ ವಿಧಿಸಿದ. ಈ ಘಟನೆ ಫ್ರಾನ್ಸಿನಲ್ಲಿ

ಅಸಮಾಧಾನವನ್ನು ಉಂಟು ಮಾಡಿತು. ಹಾಗೂ ಈ ನೆವದಲ್ಲಿ ಅದು ಚೀನಾದ ಮೇಲೆ ಯುದ್ಧವನ್ನು ಘೋಷಿಸಿತು. ಅಲ್ಲದೆ ಚೀನಾ ಸರ್ಕಾರದಿಂದ ಅನೇಕ ವಿನಾಯತಿಗಳನ್ನು ಪಡೆಯಿತು. ಹೀಗೆ ಇಂಗ್ಲೆಂಡ್ ಮತ್ತು ಫ್ರಾನ್ಸ್ ಒಟ್ಟಾಗಿ ಸೇರಿ 2ನೆಯ ಅಫೀಮು ಯುದ್ಧದಲ್ಲಿ ಚೀನಾವನ್ನು ಸೋಲಿಸಿದವು. ಈ ಯುದ್ಧ ಟಿಯಂಟಿಸಿನ್ ಮತ್ತು ನಂತರ ಪೀಕಿಂಗ್ ಒಪ್ಪಂದಗಳೊಂದಿಗೆ ಮುಕ್ತಾಯ ಹೊಂದಿತು.

ಈ ಒಪ್ಪಂದಗಳಂತೆ, ಯೂರೋಪು ದೇಶಗಳ ವ್ಯಾಪಾರಕ್ಕಾಗಿ ಚೀನಾ ಹೊಸ ಬಂದರುಗಳನ್ನು ತೆರೆಯಿತು. ವಿದೇಶಗಳ ರಾಯಭಾರಿಗಳು, ರಾಜತಾಂತ್ರಿಕ ವರ್ಗದವರು ಪೀಕಿಂಗಿನಲ್ಲಿ ನೆಲೆಸಲು ಅನುಮತಿ ಕೊಡಲಾಯಿತು. ರಫ್ತು ಮತ್ತು ಆಮದಿನ ತೆರಿಗೆಗಳನ್ನು ಯೂರೋಪಿಯನ್ ಶಕ್ತಿಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ನಿರ್ಧರಿಸಿಕೊಂಡವು. ಅಫೀಮು ವ್ಯಾಪಾರ ಕ್ರಮಬದ್ಧವಾಯಿತು. ಹೀಗೆ ಎರಡು ಅಫೀಮು ಯುದ್ಧಗಳು ಚೀನಾವನ್ನು ಆರ್ಥಿಕವಾಗಿ ಹಾಗೂ ಭೌಗೋಳಿಕವಾಗಿ ಶಕ್ತಿಗುಂದಿಸಿದುವು.

**ಚೀನಾದಲ್ಲಿ ದಂಗೆಗಳು**

ಪಾಶ್ಚಿಮಾತ್ಯ ದೇಶಗಳ ಸಂಪರ್ಕದಿಂದಾಗಿ ಚೀನಾ ಹತ್ತೊಂಬತ್ತನೆಯ ಶತಮಾನದಲ್ಲಿ ಎರಡು ದಂಗೆಗಳನ್ನು ಅನುಭವಿಸಿತು. ಒಂದು ದಂಗೆಯನ್ನು ತೈಪಿಂಗ್ ದಂಗೆ (1850–64)ಎಂದು ಕರೆಯಲಾಗಿದೆ. ಈ ದಂಗೆಯ ನಾಯಕತ್ವವನ್ನು ಚೀನಾ ದೇಶದ ಕ್ರೈಸ್ತ ಪ್ರಜೆ ಹೂಂಗ್ ಹ್ಸು ಚುವಾನ್ ಎಂಬುವನು ವಹಿಸಿದ್ದನು. ಮಂಚು ಸರಕಾರದ ವಿರುದ್ಧ ನಡೆದ ಈ ದಂಗೆಯನ್ನು ವಿದೇಶಿ ಸೈನ್ಯದ ನೆರವಿನಿಂದ ದಮನ ಮಾಡಲಾಯಿತು. ಬೊಕ್ಕಸ ಸಂಪೂರ್ಣ ಖಾಲಿಯಾಯಿತು. ಸುಮಾರು ಎರಡರಿಂದ ನಾಲ್ಕು ಕೋಟಿ ಚೀನಾದ ಪ್ರಜೆಗಳು ಈ ದಂಗೆಯಲ್ಲಿ ಸಾವನ್ನಪ್ಪಿದರು.

ಎರಡನೆಯ ದಂಗೆಯನ್ನು 'ಬಾಕ್ಸರ್' ದಂಗೆ ಎಂದು ಕರೆಯಲಾಯಿತು. ಇದು 1899ರಲ್ಲಿ ಆರಂಭವಾಯಿತು. ವಿದೇಶೀಯರಿಂದ ಚೀನಾ ದೇಶದ ಆರ್ಥಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಶೋಷಣೆ ಇದಕ್ಕೆ ಕಾರಣವಾಯಿತು. ಇದು ಪಾಶ್ಚಿಮಾತ್ಯರ ವಿರುದ್ಧದ ದಂಗೆಯಾಗಿತ್ತು, ಮಂಚೂ ರಾಜರ ಪರವಾಗಿತ್ತು, ಮಂಚೂ ರಾಜವಂಶ, 'ಬಾಕ್ಸರ್' ಎಂಬ ದಂಗೆಕೋರರನ್ನು ಬೆಂಬಲಿಸಿತು. ಅಂತಿಮವಾಗಿ ಇಂಗ್ಲೆಂಡ್, ರಷ್ಯಾ, ಫ್ರಾನ್ಸ್, ಯು.ಎಸ್.ಎ., ಜಪಾನ್ ಮುಂತಾದ ದೇಶಗಳ ಸೈನಿಕರಿಂದ ನಡೆದ ಜಂಟೀ ಕಾರ್ಯಾಚರಣೆ ಮೂಲಕ ಬಾಕ್ಸರ್ ದಂಗೆಯನ್ನು ದಮನ ಮಾಡಲಾಯಿತು. ಮಂಚೂ ರಾಜ ಕ್ವಾಂಗ್ ಹೂ ಮತ್ತು ವಿಧವೆ ರಾಣಿ ತ್ಸು–ಸಿ ಮಂಚೂರಿಯಾಕ್ಕೆ ಓಡಿ ಹೋದರು. ನಂತರ ವಿದೇಶೀ ಶಕ್ತಿಗಳ ಆಮಂತ್ರಣದಿಂದ ಅವರು ಚೀನಾಕ್ಕೆ ವಾಪಸ್ಸು ಬಂದರು. ಕೆಲವು ಷರತ್ತುಗಳ ಆಧಾರದ ಮೇಲೆ ಅವರನ್ನು ರಾಜ್ಯವಾಳಲು ಕೇಳಿಕೊಳ್ಳಲಾಯಿತು.

ಚೀನಾ ಅತ್ಯಧಿಕ ಮೊತ್ತದ ಹಣವನ್ನು ಯುದ್ಧದ ಖರ್ಚಿನಂಶವಾಗಿ ಕೊಡಬೇಕಾಯಿತು. ಈ ದಂಗೆಗಳು ಚೀನಾವನ್ನು ಮತ್ತಷ್ಟು ದುರ್ಬಲವನ್ನಾಗಿ ಮಾಡಿದವು.

**ಜಪಾನಿನೊಡನೆ ಯುದ್ಧ**

ಕೊರಿಯಾ ದೇಶದ ಹಂಚಿಕೆ ವಿಷಯವಾಗಿ ಜಪಾನ್ ಚೀನಾದ ಮೇಲೆ 1894ರಲ್ಲಿ ಯುದ್ಧವನ್ನು ಘೋಷಿಸಿತು. ಈ ಯುದ್ಧ 1895ರವರೆಗೆ ನಡೆಯಿತು. ಯುದ್ಧವು 'ಶಿಮೊನೊಸೊಕಿ' ಒಪ್ಪಂದದೊಂದಿಗೆ ಮುಕ್ತಾಯವಾಯ್ತು. ಈ ಯುದ್ಧ ಚೀನಾಕ್ಕೆ ಅವಮಾನಕರ ಪ್ರಸಂಗವೆನಿಸಿತು. ಫಾರ್ಮೊಸಾವನ್ನು ಜಪಾನಿಗೆ ಕೊಡಲಾಯಿತು. ಜಪಾನಿನ ಉದ್ಯಮಿಗಳಿಗೆ ಆರ್ಥಿಕ ವಿನಾಯಿತಿಗಳು ಸಿಕ್ಕಿದವು. ಯುದ್ಧದ ನಂತರ ಮಂಚೂ ಚಕ್ರವರ್ತಿ ಕ್ವಾಂಗ್ ಹೂ ಚೀನಾವನ್ನು ಆಧುನಿಕ ರಾಷ್ಟ್ರವನ್ನಾಗಿ ಮಾಡಲು ಪ್ರಯತ್ನಿಸಿದನು. ಆದರೆ ಸಂಪ್ರದಾಯವಾದಿಗಳ ಗುಂಪು ತ್ಸು-ಸಿ (TSU HSI) ನೇತೃತ್ವದಲ್ಲಿ ಈ ಸುಧಾರಣಾ ಚಳುವಳಿಯನ್ನು ವಿರೋಧಿಸಿತು. ಈ ರೀತಿ ವಿದೇಶಿಯರ ಜೊತೆ ಮೂರು ಯುದ್ಧಗಳು, ಎರಡು ದಂಗೆಗಳು ಚೀನಾವನ್ನು ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಸಾಂಸ್ಕೃತಿಕವಾಗಿ ದುರ್ಬಲವನ್ನಾಗಿ ಮಾಡಿದವು. ಇವು ಮಂಚೂ ವಂಶದ ವಿರುದ್ಧ ಸಮರ ಸಾರಲು ಹಾಗೂ ಮಂಚೂ ವಂಶದ ಅವನತಿಗೆ (20ನೆಯ ಶತಮಾನ) ಕಾರಣವಾದವು.

## 19ನೆಯ ಶತಮಾನದಲ್ಲಿ ಜಪಾನ್

**ಜಪಾನಿನಲ್ಲಿ 'ಊಳಿಗಮಾನ್ಯ ಪದ್ಧತಿ'**

1868ರವರೆಗೆ ಜಪಾನ್ ಒಂದು ಊಳಿಗಮಾನ್ಯ (ಫ್ಯೂಢಲ್) ದೇಶವಾಗಿತ್ತು. ಆರ್ಥಿಕವಾಗಿ ಹಾಗೂ ಸೈನಿಕ ಮಟ್ಟದಲ್ಲಿ ಜಪಾನ್ ಹಿಂದುಳಿದ ರಾಷ್ಟ್ರವಾಗಿತ್ತು. ಜಪಾನ್ ದೇಶದ ಚಕ್ರವರ್ತಿ, ಕಿಯೊತೊ ನಗರದಲ್ಲಿ ವಾಸಿಸುತ್ತಿದ್ದನು. ಆದರೆ ವಾಸ್ತವವಾಗಿ ನಿಜವಾದ ಅಧಿಕಾರ ಶೋಗೂನ್ ಅಥವಾ ಸೈನ್ಯ ಮತ್ತು ಆಡಳಿತದ ಮುಖ್ಯಸ್ಥನದಾಗಿತ್ತು. ಶೋಗೂನ್, ಅಟೋಕಿಯೋ ಸಮೀಪದ 'ಯೆದಾ' (Yeda) ಎಂಬಲ್ಲಿ ವಾಸಿಸುತ್ತಿದ್ದನು. ಇಡೀ ದೇಶ ಅನೇಕ ಪಾಳಾಯುಗಳಾಗಿ ಹೋಳಾಗಿತ್ತು. ಪ್ರತಿ ಪಾಳಯು ಡೈಮೊ ಎಂಬ ಪಾಳೆಯುಗಾರನ ಅಧೀನದಲ್ಲಿತ್ತು. ಡೈಮೊಗಳ ಅಧೀನದಲ್ಲಿ ಅನೇಕ ಸೈನಿಕರಿದ್ದರು. ಇವರಿಗೆ ಸಮುರೈ ಎನ್ನುತ್ತಿದ್ದರು. ಸಮುರೈ ಲಾರ್ಡ್‌ಗಳಿಗೆ ನಿಷ್ಠರಾಗಿದ್ದರು. 1603ರಿಂದ 1868ರ ಅವಧಿಯಲ್ಲಿ 'ತೊಕುಗವ' ಕುಟುಂಬ ಅನುವಂಶಿಕವಾಗಿ ಶೋಗೂನ್ ಪದವಿಯನ್ನು ವಶಕ್ಕೆ ಪಡೆಯಿತು. ವರ್ತಕರು, ರೈತರು ಮತ್ತು ಕುಶಲ ಕೆಲಸಗಾರರು ಯುದ್ಧ ಮಾಡುವ ವರ್ಗದ ಕೆಳಗಿನ ಹಂತದಲ್ಲಿದ್ದರು. ಇವರಿಗೆ ತೆರಿಗೆ ಹೊರೆ ಅಧಿಕವಾಗಿತ್ತು. 1854ರವರೆಗೆ ಜಪಾನ್ ಹೊರ ಪ್ರಪಂಚದ ದೇಶಗಳೊಡನೆ ಯಾವ ಸಂಪರ್ಕವನ್ನೂ ಹೊಂದಿಲ್ಲದೆ ಪ್ರತ್ಯೇಕವಾಗಿತ್ತು. 1825ರಲ್ಲಿ ಯು.ಎಸ್.ಎ. ಜಪಾನಿನೊಡನೆ ಸಂಪರ್ಕ ಹೊಂದಲು ಪ್ರಯತ್ನಿಸಿತು.

**ಕಮೊಡರ್ ಪೆರಿಯ ಆಗಮನ**

ಆರಂಭದಲ್ಲಿ ಜಪಾನ್ ದೇಶದೊಂದಿಗೆ ವ್ಯಾಪಾರ ಸಂಪರ್ಕ ಹೊಂದುವ

ಪ್ರಯತ್ನಗಳು ಫಲಕಾರಿ ಎನಿಸಲಿಲ್ಲ. ಯು.ಎಸ್.ಎ. ದೇಶ ಜಪಾನ್ ದೇಶದ ಸಂಪರ್ಕ ಬಯಸಲು ಮೂರು ಕಾರಣಗಳಿದ್ದವು.

1. ಅಮೆರಿಕ ದೇಶಕ್ಕೆ ಸೇರಿದ್ದ ಸಿಬ್ಬಂದಿಯನ್ನು ಹೊಂದಿದ್ದ ಹಡಗು ನೌಕಾಘಾತವಾದಾಗ ತೊಕುಗುವ ಸರ್ಕಾರ ಇದನ್ನು ಉಪೇಕ್ಷೆ ಮಾಡಿತು. ಅಮೆರಿಕ ಈ ಸಮಸ್ಯೆಯನ್ನು ಪರಿಹರಿಸಬೇಕಾಗಿತ್ತು.
2. ಅಮೆರಿಕದ ನೌಕೆಗಳು ಏಷ್ಯಾ ದೇಶಗಳ ಜೊತೆ ವ್ಯಾಪಾರ ಮಾಡುವಾಗ ಅವುಗಳಿಗೆ ಜಪಾನ್ ದೇಶದ ಬಂದರುಗಳ ಸೌಲಭ್ಯ ಬೇಕಾಗಿದ್ದವು. ಈ ಸೌಲಭ್ಯಗಳು ಹಡಗುಗಳಿಗೆ ಕುಡಿಯುವ ನೀರು ಮತ್ತು ಕಲ್ಲಿದ್ದಲನ್ನು ಒದಗಿಸುವುದನ್ನು ಒಳಗೊಂಡಿದ್ದವು.
3. ಅಮೆರಿಕ ಅತ್ಯಂತ ಲಾಭದಾಯಕವಾದ ವ್ಯಾಪಾರದಿಂದ ಆಕರ್ಷಿಸಲ್ಪಟ್ಟಿತ್ತು. ಆದ್ದರಿಂದ ಫಿಲ್ ಮೋರ್ ಎಂಬ ಅಮೆರಿಕದ ಅಧ್ಯಕ್ಷ ನೌಕಾಪಡೆಯ ಅಧಿಕಾರಿ ಕಮೊಡರ್ ಮಾಥ್ಯೂ ಪೆರಿಯನ್ನು ಮಾತುಕತೆಗಾಗಿ ಹಾಗೂ ಒಪ್ಪಂದಕ್ಕಾಗಿ ಕಳುಹಿಸಿದ. ಇವನು ಜುಲೈ 8, 1853ರಂದು ನಾಲ್ಕು ಆಧುನಿಕ ಯುದ್ಧನೌಕೆಗಳೊಂದಿಗೆ ಜಪಾನಿಗೆ ಬಂದನು. ಇವನು ತೊಕುಗವಾ ಸರ್ಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಉತ್ತರಕ್ಕಾಗಿ ಕೆಲವು ದಿನದ ನಂತರ ಬರುವುದಾಗಿ ತಿಳಿಸಿದನು. ಮತ್ತೆ ಫೆಬ್ರವರಿ 13, 1854ರಲ್ಲಿ ಏಳು ಹಡಗುಗಳ ಜೊತೆ ಬಂದಿಳಿದನು. ಇದರಿಂದಾಗಿ ತೊಕುಗವಾ ಸರ್ಕಾರ ಮಾರ್ಚ್ 31, 1854ರಂದು ಬಲವಂತವಾಗಿ ಒಂದು ಒಪ್ಪಂದಕ್ಕೆ ಬರಲೇಬೇಕಾಯಿತು. ಈ ಒಪ್ಪಂದದಿಂದ ಅಮೆರಿಕೆಗೆ ಅನೇಕ ವಿನಾಯತಿಗಳು ದೊರೆತವು. ನಂತರ ಆ ದೇಶದ ಪ್ರತಿನಿಧಿಯೊಬ್ಬ ಅಲ್ಲಿ ನೆಲೆಸಲು ಅನುಮತಿ ಸಿಕ್ಕಿತು. ಇದನ್ನು ಅನುಸರಿಸಿ ಉಳಿದ ಯೂರೋಪ್ ರಾಷ್ಟ್ರಗಳು ಅನೇಕ ಆರ್ಥಿಕ ವಿನಾಯತಿಗಳನ್ನು ಜಪಾನಿನಿಂದ ಪಡೆಯುವಲ್ಲಿ ಯಶಸ್ವಿಯಾದವು.

## 'ಮೈಜಿ' ಆಳ್ವಿಕೆಯ ಪುನರ್‌ಸ್ಥಾಪನೆ

ಜಪಾನ್ ದೇಶಕ್ಕೆ ವಿದೇಶಿಯರ ಆಗಮನ ಮತ್ತು ಜಪಾನಿನೊಂದಿಗೆ ಅವರು ಬಲವಂತವಾಗಿ ಮಾಡಿಕೊಂಡ ಒಪ್ಪಂದಗಳು ರಾಜಕೀಯ ಅನೈಕ್ಯತೆಯನ್ನು ಉಂಟು ಮಾಡಿದವು. 1854ಹಾಗೂ 1868ರ ನಡುವೆ ತೊಕುಗವಾ ಸರ್ಕಾರ ಜನಪ್ರಿಯತೆಯನ್ನು ಕಳೆದುಕೊಂಡಿತು. ಶೋಗೂನ್ ಪದವಿಯನ್ನು ತ್ಯಾಗ ಮಾಡಬೇಕೆಂಬ ಒತ್ತಾಯ ಬಂತು. ಶೋಗೂನ್ ಪದವಿಯೂ ರದ್ದಾಯಿತು. 18 ವರ್ಷ ವಯಸ್ಸಿನ ಮುತ್ಸುಹಿತೊ ಚಕ್ರವರ್ತಿಯನ್ನು ಕಿಯೊತೊದಿಂದ ಟೋಕಿಯೊಗೆ ಕರೆತರಲಾಯಿತು. ಊಳಿಗಮಾನ್ಯ ವ್ಯವಸ್ಥೆಯ ಮುಖಂಡರಿಂದ ಚಕ್ರವರ್ತಿಗೆ ಸಂಪೂರ್ಣ ಅಧಿಕಾರವನ್ನು ಕೊಡಲಾಯಿತು. ಇದರಿಂದ ತೊಕುಗವಾ ಆಡಳಿತ ಕೊನೆಗೊಂಡಿತು. ಈ ಘಟನೆಯನ್ನು 1868ರ "ಮೈಜಿ ಪುನಃ ಸ್ಥಾಪನಾ ಚಳುವಳಿ" ಎಂದು ಕರೆಯಲಾಗಿದೆ. 1868ರಿಂದ 1900ರ ಅವಧಿಯಲ್ಲಿ

ಜಪಾನ್ ಸಣ್ಣ ಹಿಂದುಳಿದ ರಾಷ್ಟ್ರದ ಸ್ಥಿತಿಯಿಂದ ಆಧುನಿಕವಾದ ಯೂರೋಪಿನ ರಾಷ್ಟ್ರವನ್ನು ಸರಿಹೊಂದುವ ಹಂತವನ್ನು ಕ್ರಮಿಸಲು ಶಕ್ತವಾಯಿತು.

**'ಮೈಜಿ ಕ್ರಾಂತಿ':** 1868ರ ನಂತರ ಜಪಾನಿನಲ್ಲಿ ಜಾರಿಗೆ ತಂದ ಬದಲಾವಣೆಗಳನ್ನು ಮೈಜಿ ಕ್ರಾಂತಿ ಎಂದು ಕರೆಯಲಾಗಿದೆ. ಇದೊಂದು ರಕ್ತರಹಿತ ಕ್ರಾಂತಿ. ಆಡಳಿತ ವರ್ಗಗಳು ಚಕ್ರವರ್ತಿಯ ಅನುಮತಿಯ ಮೇರೆಗೆ ಎಲ್ಲ ಕ್ಷೇತ್ರಗಳಲ್ಲು ಸುಧಾರಣೆಗಳನ್ನು ಜಾರಿಗೆ ತಂದವು. ಊಳಿಗಮಾನ್ಯ ವ್ಯವಸ್ಥೆ ರದ್ದಾಯಿತು. ಸಮುರೈ ಮತ್ತು ಉಳಿದ ಊಳಿಗಮಾನ್ಯ ವ್ಯವಸ್ಥೆಯ ವರ್ಗಗಳ ಜನರು ಭೂಮಿಯ ಮೇಲೆ ಹೊಂದಿದ್ದ ಹಿಡಿತವನ್ನು ಬಿಟ್ಟುಕೊಟ್ಟರು. ಅವರಿಗೆ ಪರಿಹಾರವನ್ನು ಕೊಡಲಾಯಿತು. 1889ರಲ್ಲಿ ಲಿಖಿತ ರಾಜ್ಯಾಂಗವನ್ನು ಒಪ್ಪಿಕೊಳ್ಳಲಾಯಿತು. ರಾಷ್ಟ್ರೀಯ ಸೈನ್ಯವನ್ನು ಹುಟ್ಟುಹಾಕಲಾಯಿತು. ಕೇಂದ್ರೀಕೃತವಾದ ಆಡಳಿತವನ್ನು ಜಾರಿಗೆ ತರಲಾಯಿತು. ವಿದೇಶಗಳ ಪರಿಣತರನ್ನು ಜಪಾನಿನಲ್ಲಿ ರೈಲು ಮಾರ್ಗಗಳನ್ನು ನಿರ್ಮಿಸಲು, ಕೈಗಾರಿಕೆಗಳನ್ನು ಸ್ಥಾಪಿಸಲು, ಆಧುನಿಕ ಬ್ಯಾಂಕುಗಳನ್ನು ತೆರೆಯಲು ಆಹ್ವಾನಿಸಲಾಯಿತು. ಆಧುನಿಕ ಕಾನೂನುಗಳನ್ನು ಜಾರಿಗೆ ತರಲಾಯಿತು. ಪ್ರಾಥಮಿಕ ಹಂತದಿಂದ ವಿಶ್ವವಿದ್ಯಾಲಯದವರೆಗೆ ಶಿಕ್ಷಣ ಸಂಸ್ಥೆಗಳನ್ನು ತೆರೆಯಲಾಯಿತು. ಕೃಷಿಯನ್ನು ಆಧುನಿಕಗೊಳಿಸಲಾಯಿತು. ದೊಡ್ಡ ಸಂಸ್ಥೆಗಳಾದ ಜೈಬತ್ಸು ಮುಂತಾದವು ಜಪಾನ್ ಕೈಗಾರಿಕೆಗಳಲ್ಲಿ ಪ್ರಗತಿ ಸಾಧಿಸಲು ಸಹಾಯ ಮಾಡಿದವು. ಕೇವಲ ಕೆಲವೇ ವರ್ಷಗಳ ಅವಧಿಯಲ್ಲಿ ಜಪಾನ್ ಬಲಿಷ್ಠವಾದ ಸೈನ್ಯವನ್ನೂ, ನೌಕಾಪಡೆಯನ್ನೂ, ಪರಿಣಾಮಕಾರಿ ಸರ್ಕಾರವನ್ನೂ ಮತ್ತು ಸಮೃದ್ಧವಾದ ಕೈಗಾರಿಕಾ ಹಾಗೂ ವಾಣಿಜ್ಯ ನೆಲೆಗಟ್ಟನ್ನೂ ಹೊಂದಲು ಸಾಧ್ಯವಾಯಿತು.

## ಆಕ್ರಮಣಕಾರಿ ವಿದೇಶಾಂಗ ನೀತಿ

1868ರ ನಂತರ ಜಪಾನ್ ಕೈಗಾರಿಕಾ ಪ್ರಧಾನ ದೇಶವಾಗಿ ರೂಪುಗೊಂಡನಂತರ ಏಷ್ಯಾದಲ್ಲಿ ತನ್ನ ಸಾಮ್ರಾಜ್ಯವನ್ನು ಹರಡಲು ಪ್ರಯತ್ನಿಸಿತು. ಇದಕ್ಕೆ ಎರಡು ಕಾರಣಗಳಿದ್ದವು. 1) ಬೆಳೆಯುತ್ತಿದ್ದ ತನ್ನ ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳ ಅಗತ್ಯವಿತ್ತು. 2) ತಾನು ತಯಾರಿಸಿದ ಸಿದ್ಧ ವಸ್ತುಗಳಿಗೆ ಮಾರುಕಟ್ಟೆಯ ಸೌಲಭ್ಯ ಬೇಕಾಗಿತ್ತು. ಯೂರೋಪಿನ ದೇಶಗಳ ಅನುಕರಣಾ ಶೈಲಿಯಲ್ಲಿ ಜಪಾನ್ ತನ್ನ ನೆರೆಹೊರೆಯ ದೇಶಗಳಾದ ಕೊರಿಯಾ, ಮಂಚೂರಿಯಾ ಹಾಗೂ ಚೀನಾಗಳನ್ನು ವಶಪಡಿಸಿಕೊಳ್ಳಲು ಕಾರ್ಯಶೀಲವಾಯಿತು. ಜಪಾನ್, ಚೀನಾವನ್ನು ಸೋಲಿಸಿ ಕೊರಿಯಾವನ್ನು ಹಿಡಿತದಲ್ಲಿ ಇಟ್ಟುಕೊಂಡಿತು. ಮಂಚೂರಿಯದಲ್ಲಿ ಆರ್ಥಿಕ ಸೌಲಭ್ಯಗಳನ್ನು ಅದು ಗಳಿಸಿತು. ಚೀನಾದಿಂದ ಫಾರ್ಮೋಸಾ ದ್ವೀಪವನ್ನು ವಶಪಡಿಸಿಕೊಂಡಿತು. 1900ರ ವೇಳೆಗೆ ಜಪಾನ್ ಬಲಿಷ್ಠ ಕೈಗಾರಿಕಾ ದೇಶವಾಗಿ ಪೂರ್ವ ಏಷ್ಯಾದಲ್ಲಿ ಸಾಮ್ರಾಜ್ಯವನ್ನು ನಿರ್ಮಾಣ ಮಾಡುವ ಉದ್ದೇಶ ಹೊಂದಿತು. ಈ ದಿಸೆಯಲ್ಲಿ ಜಪಾನ್ ದೇಶದ ಚಟುವಟಿಕೆಗಳು 20ನೆಯ ಶತಮಾನದಲ್ಲಿ ಹೆಚ್ಚಾದವು.

## ಅಭ್ಯಾಸಗಳು

**I. ಕೆಳಗಿನ ಪ್ರಶ್ನೆಗಳಿಗೆ 2–3 ವಾಕ್ಯಗಳಲ್ಲಿ ಉತ್ತರಿಸಿ.**

1. ಮಂಚೂ ಆಡಳಿತದ ಮೇಲೆ ನಾನ್ಕಿಂಗ್ ಮತ್ತು ಪೀಕಿಂಗ್ ಒಪ್ಪಂದಗಳ ಪರಿಣಾಮವೇನು ?
2. ಜಪಾನಿನಲ್ಲಿ ಶೋಗೂನರುಗಳ ಆಡಳಿತವನ್ನು ವಿವರಿಸಿ.
3. ಯು.ಎಸ್.ಎ. ಜಪಾನ್ ಜೊತೆ ವ್ಯಾಪಾರ ಸಂಪರ್ಕ ಹೊಂದಲು ಏಕೆ ಬಯಸಿತು ?
4. ಮೈಜಿ ಪುನರ್ನಿರ್ಮಾಣಕ್ಕೂ ಮೈಜಿ ಕ್ರಾಂತಿಗೂ ಇರುವ ವ್ಯತ್ಯಾಸವೇನು ?
5. ಜಪಾನ್ ಆಕ್ರಮಣಕಾರಿ ವಿದೇಶಾಂಗ ನೀತಿಯನ್ನು ಅನುಸರಿಸಲು ಕಾರಣವೇನು ?

**II. ಬಿಟ್ಟ ಸ್ಥಳ ತುಂಬಿಸಿ.**

1. 1800ರಲ್ಲಿ ಚೀನಾದ ಜನಸಂಖ್ಯೆ.........
2. ಚೀನಾದಲ್ಲಿ ಅಫೀಮು ಕಳ್ಳ ಸಾಗಣೆಯ ಪರಿಣಾಮ......
3. ತೈಪಿಂಗ್ ದಂಗೆಯ ನಾಯಕತ್ವವನ್ನು ವಹಿಸಿದ್ದ ಚೀನಾದ ಕ್ರೈಸ್ತ ವ್ಯಕ್ತಿ..........
4. ಚೀನಾ 1899ರಲ್ಲಿ ನಡೆದ ಎರಡನೆಯ ದಂಗೆಯನ್ನು........ ಎಂದು ಕರೆದರು.
5. ಜಪಾನಿನಲ್ಲಿ ಊಳಿಗಮಾನ್ಯ ಪದ್ಧತಿಯ ಪಾಳಯಗಾರರಿಂದ ಸ್ಥಾಪಿತವಾದ ಅಧಿಕಾರವನ್ನು........ ಎನ್ನುತ್ತಾರೆ.
6. 1868 ಜಪಾನಿನ ರಕ್ತ ರಹಿತ ಕ್ರಾಂತಿಯನ್ನು........ ಎಂದು ಕರೆದರು.

## ಅಮೆರಿಕದಲ್ಲಿ ಸಾಮಾಜಿಕ ಕ್ರಾಂತಿ (ಅಬ್ರಹಾಂ ಲಿಂಕನ್)

ಅಮೆರಿಕದ 13 ವಸಾಹತುಗಳು ತಮ್ಮ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರೊಡನೆ ಹೋರಾಡಿದ್ದವು (1764–1783). ಸ್ವಾತಂತ್ರ್ಯ ಸಮರದ ಮೂಲಕ ಅವು ಅಮೆರಿಕಾ ಸಂಯುಕ್ತ ಸಂಸ್ಥಾನವಾಗಿ ರೂಪುಗೊಂಡವು. ಅಮೆರಿಕ ಘೋಷಣೆ ಜುಲೈ 4, 1776ರಂದು ಘೋಷಿಸಲ್ಪಟ್ಟಿತು. ಈ ಘೋಷಣೆ "ಎಲ್ಲ ವ್ಯಕ್ತಿಗಳೂ ಸಮಾನ ಹಕ್ಕುಗಳನ್ನು ಹೊಂದಿದ್ದಾರೆ" ಎಂದು ತಿಳಿಸಿತು. ಹಾಗೂ ಮೂರು ಅತಿ ಪ್ರಮುಖ ಹಕ್ಕುಗಳನ್ನು ಘೋಷಿಸಿತು. 1) ಪ್ರತಿಯೊಬ್ಬರಿಗೂ ಬದುಕಿನ ಹಕ್ಕು 2) ಸ್ವಾತಂತ್ರ್ಯ 3) ಸುಖ, ಸಂತೋಷ ಮತ್ತು ನೆಮ್ಮದಿಗಾಗಿ ಪ್ರಯತ್ನಗಳನ್ನು ಮಾಡುವುದು ಎಂಬುದೇ ಈ ಮೂರು ಹಕ್ಕುಗಳು. ರಾಜ್ಯಾಂಗವನ್ನು ಅಮೆರಿಕನ್ನರು ರೂಪಿಸಿ ಒಪ್ಪಿಕೊಂಡಾಗ ಅವರು ಈ ಹಕ್ಕುಗಳನ್ನು ಉಳಿದ ಹಕ್ಕುಗಳ ಜೊತೆಗೆ ಸೇರಿಸಿ ಒಪ್ಪಿಕೊಂಡಿದ್ದರು.

ಆದರೆ ಅಮೆರಿಕದ ಸಮಾಜದಲ್ಲಿ ಅನೇಕ ರೀತಿಯ ಅಸಮಾನತೆಗಳು ಅಸ್ತಿತ್ವದಲ್ಲಿದ್ದವು. ಕರಿಯರು ಮತ್ತು ಬಿಳಿಯರ ನಡುವಿನ ಅಸಮಾನತೆ ಇಂತಹ ಲೋಪಗಳಲ್ಲಿ ಒಂದು. ಹೆಚ್ಚಿನ ಸಂಖ್ಯೆಯ ಕಪ್ಪು ಜನರು ಗುಲಾಮರಂತೆ ಸಂಯುಕ್ತ

ಸಂಸ್ಥಾನದ ದಕ್ಷಿಣ ಭಾಗಗಳ ಪ್ಲಾಂಟೇಷನ್‌ಗಳಲ್ಲಿ ದುಡಿಯುವ ಕೆಲಸಗಾರರಾಗಿದ್ದರು. ಸಂಯುಕ್ತ ಸಂಸ್ಥಾನದ ಉತ್ತರ ಭಾಗದಲ್ಲಿ ಗುಲಾಮಗಿರಿ ಬಳಕೆಯಲ್ಲಿರಲಿಲ್ಲ. ಆರಂಭದಲ್ಲಿ ಗುಲಾಮರನ್ನು ಆಫ್ರಿಕದಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. 1808ರಲ್ಲಿ ಗುಲಾಮರ ಆಮದು ರದ್ದಾಯಿತು. 1860ರಲ್ಲಿ ಅಮೆರಿಕದಲ್ಲಿ 40 ಲಕ್ಷ ಗುಲಾಮರು ದುಡಿತದಲ್ಲಿ ತೊಡಗಿದ್ದರು. ಇವರು ಅಮೆರಿಕದ ದಕ್ಷಿಣದ 15ರಾಜ್ಯಗಳಲ್ಲಿ ನೆಲೆಸಿದ್ದರು. 1861ಹಾಗೂ 65ರ ನಡುವೆ ನಡೆದ ಅಂತರ್ಯುದ್ಧದ ಪರಿಣಾಮವಾಗಿ ಗುಲಾಮಗಿರಿ ಪದ್ಧತಿ ನಿರ್ಮೂಲವಾಯಿತು. ಕಾನೂನಿನ ಮೂಲಕ ಜನಾಂಗ ಭೇದವನ್ನು ಇದು ತೊಡೆದು ಹಾಕಿದ್ದರಿಂದ ಈ ಘಟನೆಯನ್ನು ಸಾಮಾಜಿಕ ಕ್ರಾಂತಿ ಎಂದು ಕರೆಯಲಾಯಿತು. ಅಮೆರಿಕದ ಅಧ್ಯಕ್ಷನಾಗಿದ್ದ ಅಬ್ರಹಾಂ ಲಿಂಕನ್ ಈ ಕ್ರಾಂತಿಯ ನಾಯಕನಾಗಿದ್ದನು.

### ಅಂತರ್ಯುದ್ಧದ ಕಾರಣಗಳು (ಕ್ರಿ.ಶ. 1861–65)

1800ಹಾಗೂ 1861ರ ನಡುವಿನ ಅವಧಿಯಲ್ಲಿ ಗುಲಾಮ ವ್ಯಾಪಾರ ಅಮೆರಿಕದ ಸಂಯುಕ್ತ ಸಂಸ್ಥಾನದ ರಾಷ್ಟ್ರೀಯ ಜೀವನದಲ್ಲಿ ಪ್ರಮುಖವಾದ ವಿಚಾರವಾಗಿತ್ತು. ಈ ವಿಚಾರ ಅನೇಕ ವೇಳೆ ದೇಶದ ಏಕತೆಗೆ ಧಕ್ಕೆ ತರುತ್ತಿತ್ತು. ದಕ್ಷಿಣ ಭಾಗದವರು ಗುಲಾಮಗಿರಿಯನ್ನು ಸಮರ್ಥಿಸಿಕೊಂಡರು. ಆದರೆ ಉತ್ತರದವರು ಈ ದುಷ್ಟ ಪದ್ಧತಿ, ರಾಷ್ಟ್ರಕ್ಕೆ ಅವಹೇಳನಕರವೆಂದು ಅಭಿಪ್ರಾಯಪಟ್ಟರು. ಗುಲಾಮರ ಒಡೆಯರಲ್ಲಿ ಅನೇಕರು ಕಪ್ಪು ಜನರನ್ನು ತುಚ್ಛವಾಗಿ ಕಂಡರು. ಗುಲಾಮಗಿರಿಯನ್ನು ವಿರೋಧಿಸಲು ಉತ್ತರದ ವರ್ತಮಾನ ಪತ್ರಿಕೆಗಳು, ಅನೇಕ ಸಂಘ ಸಂಸ್ಥೆಗಳು ವ್ಯವಸ್ಥಿತವಾದ ಕಾರ್ಯಕ್ರಮವನ್ನು ಯೋಜಿಸಿದವು. ಕೆಲವು ಸಂಸ್ಥೆಗಳು ಕಪ್ಪು ಜನರು ದಕ್ಷಿಣದಿಂದ ಕೆನಡಾ ದೇಶಕ್ಕೆ ಪಲಾಯನ ಮಾಡಲು ಸಹಾಯ ಮಾಡಿದವು. ಎಚ್.ಬಿ. ಸ್ಟೋವ್ ಎಂಬ ಮಹಿಳೆ ಗುಲಾಮಗಿರಿಯನ್ನು ವಿರೋಧಿಸಲು 'ಅಂಕಲ್ ಟಾಮ್ಸ್ ಕ್ಯಾಬಿನ್' ಎಂಬ ಕಾದಂಬರಿಯನ್ನು 1852ರಲ್ಲಿ ಪ್ರಕಟಿಸಿದಳು. ಈ ಪುಸ್ತಕ ಜನಪ್ರಿಯವಾಗಿ ಗುಲಾಮಗಿರಿಯ ವಿರೋಧಿ ಚಳುವಳಿ ಎಲ್ಲೆಡೆ ವ್ಯಾಪಿಸಲು ಕಾರಣವಾಯಿತು. ಒಂದು ವರ್ಷದಲ್ಲಿ ಈ ಪುಸ್ತಕದ ಮೂರು ಲಕ್ಷ ಪ್ರತಿಗಳು ಮಾರಾಟವಾದವು. ಈ ಬೆಳವಣಿಗೆಗಳು ದಕ್ಷಿಣದವರು ಉತ್ತರದವರನ್ನು ದ್ವೇಷಿಸುವಂತೆ ಮಾಡಿದವು. ಉತ್ತರದವರು ಗುಲಾಮಗಿರಿ ಪದ್ಧತಿಯನ್ನು ನಿರ್ಮೂಲ ಮಾಡಲು ಒತ್ತಾಯಿಸಿದರೆ ದಕ್ಷಿಣದವರು ತಮ್ಮದೇ ಆದ ಪ್ರತ್ಯೇಕ ರಾಷ್ಟ್ರವನ್ನು ಸ್ಥಾಪಿಸಿಕೊಳ್ಳುವ ಹಂತದವರೆಗೆ ಯೋಚಿಸಿದರು.

1800 ಮತ್ತು 1861ರ ನಡುವೆ ರಾಷ್ಟ್ರಮಟ್ಟದಲ್ಲಿ ಗುಲಾಮಗಿರಿ ಪದ್ಧತಿಯನ್ನು ತೆಗೆದುಹಾಕಲು ಎರಡು ಪ್ರಯತ್ನಗಳು ನಡೆದವು. 1820ರಲ್ಲಿ ಮತ್ತು 1850ರಲ್ಲಿ ಎರಡು ಬಾರಿ ಪರಸ್ಪರ ರಾಜಿ ಒಪ್ಪಂದದ ಮೂಲಕ ಗುಲಾಮಗಿರಿಯನ್ನು ತೊಡೆದು ಹಾಕಲು ಯತ್ನಿಸಿದವು. ಆದರೆ ಈ ಒಪ್ಪಂದಗಳು ಉತ್ತರ ಮತ್ತು ದಕ್ಷಿಣದವರಿಗೆ ಪೂರ್ಣವಾಗಿ ಸ್ವೀಕೃತವಾಗಲಿಲ್ಲವಾದ್ದರಿಂದ ವಿಫಲಗೊಂಡವು.

1857ರಲ್ಲಿ ಅಮೆರಿಕದ ಪರಮೋಚ್ಚ ನ್ಯಾಯಾಲಯ ಒಂದು ತೀರ್ಪನ್ನು

ಪ್ರಕಟಿಸಿತು. ಈ ತೀರ್ಪು ದಕ್ಷಿಣದವರಿಗೆ ಅನುಕೂಲಕರವೆನಿಸಿತ್ತು. ಉತ್ತರದಲ್ಲಿ ವಾಸಿಸುತ್ತಿದ್ದ ಗುಲಾಮಗಿರಿ ವಿರೋಧಿ ಚಳುವಳಿಯ ಪ್ರಮುಖ ನಾಯಕರು ಸಶಸ್ತ್ರ ದಂಗೆಗಳ ಮೂಲಕ ಗುಲಾಮರನ್ನು ದಕ್ಷಿಣದ ಬಿಳಿಯ ಮಾಲೀಕರ ವಿರುದ್ಧ ಸಿಡಿದೇಳಲು ಪ್ರಯತ್ನ ಮಾಡಿದರು. ನಿದರ್ಶನವಾಗಿ 1859ರಲ್ಲಿ ಜಾನ್ ಬ್ರೌನ್ ಎಂಬ ಗುಲಾಮು ಗಿರಿ ವಿರೋಧಿ ತೀವ್ರವಾಗಿ ಇಂತಹ ಯತ್ನವನ್ನು ನಡೆಸಿದನು. ಆದರೆ ಅದು ವಿಫಲವಾಯ್ತು. ಹೀಗಾಗಿ 1861 ಮಾರ್ಚ್‌ನಲ್ಲಿ ಅಬ್ರಹಾಂ ಲಿಂಕನ್ ಅಮೆರಿಕದ ಅಧ್ಯಕ್ಷನಾಗಿ ಆಯ್ಕೆಯಾಗುವ ವೇಳೆಗೆ ದಕ್ಷಿಣದವರು ಅಮೆರಿಕದ ಸಂಯುಕ್ತ ಸಂಸ್ಥಾನದಿಂದ ಪ್ರತ್ಯೇಕಗೊಂಡು ತಮ್ಮದೇ ಒಂದು ಒಕ್ಕೂಟದ ರಾಷ್ಟ್ರವನ್ನು ಸ್ಥಾಪಿಸಲು ನಿರ್ಧರಿಸಿದರು.

**ಅಬ್ರಹಾಂ ಲಿಂಕನ್–ವ್ಯಕ್ತಿ ಮತ್ತು ಜೀವನ ಪರಿಚಯ (1809–1865)**

ಅಬ್ರಹಾಂ ಲಿಂಕನ್ 1809ರಲ್ಲಿ ಕೆಂಟುಕಿ ಪ್ರಾಂತ್ಯದ ಕಡು ಬಡ ಕುಟುಂಬದಲ್ಲಿ ಜನಿಸಿದನು. ಆತನ ತಂದೆ ಥಾಮಸ್ ಲಿಂಕನ್ ಒಬ್ಬ ಬಡರೈತ ಮತ್ತು ಬಡಗಿಯಾಗಿದ್ದನು. ಲಿಂಕನ್ ಚಿಕ್ಕವನಾಗಿದ್ದಾಗ ತನ್ನ ತಾಯಿಯನ್ನು ಕಳೆದುಕೊಂಡನು. ಆತನ ತಂದೆ ಮರು ಮದುವೆಯಾದನು. ಮಲತಾಯಿ ಅವನ ಬಗ್ಗೆ ವಿಶ್ವಾಸದಿಂದ ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದಳು. ಬಡತನದಿಂದಾಗಿ ಹಾಗೂ ಆತನ ವಾಸಸ್ಥಳದ ಸಮೀಪದಲ್ಲಿ ಶಾಲೆಗಳ ಸೌಲಭ್ಯವಿಲ್ಲದ್ದರಿಂದ ಲಿಂಕನ್ ಸಾಂಪ್ರದಾಯಿಕವಾದ ಶಾಲಾ ವ್ಯಾಸಂಗವನ್ನು ಹೆಚ್ಚಾಗಿ ಪಡೆಯಲಿಲ್ಲ. ಆದರೆ ಅವನಲ್ಲಿದ್ದ ಜ್ಞಾನದಾಹ ಆತನನ್ನು ವಿದ್ಯಾವಂತನನ್ನಾಗಿ ರೂಪಿಸಿತು. ಅವನು ಸ್ವಂತ ವ್ಯಾಸಂಗದಿಂದ ವಿದ್ಯಾಭ್ಯಾಸವನ್ನು ಪಡೆದನು. ಆತನು 22 ವರ್ಷದವನಿದ್ದಾಗ 1831ರಲ್ಲಿ ನ್ಯೂಆರ್ಲಿಯನ್ಸ್‌ನಲ್ಲಿ ಗುಲಾಮರ ಮಾರಾಟವನ್ನು ಕಣ್ಣಾರೆ ಕಂಡನು. ಇದು ಅವನ ಗುಲಾಮಗಿರಿ ಪದ್ಧತಿಯನ್ನು ವಿರೋಧಿಸುವ ನಿರ್ಧಾರವನ್ನು ಬೆಂಬಲಿಸಿತು. ಅನೇಕ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತ ಸಂಪಾದನೆ ಮಾಡುತ್ತ 1836ರಲ್ಲಿ ಲಿಂಕನ್ ಕಾನೂನು ಪರೀಕ್ಷೆಯನ್ನು ಮುಗಿಸಿ ವಕೀಲನಾದನು. ಇಲಿನಾಯ್ಸ್ ಪ್ರಾಂತ್ಯದಲ್ಲಿ ತನ್ನ ವೃತ್ತಿ ಜೀವನವನ್ನು ಆರಂಭಿಸಿದನು. ಅಲ್ಲಿ ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದನು. ತನ್ನ ಪ್ರಾಮಾಣಿಕ ನಡತೆ ಹಾಗೂ ಆದರ್ಶಗಳಿಂದ ಆತನು ಜನಾನುರಾಗಿಯಾದನು. 1860ರಲ್ಲಿ ಅಮೆರಿಕಾದ ಅಧ್ಯಕ್ಷಗಿರಿಗೆ ರಿಪಬ್ಲಿಕನ್ ಪಕ್ಷದ ಪರವಾಗಿ ಸ್ಪರ್ಧಿಸಿ ಆಯ್ಕೆಯಾದನು. 1861ರಲ್ಲಿ ಅಧ್ಯಕ್ಷನಾಗಿ ಅಧಿಕಾರವಹಿಸಿಕೊಂಡ ತಕ್ಷಣ ಯಾದವೀ ಕಲಹ ಆರಂಭವಾಯಿತು.

**ಅಂತರ್ಯುದ್ಧ (1861–65)**

ಇದೊಂದು ಸಾಮಾಜಿಕ ಕ್ರಾಂತಿ. ಅಮೆರಿಕ ಸಂಯುಕ್ತ ಸಂಸ್ಥಾನದ ಬಿಳಿಯ ಜನರು ತಮ್ಮಲ್ಲೇ ಪಕ್ಷ ಭೇದ ಹೊಂದಿ ಅಂತರ್ಯುದ್ಧದಲ್ಲಿ ಭಾಗವಹಿಸಿದರು. ಇದರಲ್ಲಿ ಎರಡು ಪ್ರಮುಖ ವಿಷಯಗಳು ಅಡಕವಾಗಿದ್ದವು. 1) ಗುಲಾಮಗಿರಿ 2) ದೇಶದ ಏಕತೆ. ಉತ್ತರದ 23ರಾಜ್ಯಗಳು ದಕ್ಷಿಣದ ಹನ್ನೊಂದು ರಾಜ್ಯಗಳ ಜೊತೆ ನಾಲ್ಕು ವರ್ಷ ಯುದ್ಧ ಮಾಡಿದವು. ಲಿಂಕನ್ ಉತ್ತರದವರನ್ನು ಪ್ರತಿನಿಧಿಸಿ ದಕ್ಷಿಣದವರನ್ನು ಸೋಲಿಸಿದನು. ಯುದ್ಧದ ಗುರಿಗಳು ಈಡೇರಿಸಲ್ಪಟ್ಟವು. ದೇಶದಾದ್ಯಂತ ಗುಲಾಮಗಿರಿ

ನಿರ್ಮೂಲವಾಯಿತು. ದಕ್ಷಿಣದವರನ್ನು ಮತ್ತೆ ರಾಷ್ಟ್ರದ ವ್ಯಾಪ್ತಿಗೆ ತಂದು ದೇಶದ ಒಗ್ಗಟ್ಟನ್ನು ಉಳಿಸಲಾಯ್ತು. ಆದರೆ ಲಿಂಕನ್ ಏಪ್ರಿಲ್ 14, 1865ರಲ್ಲಿ ವಾಷಿಂಗ್ಟನ್‌ನಲ್ಲಿ ನಾಟಕವೊಂದನ್ನು ವೀಕ್ಷಿಸುತ್ತಿದ್ದಾಗ 'ಬೂತ್' ಎಂಬ ಹಂತಕನ ಗುಂಡಿಗೆ ಗುರಿಯಾದನು. ಏಪ್ರಿಲ್ 15ರಂದು ಆತನು ನಿಧನ ಹೊಂದಿದನು.

## ಅಭ್ಯಾಸಗಳು

**I. ಕೆಳಗಿನ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ.**

1. ಅಮೆರಿಕದ ಸಮಾಜ ಹೊಂದಿದ್ದ ಮೂರು ಪ್ರಮುಖ ಹಕ್ಕುಗಳು ಯಾವುವು ?
2. ಅಮೆರಿಕದ ಸಮಾಜದಲ್ಲಿದ್ದ ಅಸಮಾನತೆಗಳಾವುವು ?
3. 'ಅಂಕಲ್ ಟಾಮ್ಸ್ ಕ್ಯಾಬಿನ್' ಕಾದಂಬರಿಯ ಲೇಖಕರು ಯಾರು ? ಈ ಕಾದಂಬರಿಯ ವಸ್ತು ಏನು ?
4. ಅಬ್ರಹಾಂ ಲಿಂಕನ್ ಯಾವಾಗ, ಎಲ್ಲಿ ಗುಲಾಮ ವ್ಯಾಪಾರವನ್ನು ಮೊದಲು ವೀಕ್ಷಿಸಿದನು ?
5. ಅಮೆರಿಕದ ಅಂತುರ್ಯುದ್ಧದ ಮೂರು ಪ್ರಮುಖ ವಿಚಾರಗಳಾವುವು ?

**II. ಅಮೆರಿಕದ ಅಂತರ್ಯುದ್ಧವನ್ನು ಕುರಿತು ಕೆಳಗಿನ ಹಂತಗಳಲ್ಲಿ ವಿವರಿಸಿ.**

1) ಕಾರಣಗಳು 2) ಮಾರ್ಗ 3) ಫಲಿತಾಂಶಗಳು.

**III. ಬಿಟ್ಟ ಸ್ಥಳಗಳನ್ನು ತುಂಬಿರಿ.**

1. ಅಮೆರಿಕದ ದಕ್ಷಿಣದ ತೋಟಗಳಲ್ಲಿ ದುಡಿಯುತ್ತಿದ್ದ ಹೆಚ್ಚಿನ ಜನ......... ಜನರಾಗಿದ್ದರು.
2. ಸಾಮಾಜಿಕ ಕ್ರಾಂತಿಯ ನಾಯಕ..........
3. ಜಾನ್ ಬ್ರೌನ್ ಎಂಬುವನು........ ಗುಂಪಿನ ಉಗ್ರಗಾಮಿಯಾಗಿದ್ದನು.
4. ಅಬ್ರಾಹಂ ಲಿಂಕನ್........ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದನು.
5. ಲಿಂಕನ್........ ಎಂಬ ಹಂತಕನ ಗುಂಡಿಗೆ ಬಲಿಯಾದನು.

# ಪೌರನೀತಿ

## ೧. ಭಾರತದ ಪ್ರಜಾಪ್ರಭುತ್ವ

ಭಾರತವು ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವದ ರಾಷ್ಟ್ರವಾಗಿದೆ. ಬ್ರಿಟಿಷ್ ಆಳ್ವಿಕೆಯಿಂದ ಮುಕ್ತಗೊಂಡ ಭಾರತವು ಗ್ರೇಟ್ ಬ್ರಿಟನ್ನಿನ ಪ್ರಜಾಪ್ರಭುತ್ವದ ಮಾದರಿಯನ್ನು ಅನುಸರಿಸಿತು. ರಾಷ್ಟ್ರದ ಮುಖ್ಯಸ್ಥರಾಗಿ ರಾಷ್ಟ್ರಪತಿಯನ್ನು ಚುನಾಯಿಸುತ್ತೇವೆ. ನಮ್ಮ ಸಂವಿಧಾನದಲ್ಲಿ ಸೇರ್ಪಡೆಯಾಗಿರುವ ಅನೇಕ ವಿಧಿಗಳು ಬ್ರಿಟಿಷ್ ವ್ಯವಸ್ಥೆಯಿಂದ ಪ್ರಭಾವಿತವಾಗಿವೆ. ನಮ್ಮ ಪ್ರಜಾಪ್ರಭುತ್ವ ಅಷ್ಟು ಹಳೆಯದಲ್ಲ. ಬ್ರಿಟಿಷ್ ಪ್ರಜಾಪ್ರಭುತ್ವವು ಶತಮಾನಗಳಷ್ಟು ಹಳೆಯದು. ಜಗತ್ತಿನ ಎಲ್ಲ ಸಂಸತ್ತುಗಳು ಬ್ರಿಟನ್ ಪಾರ್ಲಿಮೆಂಟಿನ ಅನುಭವದ ಆಧಾರದ ಮೇಲೆ ರೂಪಿತವಾಗಿವೆ. ಆದ್ದರಿಂದ ಬ್ರಿಟನ್ನಿನ ಪಾರ್ಲಿಮೆಂಟನ್ನು 'ಮಾತೃ ಸಂಸತ್ತು' ಎಂದು ಕರೆಯುತ್ತಾರೆ. ಭಾರತವು ತನ್ನ ಪ್ರಜಾಪ್ರಭುತ್ವದಲ್ಲಿ ಅನೇಕ ಪ್ರಯೋಗಗಳನ್ನು ಮಾಡುತ್ತಿದ್ದು ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಗಿದೆ. ಆದರೂ ಪ್ರಜಾಪ್ರಭುತ್ವವು ಭಾರತದಲ್ಲಿ ಭದ್ರವಾಗಿ ಬೇರೂರಿರುವುದರ ಸೂಚನೆಗಳು ಕಂಡುಬಂದಿವೆ.

### ಪ್ರಜಾಪ್ರಭುತ್ವದ ಅರ್ಥ

ಪ್ರಜೆಗಳು ಮುಗ್ಧರಾದುದರಿಂದ ಅವರನ್ನು ನೋಡಿಕೊಳ್ಳಬೇಕು, ಅವರಿಗೆ ಸೂಕ್ತ ಮಾರ್ಗದರ್ಶನ ನೀಡಬೇಕು ಎಂಬ ನಂಬಿಕೆ ಯುಗಯುಗಗಳಿಂದಲೂ ಬೆಳೆದುಬಂದಿದೆ. ಅವರನ್ನು ಆಳುವ ಹಾಗೂ ಸನ್ಮಾರ್ಗಕ್ಕೆ ತರುವ ಜವಾಬ್ದಾರಿಯು ಧಾರ್ಮಿಕ ಮುಖಂಡರ, ತತ್ವಜ್ಞಾನಿಗಳ ಮತ್ತು ರಾಜಕೀಯ ಪಕ್ಷಗಳ ಕೈಯಲ್ಲಿ ಇರುತ್ತಿತ್ತು. ಅಧಿಕಾರ ಸೂತ್ರ ವಹಿಸಿಕೊಂಡವರು ಜನರ ಕಲ್ಯಾಣಕ್ಕೆ ಏನು ಮಾಡಬೇಕೆಂಬುದನ್ನು ನಿರ್ಣಯಿಸುತ್ತಿದ್ದರು. ಪ್ರಜೆಗಳು ಕೆಲವೇ ಆಯ್ದ ನಾಯಕರನ್ನು ಆಶ್ರಯಿಸುತ್ತಿದ್ದುದಕ್ಕೆ ಕೆಲವು ಮುಖ್ಯ ಕಾರಣಗಳಿವೆ. ಸರಕಾರದ ಚಟುವಟಿಕೆ ಒಂದು ಸಂಕೀರ್ಣ ಕಾರ್ಯವಾಗಿದ್ದು ಸಾಮಾನ್ಯ ಜನರಿಗೆ ಅದನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತಿತ್ತು. ಈ ಕಾರಣದಿಂದಾಗಿ ನಿರಂಕುಶ ಪ್ರಭುತ್ವ ಪದ್ಧತಿ ಹುಟ್ಟಿಕೊಂಡಿತು.

ಈ ನಿರಂಕುಶ ಪ್ರಭುತ್ವದ ತತ್ವಕ್ಕೆ ವಿರುದ್ಧವಾದ ಅಭಿಪ್ರಾಯ ಪ್ರಜಾಪ್ರಭುತ್ವದ್ದು. ಇದರಲ್ಲಿ ತಮಗೆ ಯಾವುದರಿಂದ ಒಳಿತಾಗುತ್ತದೆ ಎಂಬುದು ಮಾತ್ರವಲ್ಲದೆ ತಮಗೆ ಅನುಕೂಲವಾಗುವಂತೆ ಮಾಡಿ ಎಂದು ಪ್ರಚೋದಿಸುವುದಕ್ಕೂ ಅವಕಾಶವಿದೆ. ತಮ್ಮ

ಅಗತ್ಯಗಳನ್ನು ಈ ಪದ್ಧತಿಯಲ್ಲಿ ಜನರೇ ನಿರ್ಣಯಿಸಿಕೊಳ್ಳುತ್ತಾರೆ. ಸಮಾಜ ಕಲ್ಯಾಣದ ಪ್ರಗತಿಯನ್ನು ಸಾಧಿಸುವ ಮಾರ್ಗವನ್ನೂ ಅವರೇ ನಿರ್ಧರಿಸುತ್ತಾರೆ.

ಪ್ರಜಾಪ್ರಭುತ್ವ ಎಂದರೆ ಪ್ರಜೆಗಳ ಆಳ್ವಿಕೆ ಎಂದರ್ಥ. ಇದರ ಮೂಲ ಇಂಗ್ಲಿಷ್ ಶಬ್ದ ಡೆಮಾಕ್ರಸಿ. ಡೆಮಾಸ್ ಎಂಬ ಗ್ರೀಕ್ ಶಬ್ದದ ಅರ್ಥ 'ಜನ'. 'ಕ್ರೇಷಿಯಾ' ಎಂದರೆ ಅಧಿಕಾರ ಎಂದರ್ಥ. ಅಂದರೆ ಡೆಮೋಕ್ರೇಷಿಯಾ (ಡೆಮಾಕ್ರಸಿ) ಎಂಬುದು ಜನರ ಅಧಿಕಾರ ಎಂಬರ್ಥದಲ್ಲಿ ಬಳಕೆಯಾಗಿದೆ. ಅಮೇರಿಕಾದ ಅಧ್ಯಕ್ಷ ಅಬ್ರಹಾಂ ಲಿಂಕನ್ ಹೇಳಿರುವಂತೆ "ಜನರೇ ಜನರಿಗೋಸ್ಕರ ನಡೆಸುವ ಜನತೆಯ ಸರಕಾರ". ಪ್ರಜಾಪ್ರಭುತ್ವದಲ್ಲಿ ಜನರ ಕೈಯಲ್ಲಿ ರಾಜಕೀಯ ಅಧಿಕಾರ ಇರುತ್ತದೆ. ಜನರಿಂದ ಆಯ್ಕೆಗೊಂಡ ಸದಸ್ಯರು ಕಾನೂನುಗಳನ್ನು ರಚಿಸುತ್ತಾರೆ. ಸರಕಾರವು ಜನತೆಯ ಕಲ್ಯಾಣಕ್ಕಾಗಿ ದುಡಿಯುತ್ತದೆ.

ಗ್ರೀಸಿನ 'ಸಿಟಿ ಸ್ಟೇಟ್'ಗಳ ಪ್ರಜಾಪ್ರಭುತ್ವದ ಪರಂಪರೆಯನ್ನು ಇಂದಿನ ವಿಶ್ವದ ಪ್ರಜಾಪ್ರಭುತ್ವದ ರಾಷ್ಟ್ರಗಳೆಲ್ಲವೂ ಅನುಸರಿಸಿವೆ.

**ಪ್ರಜಾಪ್ರಭುತ್ವದ ಮಾದರಿಗಳು**

ಪ್ರಜಾಪ್ರಭುತ್ವದಲ್ಲಿ ಎರಡು ಬಗೆಗಳಿವೆ.

1. ಪ್ರತ್ಯಕ್ಷ ಪ್ರಜಾಪ್ರಭುತ್ವ
2. ಪರೋಕ್ಷ ಪ್ರಜಾಪ್ರಭುತ್ವ ಅಥವಾ ಪ್ರಾತಿನಿಧಿಕ ಪ್ರಜಾಪ್ರಭುತ್ವ

ಪ್ರತ್ಯಕ್ಷ ಪ್ರಜಾಪ್ರಭುತ್ವದಲ್ಲಿ ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ಕಾರ್ಯದಲ್ಲಿ ಎಲ್ಲರೂ ಭಾಗಿಗಳಾಗುತ್ತಾರೆ. ದೇಶದ ಕೆಲಸವನ್ನು ನಿರ್ವಹಿಸಲು ಇದು ಆದರ್ಶಮಯವಾದ ಸೂತ್ರ. ಆದರೆ ಇದನ್ನು ಪ್ರಯೋಗಕ್ಕೆ ತರುವುದು ಕಷ್ಟ. ಒಂದು ರಾಷ್ಟ್ರದ ಪ್ರದೇಶ, ವಿಸ್ತಾರ ಮತ್ತು ಜನಸಂಖ್ಯಾ ಬಾಹುಳ್ಯಗಳ ಕಾರಣದಿಂದ ನೇರ ಪ್ರಜಾಪ್ರಭುತ್ವ ಸಾಧ್ಯವಾಗುವುದಿಲ್ಲ. ಗ್ರೀಸ್‌ನಂತಹ ಸಣ್ಣ ನಗರ ರಾಜ್ಯ (ಸಿಟಿ ಸ್ಟೇಟ್)ದಲ್ಲಿ ಇದು ಸಾಧ್ಯವಾಗಿತ್ತು. ಆದರೆ ಅಲ್ಲಿಯೂ ಸಹ ಗುಲಾಮರು, ವಿದೇಶೀಯರು ಹಾಗೂ ಹೆಂಗಸರು ಭಾಗವಹಿಸಲು ಸಾಧ್ಯವಿರಲಿಲ್ಲ ಎಂಬ ಅಂಶವನ್ನು ಮರೆಯಬಾರದು.

ಪರೋಕ್ಷ ಅಥವಾ ಪ್ರಾತಿನಿಧಿಕ ಪ್ರಜಾಪ್ರಭುತ್ವ ಇಂದು ಹೆಚ್ಚಾಗಿ ಅಸ್ತಿತ್ವದಲ್ಲಿದೆ. ಈ ಬಗೆಯ ಸರಕಾರವು ಜನರಿಗೆ ಪ್ರತಿನಿಧಿಗಳನ್ನಾರಿಸಿ ಅಧಿಕಾರ ನಿರ್ವಹಣೆಯಲ್ಲಿ ಭಾಗವಹಿಸುವ ಅಥವಾ ಜನರ ಆಯ್ಕೆಯ ಪ್ರತಿನಿಧಿಗಳು ಕಾನೂನನ್ನು ರಚಿಸಿ ಸರಕಾರದ ಕಾರ್ಯಗಳನ್ನು ನಿರ್ವಹಿಸುವ ಸೌಲಭ್ಯದಿಂದ ಕೂಡಿದೆ. ಹೀಗೆ ಭಾಗವಹಿಸುವ ಅವಕಾಶವಿರುವುದರಿಂದ ಜನರಲ್ಲಿ ತಿಳಿವಳಿಕೆ ಹೆಚ್ಚುತ್ತದೆ ಮತ್ತು ಅವರು ಸದಾ ಜಾಗೃತರಾಗುವಂತೆ ಮಾಡುತ್ತದೆ. ವಯಸ್ಕ ಪ್ರಜೆಗಳಿಗೆ ಮತದಾನದ ಹಕ್ಕು ಇರುವ ಕಡೆಗಳಲ್ಲಿ ಈ ಪರ್ಯಾಯ ಪ್ರಜಾಪ್ರಭುತ್ವ ಕೆಲಸ ಮಾಡುತ್ತದೆ.

**ಪ್ರಜಾಪ್ರಭುತ್ವದ ಪ್ರಮುಖ ಲಕ್ಷಣಗಳು**

ಜಗತ್ತಿನಲ್ಲಿ ಇಂದು ಪ್ರಜಾಪ್ರಭುತ್ವವು ಒಂದು ಸ್ವೀಕಾರ ಯೋಗ್ಯ ಆಳ್ವಿಕೆಯಾಗಿದೆ. ಈಚಿನ ವರ್ಷಗಳಲ್ಲಿ ರಾಜರ ಆಳ್ವಿಕೆ ಮತ್ತು ಸರ್ವಾಧಿಕಾರಿಯ ಆಳ್ವಿಕೆಗಳಲ್ಲಿದ್ದ ಎಷ್ಟೋ ಸರಕಾರಗಳು ಪ್ರಜಾಪ್ರಭುತ್ವ ಮಾದರಿಯ ಸರಕಾರವನ್ನು ಆಯ್ಕೆ ಮಾಡಿಕೊಂಡಿವೆ.

ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ಈ ಕೆಳಗಿನ ಅಂಶಗಳು ಅವಶ್ಯಕ.

ಅ) ಜನರ ಸಮ್ಮತಿ.

ಆ) ಮತದಾರರು ಚುನಾಯಿಸಿದ ಪ್ರತಿನಿಧಿಗಳು ಕಾನೂನನ್ನು ರಚಿಸುವುದು.

ಇ) ದೇಶದ ಆಡಳಿತ ಮುಖ್ಯಸ್ಥನು ಜನರಿಂದ ನೇರವಾಗಿ ಅಥವಾ ಪರ್ಯಾಯವಾಗಿ ಆರಿಸಲ್ಪಡುವಿಕೆ ಮತ್ತು ಆತನು ಶಾಸಕಾಂಗದ ಹಿಡಿತದಲ್ಲಿರುವುದು.

ಈ) ವಯಸ್ಕ ಜನರಿಗೆ ಮತದಾನದ ಹಕ್ಕು ಪ್ರಾಪ್ತವಾಗುವುದು.

ಉ) ನಿರ್ದಿಷ್ಟ ಅವಧಿಯಲ್ಲಿ ನ್ಯಾಯಬದ್ಧವಾದ ಮತ್ತು ಮುಕ್ತವಾದ ಚುನಾವಣೆಗಳು ನಡೆಯುವಿಕೆ.

ಊ) ಸರಕಾರಕ್ಕೆ ಸೇವೆ ಸಲ್ಲಿಸಲು ವರ್ಗ, ಜಾತಿ, ಲಿಂಗ ಭೇದವಿಲ್ಲದೆ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸುವಿಕೆ.

ಎ) ಪ್ರಜೆಗಳಿಗೆ ಮೂಲಭೂತ ಸ್ವಾತಂತ್ರ್ಯಗಳಿರುವಿಕೆ.

ಏ) ಸಂವಿಧಾನದ ಅಥವಾ ರಾಷ್ಟ್ರದ ಮೂಲಭೂತ ಕಾನೂನುಗಳು ಸರಕಾರದ ಅಧಿಕಾರವನ್ನು ನಿಯಂತ್ರಿಸುವಿಕೆ.

ಎಲ್ಲಿ ಉಕ್ತಿ ಸ್ವಾತಂತ್ರ್ಯ, ಸ್ವತಂತ್ರ ನ್ಯಾಯಂಗ ಹಾಗೂ ಮುಕ್ತ ನ್ಯಾಯಪೂರ್ಣ ಚುನಾವಣಾ ವ್ಯವಸ್ಥೆ ಇರುತ್ತವೆಯೋ ಅಲ್ಲಿ ಮಾತ್ರ ಮೇಲೆ ಹೇಳಿದ ಪ್ರಜಾಪ್ರಭುತ್ವದ ಲಕ್ಷಣಗಳನ್ನು ಕಾಣುವುದು ಸಾಧ್ಯವಾಗುತ್ತದೆ.

**ಪ್ರಜಾಪ್ರಭುತ್ವದ ಅಗತ್ಯಗಳು**

**ಸುಜ್ಞಾನ ಕೌಶಲ್ಯ ಹಾಗೂ ಸಾಮಾಜಿಕ ಜವಾಬ್ದಾರಿಯುಳ್ಳ ಪ್ರಜಾವರ್ಗ**

ಕೆಲವು ಅಗತ್ಯಗಳನ್ನು ಪೂರೈಸಿದಾಗ ಮಾತ್ರ ಪ್ರಜಾಪ್ರಭುತ್ವ ಪದ್ಧತಿಯು ಅತ್ಯುತ್ತಮ ರೀತಿಯ ಸರಕಾರವಾಗಿ ಕೆಲಸ ಮಾಡಬಹುದು. ಪ್ರಜಾಪ್ರಭುತ್ವದ ಯಶಸ್ಸು ಅಂತಿಮವಾಗಿ ಜನರ ಕೈಯಲ್ಲಿದೆ. ಪ್ರಜೆಗಳು ಕ್ರಿಯಾತ್ಮಕವಾಗಿ ಭಾಗವಹಿಸಿದಾಗ ಮತ್ತು ಜವಾಬ್ದಾರಿಯುತವಾಗಿ ವರ್ತಿಸಿದಾಗ ಪ್ರಜಾಪ್ರಭುತ್ವವು ಯಶಸ್ವಿಯಾಗಲು ಸಾಧ್ಯವಾಗುತ್ತದೆ. ಜನರು ತಮ್ಮ ಜವಾಬ್ದಾರಿಯನ್ನು ಅರಿತುಕೊಂಡು ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕು. ಕೆಲವು ಅಗತ್ಯಗಳನ್ನು ಪೂರೈಸಿದಾಗ ಜನತೆ ಅರ್ಥಪೂರ್ಣವಾಗಿ ಭಾಗವಹಿಸುವುದು ಸಾಧ್ಯ. ಅವು ಯಾವುವೆಂದರೆ:

1. ಜನತೆಗೆ ಪ್ರಜಾಪ್ರಭುತ್ವದಲ್ಲಿ ಪೂರ್ಣ ನಂಬಿಕೆ ಇರಬೇಕು. ಪ್ರಜಾಪ್ರಭುತ್ವ ಪದ್ಧತಿಯ ಸರಕಾರದ ಹಾಗೂ ಪ್ರಜಾಪ್ರಭುತ್ವದ ಜೀವನ ಪದ್ಧತಿಯ ಬಗೆಗೆ ಅವರಿಗೆ ತುಂಬ ಕಾಳಜಿ ಇರಬೇಕು. ಸಂಯುಕ್ತ ಸಂಸ್ಥಾನ, ಇಂಗ್ಲೆಂಡ್,

ಸ್ವಿಜರ್ಲೆಂಡ್ ಮೊದಲಾದ .ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವವು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ. ಇದಕ್ಕೆ ಕಾರಣವೆಂದರೆ ಅಲ್ಲಿಯ ಜನರ ಧೋರಣೆ ಮತ್ತು ಮನೋಧರ್ಮಗಳು ಪ್ರಜಾಪ್ರಭುತ್ವವನ್ನು ಬಯಸುವಂತೆ ರೂಪುಗೊಂಡಿವೆ.

2. ದೇಶದ ಆಗುಹೋಗುಗಳ ಬಗೆಗೆ ಜನರ ಸೂಕ್ಷ್ಮ ಸ್ಪಂದನ ಎಷ್ಟಿದೆಯೆಂಬುದರ ಮೇಲೆ ಪ್ರಜಾಪ್ರಭುತ್ವ ವ್ಯವಸ್ಥೆಯ ಕಾರ್ಯಾಚರಣೆ ಅವಲಂಬಿಸಿದೆ. ಪ್ರಜಾಪ್ರಭುತ್ವದ ನಿರ್ವಹಣೆಯಲ್ಲಿ ಬುದ್ಧಿವಂತರೂ, ವಿಚಾರಶೀಲರೂ ಆದ ಜನತೆ ಒಂದು ದೊಡ್ಡ ಆಸ್ತಿ ಎನಿಸುತ್ತಾರೆ. ಕ್ರಿಯಾತ್ಮಕವಾಗಿ ಭಾಗವಹಿಸಿದಾಗ ಜನತೆಯ ಎಚ್ಚರ ಹೆಚ್ಚಿ ಅವರು ಸದಾ ಜಾಗರೂಕರಾಗಿರುವಂಥ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಅದು ಆಡಳಿತದ ಸೂತ್ರಗಳನ್ನು ಕೈಯಲ್ಲಿ ಹಿಡಿದ ನಾಯಕರು ಅಧಿಕಾರದ ದುರುಪಯೋಗ ಮಾಡುವುದನ್ನು ತಪ್ಪಿಸುತ್ತದೆ.

3. ಪ್ರಜಾಪ್ರಭುತ್ವ ಸರಕಾರದ ವ್ಯವಸ್ಥೆಯು ಜನರ ಸಹನಶೀಲ ತತ್ವದ ಮೇಲೆ ನಿಂತಿದೆ. ಅಂದರೆ ಕೊಡುವ ಕೊಳ್ಳುವ ಮನೋಧರ್ಮ ಅವರಲ್ಲಿ ಇರಬೇಕು. ಜನತೆಯಲ್ಲಿ ಹೊಂದಿಕೊಂಡು ಹೋಗುವ ಉದಾರಗುಣ ಇರಬೇಕು. ಬಹುಮತೀಯರು ಅಲ್ಪಮತೀಯರ ಬಯಕೆಗಳನ್ನು ಗೌರವಿಸಬೇಕು. ಹಾಗೆಯೇ ಅಲ್ಪಮತೀಯರು ಬಹುಮತೀಯರ ಪ್ರಾಮಾಣಿಕ ಉದ್ದೇಶಗಳನ್ನು ಗೌರವಿಸಬೇಕು. ಈ ವ್ಯವಸ್ಥೆಯಲ್ಲಿ ಅಲ್ಪಮತೀಯರು ಬಹುಮತೀಯರ ತೀರ್ಮಾನಗಳನ್ನು ಸಂತೋಷದಿಂದ ಒಪ್ಪಿ ಮುಂದಿನ ಚುನಾವಣೆಯಲ್ಲಿ ತಾವೇ ಬಹುಮತ ಪಡೆಯುವ ಅವಕಾಶಗಳನ್ನು ಕಲ್ಪಿಸಿಕೊಳ್ಳಬೇಕು.

4. ಒಂದು ವ್ಯವಸ್ಥೆಯ ಬೆಳವಣಿಗೆಗೆ ಜವಾಬ್ದಾರಿಯುತ ಟೀಕೆ, ವಿಮರ್ಶೆಗಳು ಅಗತ್ಯ. ಎಲ್ಲ ಪಕ್ಷಗಳೂ ಒಟ್ಟಿಗೆ ಕಾರ್ಯಪ್ರವೃತ್ತವಾಗಬೇಕು. ರಾಷ್ಟ್ರದ ಹಿತಕ್ಕಾಗಿ ತೆಗೆದುಕೊಂಡ ಸರಕಾರದ ನಿರ್ಧಾರಗಳಿಗೆ ಬದ್ಧರಾಗಬೇಕು. ಅಭಿಪ್ರಾಯ ಭೇದವಿದ್ದರೂ ಎಲ್ಲರ ಏಳಿಗೆಯೇ ಅವರ ಧ್ಯೇಯವಾಗಬೇಕು. ಆಡಳಿತದಲ್ಲಿ ಒಟ್ಟಭಿಪ್ರಾಯವು ಪ್ರತಿಬಿಂಬಿತವಾಗಬೇಕು.

   ಸಹನಶೀಲತೆಯು, ಸಹಾನುಭೂತಿ, ತಿಳುವಳಿಕೆ, ಸಹಕಾರ ಮತ್ತು ಪ್ರೀತಿಗಳನ್ನು ಹುಟ್ಟುಹಾಕುತ್ತದೆ. ಇಂಥ ಭಾವನೆಗಳು ಮಾತ್ರ ಪ್ರಜಾಪ್ರಭುತ್ವವನ್ನು ಪೋಷಿಸಬಲ್ಲವು.

5. ದೇಶಪ್ರೇಮವು ಒಂದು ಮಹತ್ತರ ಮೌಲ್ಯವಾಗಬೇಕು. ಜನತೆ ತಮ್ಮ ದೇಶಕ್ಕಾಗಿ ತ್ಯಾಗಗಳನ್ನು ಮಾಡಲು ಸಿದ್ಧರಿರಲೇಬೇಕು.

**ಸಾರ್ವಜನಿಕ ಅಭಿಪ್ರಾಯವು ರೂಪುಗೊಳ್ಳುವಿಕೆ ಮತ್ತು ಅಭಿವ್ಯಕ್ತವಾಗುವಿಕೆ**

ಬೇರೆ ಬೇರೆ ರಾಜಕೀಯ ಪಕ್ಷಗಳ ಬಹುಮತದ ಅಭಿಪ್ರಾಯಗಳೇ ಪ್ರಜಾಪ್ರಭುತ್ವದ ಸಾರ್ವಜನಿಕ ಆಡಳಿತದಲ್ಲಿ ಪ್ರಧಾನವಾಗಿರುತ್ತವೆ ನಿಜ. ಆದರೆ ಆಳುವವರು ಮತ್ತು ಕಾನೂನು ಮಾಡುವವರು ಸಾಮಾನ್ಯ ಪ್ರಜೆಗಳ ಅಭಿಪ್ರಾಯಗಳನ್ನು

ಮತ್ತು ಭಾವನೆಗಳನ್ನು ಕಡೆಗಣಿಸಬಾರದು. ಆಡಳಿತ ನಿರ್ವಹಣೆಯಲ್ಲಿ ಅವರ ಆಶೋತ್ತರಗಳೂ ಪ್ರತಿಬಿಂಬಿತವಾಗಿರಬೇಕು. ಈ ಕಾರಣದಿಂದ ಸಾರ್ವಜನಿಕ ಅಭಿಪ್ರಾಯ ರೂಪಿತವಾಗುವ ಅಗತ್ಯವಿದೆ. ಸಾರ್ವಜನಿಕ ಅಭಿಪ್ರಾಯವು ವ್ಯಕ್ತವಾಗಲು ಧಾರಾಳವಾದ ಅವಕಾಶಗಳನ್ನು ಒದಗಿಸಿಕೊಡಬೇಕು. ಸಾರ್ವಜನಿಕ ಅಭಿಪ್ರಾಯವು ರೂಪು ತಳೆಯಲು ವಾಕ್ ಸ್ವಾತಂತ್ರ್ಯವು ಒಂದು ಅತ್ಯಗತ್ಯ ಅಂಶವಾಗಿದೆ. ಜನ ಬಾಯಿಬಿಟ್ಟು ಹೇಳಲು ಅವಕಾಶವಿಲ್ಲದಿದ್ದರೆ ಅವರ ಇಂಗಿತವೇ ಅರ್ಥವಾಗುವುದಿಲ್ಲ.

ಮುಖ್ಯವಾದ ಒಳನಾಡಿನ ನೀತಿ ಹಾಗೂ ವಿದೇಶ ನೀತಿಗಳು ಸಾರ್ವಜನಿಕ ಅಭಿಪ್ರಾಯದ ಆಧಾರ ಪಡೆದಿರಬೇಕು. ವಿಭಿನ್ನ ತಾತ್ವಿಕ ಹಿನ್ನೆಲೆಗಳುಳ್ಳ ಎಲ್ಲ ರಾಜಕೀಯ ಪಕ್ಷಗಳೂ ಸಾರ್ವಜನಿಕ ಅಭಿಪ್ರಾಯಕ್ಕೆ ತಲೆಬಾಗಲೇಬೇಕು. ಇಂಥ ಒಂದು ಜನಾಭಿಪ್ರಾಯವನ್ನು ರೂಪಿಸುವುದರಲ್ಲಿ ದೂರದರ್ಶನ, ರೇಡಿಯೋ ಮೊದಲಾದ ಸಮೂಹ ಮಾಧ್ಯಮಗಳು ಮುಖ್ಯ ಪಾತ್ರವನ್ನು ವಹಿಸುತ್ತವೆ. (ಇವುಗಳ ಪಾತ್ರವೇನೆಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗುತ್ತದೆ).

**ಸಹನಶೀಲತೆ ಮತ್ತು ಸದ್ಭಾವದ ನಾಯಕತ್ವ**

ನಾಯಕರು ಜನತೆಯ ಪ್ರತಿನಿಧಿಗಳು. ಆಡಳಿತದಲ್ಲಿ ಅವರು ಪ್ರಧಾನ ಪಾತ್ರ ವಹಿಸುತ್ತಾರೆ. ಆಂತರಿಕ ಮತ್ತು ವಿದೇಶೀ ನೀತಿಗಳನ್ನು ರೂಪಿಸುತ್ತಾರೆ. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಆಡಳಿತವನ್ನು ನಡೆಸುವ ಜವಾಬ್ದಾರಿಯು ನಾಯಕರದಾಗಿರುತ್ತದೆ. ಪಕ್ಷದ ಧುರೀಣರಿಗೆ ಸಾಮೂಹಿಕ ಜವಾಬ್ದಾರಿಯಿರುತ್ತದೆ. ಅವರು ತಮ್ಮ ಪಕ್ಷದವರಿಗೆ ಹಾಗೂ ಸಮಗ್ರ ಜನತೆಗೆ ಉತ್ತರ ಕೊಡಬೇಕಾಗುತ್ತದೆ. ಪ್ರಜಾಪ್ರಭುತ್ವವು ಪ್ರಗತಿ ವಿಕಾಸಗಳನ್ನು ಸಾಧಿಸಬೇಕಾದರೆ ದೂರದರ್ಶಿಗಳಾದ, ಪ್ರಾಮಾಣಿಕರಾದ ಮತ್ತು ಸಂಯಮದಿಂದ ವರ್ತಿಸುವ ನಾಯಕತ್ವ ಇರಬೇಕಾದ್ದು ಅಗತ್ಯ. ಒಬ್ಬ ಉತ್ತಮ ನಾಯಕನು ತನಗೆ ಅಧಿಕಾರ ಹೋದಾಗ ಎದೆಗುಂದಬೇಕಾಗಿಲ್ಲ ಅಥವಾ ಗೊಂದಲಕ್ಕೀಡಾಗಬೇಕಾಗಿಲ್ಲ. ಹಾಲಿ ಇರುವ ನಾಯಕತ್ವ ಒಪ್ಪಿಗೆಯಾಗದೆ ಹೋದರೆ ಜನತೆ ಹೊಸ ನಾಯಕನ ಆಯ್ಕೆ ಮಾಡಬಹುದು. ಆದುದರಿಂದ ವಿರೋಧ ಪಕ್ಷಗಳ ನಾಯಕರು ಅಥವಾ ಅಲ್ಪ ಸಂಖ್ಯಾತ ಗುಂಪುಗಳು ಪ್ರಸಂಗ ಬಂದರೆ ಆಡಳಿತವನ್ನು ನಡೆಸುವ ಜವಾಬ್ದಾರಿಯನ್ನು ಹೊರಲು ತಯಾರಾಗಿರಬೇಕು.

**ಪ್ರಜಾಪ್ರಭುತ್ವದಲ್ಲಿ ವಿರೋಧಾಭಿಪ್ರಾಯಗಳನ್ನು ತಿಳಿಯಪಡಿಸುವುದರ ಮಹತ್ವವನ್ನು ಅರಿತ ಶಿಸ್ತಿನ ಪ್ರಜಾವರ್ಗ**

ಪ್ರಜಾಪ್ರಭುತ್ವದಲ್ಲಿ ಜನತೆ ತನ್ನ ಸಾರ್ವಜನಿಕ ವರ್ತನೆಯಲ್ಲಿ ಶಿಸ್ತನ್ನು ಪಾಲಿಸತಕ್ಕದ್ದು. ಪ್ರಜೆಗಳು ವಾದವಿವಾದಗಳನ್ನು ತೆರೆದ ಮನದಿಂದ ಪರಿಶೀಲಿಸಿ ತಮ್ಮದೇ ಆದ ತೀರ್ಮಾನವನ್ನು ಇಟ್ಟುಕೊಳ್ಳಬೇಕು. ಅವರು ಹಕ್ಕು ಮತ್ತು ಕರ್ತವ್ಯಗಳ ಜ್ಞಾನವುಳ್ಳವರಾಗಿರಬೇಕು, ತಿಳುವಳಿಕಸ್ಥರಾಗಿರಬೇಕು ಮತ್ತು ವಿರೋಧಾಭಿಪ್ರಾಯಗಳನ್ನು

ಗೌರವಿಸುವವರಾಗಿರಬೇಕು. (ವಿವರಗಳನ್ನು ಮುಂದೆ ಚರ್ಚಿಸಲಾಗಿದೆ). ಪ್ರಜಾಪ್ರಭುತ್ವದಲ್ಲಿ ಯಾವುದೇ ವಿಷಯದ ಬಗೆಗೆ ಏಕೈಕವಾದ ಸರ್ವಾನುಮತದ ಅಭಿಪ್ರಾಯ ಇರುವುದು ಸಾಧ್ಯವಿಲ್ಲ. ವಿರೋಧ ಹಾಗೂ ಭಿನ್ನಾಭಿಪ್ರಾಯಗಳಿದ್ದರೆ ಗಂಭೀರ ಚರ್ಚೆ ನಡೆದು ಸರಿಯಾದ ತೀರ್ಮಾನ ತೆಗೆದುಕೊಳ್ಳಲು ಸಹಾಯಕವಾಗುತ್ತದೆ.

ಪ್ರಜಾಪ್ರಭುತ್ವದಲ್ಲಿ ವಿಭಿನ್ನ ದೃಷ್ಟಿಕೋನಗಳನ್ನು ಸಹಿಸುವುದು ಮತ್ತು ಗೌರವಿಸುವುದು ಬಹಳ ಮುಖ್ಯ.

**ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿ**

ಬಹಳ ಕಾಲದವರೆಗೆ ಹೋರಾಟ ನಡೆಸಿದ ನಂತರ, ಮತದಾನ ಮಾಡುವ ಒಂದು ವಿಶಿಷ್ಟ ಹಕ್ಕನ್ನು ಮನುಷ್ಯ ಪಡೆದುಕೊಂಡ. ಸುಮಾರು 18ನೆಯ ಶತಮಾನದ ಕೊನೆಯವರೆಗೆ ಮತದಾನ ಮಾಡುವ ಹಕ್ಕು ಇದ್ದದ್ದು ಆಸ್ತಿವಂತರಿಗೆ, ವಿದ್ಯಾವಂತರಿಗೆ ಹಾಗೂ ಗಣ್ಯರಿಗೆ ಮಾತ್ರ.

ಸಾರ್ವತ್ರಿಕ ಮತದಾನ ಎಂದರೆ ಆ ದೇಶದ ವಯಸ್ಕರಿಗೆ ಇರುವ ಮತದಾನ ಮಾಡುವ ಹಕ್ಕು. ಭಾರತದಲ್ಲಿ ಹದಿನೆಂಟು ವರ್ಷ ತುಂಬಿದ ವಯಸ್ಕರು ಮತದಾನ ಮಾಡುವ ಹಕ್ಕನ್ನು ಹೊಂದಿರುತ್ತಾರೆ. (1989ರಲ್ಲಿ ನಮ್ಮ ಸಂವಿಧಾನಕ್ಕೆ 61ನೆಯ ತಿದ್ದುಪಡಿ ತರುವ ಮುನ್ನ ಈ ವಯೋಮಿತಿ 21 ವರ್ಷ)

1. ವಯಸ್ಕರ ಮತದಾನ ಪದ್ಧತಿಯ ವಿಷಯವಾಗಿ ಪರ, ವಿರೋಧ ಈ ಎರಡು ಅಭಿಪ್ರಾಯಗಳೂ ಬಂದಿವೆ. ಪರವಾಗಿ ವಾದಿಸುವವರು ಸರಕಾರವನ್ನು ನಿಯಂತ್ರಿಸಲು ಜನತೆಗೆ ಅವಕಾಶವನ್ನು ಕೊಡುವ ಪ್ರಜಾಪ್ರಭುತ್ವದ ಮಾದರಿ ಇದು ಎಂದು ಹೇಳುತ್ತಾರೆ.
2. ಮತಪತ್ರದ ಮೂಲಕ ಜನತೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿ ಭಾಗವಹಿಸುವುದಕ್ಕೆ ಇದರಿಂದ ಅವಕಾಶವಾಗುತ್ತದೆ.
3. ಸಂಸತ್ತುಗಳಲ್ಲಿ ಜನರ ಪ್ರತಿನಿಧಿತ್ವವನ್ನು ಖಾತ್ರಿ ಮಾಡುತ್ತದೆ.
4. ಈ ಮತದಾನದ ಹಕ್ಕಿನಿಂದ ವ್ಯಕ್ತಿತ್ವದ ವಿಕಾಸ ಸಾಧ್ಯವಾಗುತ್ತದೆ. ಏಕೆಂದರೆ ನಮ್ಮ ಸರಕಾರ ಆತ್ಮವಿಶ್ವಾಸಕ್ಕೆ ಸಹಾಯ ಮಾಡುತ್ತದೆ.

ಆದರೆ ಸಾರ್ವತ್ರಿಕ ಮತದಾನವನ್ನು ಕೆಲವರು ವಿರೋಧಿಸುತ್ತಾರೆ.

1. ಇದರಿಂದ ಅಧಿಕಾರವು ಅಯೋಗ್ಯರ ಕೈಸೇರಲು ಸಹಾಯ ಮಾಡಿದಂತಾಗುತ್ತದೆ ಎಂಬುದು ಅವರ ಅನಿಸಿಕೆ.
2. ಈ ಹಕ್ಕಿನಿಂದ ಅಯೋಗ್ಯರೂ, ಅಸಮರ್ಥರೂ ಚುನಾಯಿತರಾಗಿ ಬರುವ ಅಪಾಯವಿದೆ. ಇದರಿಂದ ಪ್ರಗತಿ ಕುಂಠಿತವಾಗಬಹುದು.
3. ನಿರಕ್ಷರ ಕುಕ್ಷಿಗಳು, ಬಡವರು ಮತ್ತು ದೀನರು ಮತದಾನ ಮಾಡಿ ವ್ಯವಸ್ಥೆಗೆ ಒಳ್ಳೆಯದು ಮಾಡುವುದಕ್ಕಿಂತ ಕೆಟ್ಟದು ಮಾಡುವುದೇ ಹೆಚ್ಚು. ಆದ್ದರಿಂದ ಎಲ್ಲರಿಗೂ ಮತದಾನದ ಹಕ್ಕನ್ನು ಕೊಡಬಾರದು.

ಒಟ್ಟಿನಲ್ಲಿ ನಾವು ಭಾರತದಲ್ಲಿ ಮತದಾನದ ಕ್ರಮವನ್ನು ಯಶಸ್ವಿಯಾಗಿ ನಿರ್ವಹಿಸಿದ್ದೇವೆ ಎನ್ನಬಹುದು. ಭಾರತದಲ್ಲಿ ಅತಿ ದೊಡ್ಡ ಮತದಾರರ ಗುಂಪು ಇರುವುದು ಮತ್ತು ಭಾರತವು ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವವಾಗಿರುವುದು ಮೆಚ್ಚಬೇಕಾದ ಸಂಗತಿಯಾಗಿದೆ.

**ಸಾರ್ವತ್ರಿಕ ಚುನಾವಣೆಗಳು ಮತ್ತು ಚುನಾವಣಾ ಕ್ರಮ**

1950–51ರ ರೆಪ್ರೆಸೆಂಟೇಷನ್ ಪೀಪಲ್ಸ್ ಆಕ್ಟ್ ಪ್ರಕಾರ ಚುನಾವಣೆಯ ನಿಯಮಗಳು, ಸ್ಥಾನಗಳ ಹಂಚಿಕೆ, ಪಾರ್ಲಿಮೆಂಟ್ ಮತ್ತು ಆಸೆಂಬ್ಲಿ ಕ್ಷೇತ್ರ ನಿರ್ಧಾರ, ಮತದಾರರ ಅರ್ಹತೆಗಳು, ಮತದಾರರ ಪಟ್ಟಿಗಳ ತಯಾರಿಕೆ, ಚುನಾವಣೆಗಳನ್ನು ಸಕ್ರಮವಾಗಿ ಜರುಗಿಸಲು ಅಧಿಕಾರಿಗಳ ನೇಮಕ, ಚುನಾವಣೆಯ ಹಂತಗಳು ಇತ್ಯಾದಿ, ಇತ್ಯಾದಿಗಳೆಲ್ಲ ಸೂಚಿತವಾಗಿವೆ.

ಸಾರ್ವತ್ರಿಕ ಚುನಾವಣೆಗಳು ಐದು ವರ್ಷಕ್ಕೊಮ್ಮೆ ನಡೆಯುತ್ತವೆ. ಅಗತ್ಯಬಿದ್ದರೆ ಪ್ರತಿನಿಧಿಗಳನ್ನಾರಿಸಲು ಮಧ್ಯಕಾಲೀನ ಚುನಾವಣೆಗಳನ್ನು ನಡೆಸುವುದೂ ಉಂಟು. ಬೇರೆ ಬೇರೆ ಪಕ್ಷಗಳ ರಾಜಕೀಯ ಧುರೀಣರು ಚುನಾವಣೆಗೆ ನಿಲ್ಲುತ್ತಾರೆ. ಈ ಪಕ್ಷಗಳು ತಮ್ಮ ಕಾರ್ಯಕ್ರಮಗಳ ಆಧಾರದ ಮೇಲೆ ಜನಬೆಂಬಲವನ್ನು ಪಡೆಯಲು ಸ್ಪರ್ಧಿಸುತ್ತವೆ. ಯಾವ ಪಕ್ಷಕ್ಕೂ ಸೇರದವರನ್ನು 'ಸ್ವತಂತ್ರ ಅಭ್ಯರ್ಥಿ' ಎಂದು ಕರೆಯುತ್ತಾರೆ. ಎಲ್ಲಿ ಚುನಾವಣೆಗಳು ಮುಕ್ತವಾಗಿ ಚೆನ್ನಾಗಿ ನಡೆಯುತ್ತವೋ ಅಲ್ಲಿ ಪ್ರಜಾಪ್ರಭುತ್ವವು ಯಶಸ್ಸು ಸಾಧಿಸುವುದು ಖಂಡಿತ.

**ಚುನಾವಣಾ ಆಯೋಗ**

ಗೊತ್ತುಪಡಿಸಿದ ಕಾಲಕ್ಕೆ ನ್ಯಾಯಪೂರ್ಣವಾದ ಮುಕ್ತ ಚುನಾವಣೆಯನ್ನು ನಡೆಸುವ ಜವಾಬ್ದಾರಿ ಭಾರತದ ಚುನಾವಣಾ ಆಯೋಗದ ಮೇಲೆ ಬೀಳುತ್ತದೆ. ಈ ಸ್ವಾಯುತ್ತ ಸಂಸ್ಥೆಯ ಮುಖ್ಯಸ್ಥರನ್ನು 'ಪ್ರಧಾನ ಚುನಾವಣಾಧಿಕಾರಿ' ಎಂದು ಕರೆಯುತ್ತಾರೆ. ಅನಕ್ಷರಸ್ಥ ಮತದಾರರಿಗೆ ಸಹಾಯವಾಗಲೆಂದು ಆಯೋಗವು ಅಭ್ಯರ್ಥಿಗಳಿಗೆ ವಿವಿಧ ಚುನಾವಣಾ ಸಂಕೇತಗಳನ್ನು ನೀಡುತ್ತದೆ. ಮತದಾನವು ಗುಪ್ತ ಮತದಾನ ಪದ್ಧತಿಯಲ್ಲಿ ನಡೆಯುತ್ತದೆ. ಚುನಾವಣೆಯ ಎಲ್ಲ ಹಂತಗಳನ್ನು ವ್ಯವಸ್ಥೆಗೊಳಿಸುವ ಹಾಗೂ ಮೇಲ್ವಿಚಾರಣೆ ಮಾಡುವ ಕೆಲಸವನ್ನು ಈ ಆಯೋಗವು ನಿರ್ವಹಿಸುತ್ತದೆ.

ಚುನಾವಣೆಯ ವಿವಿಧ ಹಂತಗಳಲ್ಲಿ ಏಳುವ ವಿವಾದಗಳಲ್ಲಿ ಆಯೋಗವು ತೀರ್ಪುಕೊಡುತ್ತದೆ. ಚುನಾವಣಾ ಕಾನೂನನ್ನಾಗಲೀ ನಡವಳಿಕೆಯನ್ನಾಗಲೀ ಮೀರುವುದು ಶಿಕ್ಷಾರ್ಹ ಅಪರಾಧವಾಗುತ್ತದೆ. ಚುನಾವಣಾ ಆಯೋಗದ ತೀರ್ಮಾನಗಳನ್ನು ನ್ಯಾಯಾಲಯಗಳಲ್ಲಿ ಪ್ರಶ್ನಿಸಲು ಅವಕಾಶವಿದೆ. ಚುನಾವಣಾ ಆಯೋಗವು 1991ರವರೆಗೆ ಹತ್ತು ಸಾರ್ವತ್ರಿಕ ಚುನಾವಣೆಗಳನ್ನೂ ಹಲವಾರು ಉಪಚುನಾವಣೆಗಳನ್ನೂ

ಯಶಸ್ವಿಯಾಗಿ ನಡೆಸಿಕೊಟ್ಟಿದೆ. ರಾಷ್ಟ್ರ ಮಟ್ಟದಿಂದ ಹಿಡಿದು ತಾಲ್ಲೂಕಿನ ಮಟ್ಟದವರೆಗೆ ಶ್ರೇಣೀಕೃತ ಸಿಬ್ಬಂದಿ ವರ್ಗವನ್ನು ಆಯೋಗವು ನೇಮಿಸುತ್ತದೆ.

**ಚುನಾವಣಾ ಕ್ರಮ: ಒಂದು ಸಂಕ್ಷಿಪ್ತ ಅಧ್ಯಯನ**

ಮತದಾರರ ಮತ್ತು ಅಭ್ಯರ್ಥಿಗಳ ಅನುಕೂಲಕ್ಕಾಗಿ ಚುನಾವಣಾ ಆಯೋಗವು ಸಾಕಷ್ಟು ಮುಂಚೆಯೇ ಚುನಾವಣೆಗೆ ಸಂಬಂಧಿಸಿದ ವೇಳಾಪಟ್ಟಿಯನ್ನು ಪ್ರಕಟಿಸುತ್ತದೆ. ಪ್ರಕಟಣೆಯಲ್ಲಿ ಈ ಅಂಶಗಳು ಇರುತ್ತವೆ:

**i) ನಾಮಪತ್ರಗಳನ್ನು ತುಂಬುವಿಕೆ**

ಗೊತ್ತುಪಡಿಸಿದ ಕಾಲದೊಳಗೆ ಚುನಾವಣೆಗೆ ನಿಲ್ಲಬಯಸುವ ಅಭ್ಯರ್ಥಿಗಳು ತಮ್ಮ ನಾಮಪತ್ರಗಳನ್ನು ಚುನಾವಣಾಧಿಕಾರಿಗೆ ಸಲ್ಲಿಸಬೇಕಾಗುತ್ತದೆ. ಅದಕ್ಕೆ ಕಾನೂನಿನಂತೆ ನಿಗದಿಯಾದ ಠೇವಣಿಯನ್ನು ಕೊಡಬೇಕಾಗುತ್ತದೆ. ನಿಗದಿ ಪಡಿಸಿದ ಶೇಕಡಾವಾರು ಮತಗಳನ್ನು ಅಭ್ಯರ್ಥಿಗಳು ಪಡೆಯದೆ ಹೋದರೆ ಅವರು ಠೇವಣಿಯನ್ನು ಕಳೆದುಕೊಳ್ಳಬೇಕಾಗುತ್ತದೆ.

**ii) ನಾಮಪತ್ರ ಪರಿಶೀಲನೆ**

ಅಭ್ಯರ್ಥಿಯ ಅರ್ಹತೆಯನ್ನು ಪರಿಶೀಲಿಸಲಾಗುತ್ತದೆ. ಅನರ್ಹ ಅಭ್ಯರ್ಥಿಯ ಪತ್ರಗಳನ್ನು ತಿರಸ್ಕರಿಸಲಾಗುತ್ತದೆ ಮತ್ತು ಸ್ಪರ್ಧಿಗಳ ಅಂತಿಮ ಪಟ್ಟಿಯನ್ನು ತಯಾರಿಸಲಾಗುತ್ತದೆ.

**iii) ನಾಮಪತ್ರಗಳನ್ನು ಹಿಂತೆಗೆದುಕೊಳ್ಳುವಿಕೆ**

ನಾಮಪತ್ರಗಳನ್ನು ಹಿಂತೆಗೆದುಕೊಳ್ಳ ಬಯಸುವವರು ಅದಕ್ಕೆ ನಿಗದಿಪಡಿಸಿದ ದಿನಾಂಕದೊಳಗೆ ಹಾಗೆ ಮಾಡಲು ಅವಕಾಶವಿದೆ.

**iv) ಚುನಾವಣಾ ಪ್ರಚಾರ**

ಅಭ್ಯರ್ಥಿಗಳು ಮತ್ತು ರಾಜಕೀಯ ಪಕ್ಷಗಳವರು ಪ್ರಚಾರವನ್ನು ಆರಂಭಿಸಿ ಚುನಾವಣಾ ಪ್ರಣಾಳಿಕೆಯನ್ನು ಹೊರಡಿಸಿ ಮತದಾರರ ಮನವೊಲಿಸಲು ತೊಡಗುತ್ತಾರೆ. ಪ್ರಚಾರದ ಅವಧಿಯಲ್ಲಿ ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿ ಚುನಾವಣಾ ಭಾಷಣಗಳನ್ನು ಮಾಡಲಾಗುತ್ತದೆ. ವಿಧಿಸಿದ ಕಾನೂನನ್ನು ಮೀರದೆ ಸ್ವತಂತ್ರವಾಗಿ ಪ್ರಚಾರ ಕಾರ್ಯವನ್ನು ಮಾಡಲು ಅಭ್ಯರ್ಥಿಗಳಿಗೆ ಸ್ವಾತಂತ್ರ್ಯವಿದೆ. ಚುನಾವಣೆ ಆರಂಭವಾಗುವುದಕ್ಕೆ 48 ಗಂಟೆಗಳ ಮುಂಚೆ ಅಭ್ಯರ್ಥಿಗಳು ಪ್ರಚಾರ ಕಾರ್ಯವನ್ನು ನಿಲ್ಲಿಸಬೇಕು.

**v) ಚುನಾವಣಾ ದಿನ**

ಅಗತ್ಯ ಬಿದ್ದರೆ ಚುನಾವಣೆ ನಡೆಸಲಾಗುತ್ತದೆ. ಮತದಾನವು ಸುಸೂತ್ರವಾಗಿ

ಸಾಗಲು ನೆರವಾಗುವಂತೆ ತಕ್ಕ ಸಿಬ್ಬಂದಿಯನ್ನು ಆಯೋಗವು ನೇಮಕ ಮಾಡುತ್ತದೆ. ಸಂರಕ್ಷಣಾ ವ್ಯವಸ್ಥೆಗಳನ್ನು ಮಾಡಲಾಗುತ್ತದೆ. ಚುನಾವಣಾ ನಿಯಮಗಳನ್ನು ಯಾರೂ ಮೀರಬಾರದೆಂಬುದೇ ಇದರ ಉದ್ದೇಶ. ಚುನಾವಣೆಯ ದಿನ ಸಾರ್ವಜನಿಕ ರಜಾದಿನವೆಂದು ಘೋಷಿಸಲಾಗುತ್ತದೆ. ಅಂಗವಿಕಲರಿಗೂ, ಕುರುಡರಿಗೂ ಸಹ ಮತದಾನ ಮಾಡಲು ಅವಕಾಶವಿದೆ. ಅಭ್ಯರ್ಥಿಗಳ ಇಷ್ಟಪಟ್ಟರೆ ಮತದಾನದ ಕೇಂದ್ರಗಳಲ್ಲಿ ಪೋಲಿಂಗ್ ಏಜೆಂಟರನ್ನು ಇಡಬಹುದು.

**vi) ಮತ ಪತ್ರಗಳ ಎಣಿಕೆ**

ಎಣಿಕೆಯ ಕೇಂದ್ರಗಳಲ್ಲಿ ಮೊಹರು ಆದ ಮತ ಪೆಟ್ಟಿಗೆಗಳನ್ನು ಇಡಲಾಗುತ್ತದೆ. ಅಭ್ಯರ್ಥಿಗಳ ಅಥವಾ ಏಜೆಂಟರ ಸಮ್ಮುಖದಲ್ಲಿ ಎಣಿಕೆಯನ್ನು ಆರಂಭಿಸಲಾಗುತ್ತದೆ.

**vii) ಘೋಷಣೆ**

ಅತಿ ಹೆಚ್ಚು ಮತಗಳನ್ನು ಪಡೆದವರನ್ನು 'ಆಯ್ಕೆಯಾಗಿದ್ದಾರೆ' ಎಂದು ಘೋಷಿಸಲಾಗುತ್ತದೆ.

ಲೋಕಸಭೆ, ವಿಧಾನಸಭೆ, ನಗರಸಭೆ ಮತ್ತು ಪುರಸಭೆಗಳ ಹಾಗೂ ಜಿಲ್ಲಾ ತಾಲ್ಲೂಕು ಮತ್ತು ಗ್ರಾಮ ಪಂಚಾಯತ್ ಚುನಾವಣೆಗಳಿಗೆಲ್ಲಾ ಈ ಕ್ರಮವನ್ನು ಅನುಸರಿಸಲಾಗುತ್ತದೆ. ಕರ್ನಾಟಕದ ಜಿಲ್ಲಾ ಪರಿಷತ್ತು ಹಾಗೂ ಪಂಚಾಯಿತಿಗಳ ಚುನಾವಣೆಯಲ್ಲಿ ಅಲ್ಪ ಸ್ವಲ್ಪ ಮಾರ್ಪಾಡುಗಳೊಂದಿಗೆ ಇದೇ ಕ್ರಮ ಜಾರಿಯಲ್ಲಿದೆ.

**ಪ್ರಜಾಪ್ರಭುತ್ವದಲ್ಲಿ ಪಕ್ಷ ಪದ್ಧತಿ: 'ಎರಡು ಪಕ್ಷ' ಪದ್ಧತಿ ಮತ್ತು 'ಬಹುಪಕ್ಷ' ಪದ್ಧತಿ**

ಯಾವುದೇ ಪ್ರಜಾಪ್ರಭುತ್ವದಲ್ಲಾಗಲಿ ರಾಜಕೀಯ ಪಕ್ಷಗಳ ಪಾತ್ರ ಮಹತ್ವದ್ದಾಗಿರುತ್ತದೆ. ಆಧುನಿಕ ಪ್ರಜಾಪ್ರಭುತ್ವದಲ್ಲಿ ಎರಡು ರಾಜಕೀಯ ಪಕ್ಷಗಳ ಅಥವಾ ಬಹುಪಕ್ಷಗಳ ಕಾರ್ಯಪದ್ಧತಿ ಇರುತ್ತದೆ. ಅಮೆರಿಕಾ ಹಾಗೂ ಬ್ರಿಟನ್‌ಗಳಲ್ಲಿ ಎರಡು ಪ್ರಧಾನ ಪಕ್ಷಗಳು ಅಧಿಕಾರಕ್ಕಾಗಿ ಸೆಣಸುತ್ತವೆ. ಭಾರತ, ಫ್ರಾನ್ಸ್ ಮೊದಲಾದ ದೇಶಗಳಲ್ಲಿ ಬಹು ಪಕ್ಷಗಳಿವೆ. ಆದ್ದರಿಂದ ಇಲ್ಲಿ ಯಾವುದೇ ಒಂದು ರಾಜಕೀಯ ಪಕ್ಷ ಅಥವಾ ರಾಜಕೀಯ ಪಕ್ಷಗಳ ಒಕ್ಕೂಟವು ಸರಕಾರವನ್ನು ರಚಿಸುತ್ತದೆ. ಪ್ರಜಾಪ್ರಭುತ್ವವು ಕ್ರಿಯಾತ್ಮಕವಾಗಬೇಕಾದರೆ 'ಎರಡು ಪಕ್ಷ'ದ ವ್ಯವಸ್ಥೆ ತುಂಬ ಉತ್ತಮ ಎಂದು ಹೇಳುತ್ತಾರೆ. ಭಾರತದಲ್ಲಿ ಬಹುಮತ ಪಡೆದ ಪಕ್ಷದ ಚುನಾಯಿತ ಸದಸ್ಯರು ತಮ್ಮ ನಾಯಕನನ್ನು ಆರಿಸುತ್ತಾರೆ. ಆ ನಾಯಕನು ಸರಕಾರ ನಡೆಸಲು ಮಂತ್ರಿಮಂಡಲವನ್ನು ರಚಿಸುತ್ತಾನೆ. 1991 ರಲ್ಲಿ ಭಾರತದಲ್ಲಿ ನೇತಾಡುವ ಲೋಕಸಭೆ (HUNG PARLIAMENT)ಯ ಸಂದರ್ಭ ಒದಗಿ ಬಂದಿತ್ತು. ಏಕೆಂದರೆ ಯಾವೊಂದು ಪಕ್ಷಕ್ಕೂ ಬಹುಮತ ದೊರೆಯಲಿಲ್ಲ.

**ಪ್ರಜಾಪ್ರಭುತ್ವದಲ್ಲಿ ವಿರೋಧ ಪಕ್ಷಗಳ ಪಾತ್ರ**

1. ವಿರೋಧ ಪಕ್ಷವನ್ನು "ಪ್ರಜಾಪ್ರಭುತ್ವದ ಕಾವಲು ನಾಯಿ" ಎಂದು ಹೇಳಲಾಗಿದೆ. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ವಿರೋಧ ಪಕ್ಷದವರು ಆಳುವ ಪಕ್ಷದವರಷ್ಟೇ ಸಮರ್ಥರಾಗಿದ್ದು ಅಗತ್ಯ ಬಿದ್ದರೆ ರಾಜ್ಯವನ್ನಾಳುವ ಜವಾಬ್ದಾರಿಯನ್ನು ಹೊರಬಲ್ಲವರಾಗಿರಬೇಕು.
2. ಆಳುವ ಪಕ್ಷವು ವಿರೋಧ ಪಕ್ಷದ ದೃಷ್ಟಿ ಕೋನವನ್ನು ಗೌರವಿಸಬೇಕು. ವಿರೋಧ ಪಕ್ಷವು ಆಳುವ ಪಕ್ಷವನ್ನು ಸದಾ ಎಚ್ಚರದ ಸ್ಥಿತಿಯಲ್ಲಿ ಇಟ್ಟಿರುತ್ತದೆ.
3. ಆಳುವ ಪಕ್ಷವು ಕಾರ್ಯ ನಿರ್ವಹಿಸಲು ವಿಫಲವಾದಾಗ ವಿರೋಧ ಪಕ್ಷವು ಆಳುವ ಪಕ್ಷವಾಗುತ್ತದೆ.
4. ಎಲ್ಲ ರಾಜಕೀಯ ಪಕ್ಷಗಳ ಅಂತಿಮ ಗುರಿಯು ಜನರ ಕಲ್ಯಾಣ ಮತ್ತು ಸಮಾಜದ ಎಲ್ಲ ವರ್ಗಗಳ ಏಳಿಗೆಗಾಗಿ ದುಡಿಯುವುದೇ ಆಗಿದೆ.
5. ಪ್ರಜಾಪ್ರಭುತ್ವದಲ್ಲಿ ವಿರೋಧ ಪಕ್ಷವು ಜವಾಬ್ದಾರಿಯುತವಾದ ಮತ್ತು ರಚನಾತ್ಮಕವಾದ ಟೀಕೆಗಳನ್ನು ಮಾಡುತ್ತದೆಂದು ನಿರೀಕ್ಷಿಸಲಾಗುತ್ತದೆ. 'ಕೇವಲ ವಿರೋಧಿಸುವುದಕ್ಕಾಗಿ ವಿರೋಧ' ಎಂಬುದು ವಿರೋಧ ಪಕ್ಷದ ಧ್ಯೇಯವಾಗಬಾರದು, ರಾಷ್ಟ್ರದ ಹಿತ ಮತ್ತು ಸಮಾಜದ ಜನಗಳ ಕಲ್ಯಾಣ ಈ ಎರಡು ಅಂಶಗಳನ್ನು ವಿರೋಧ ಪಕ್ಷಗಳು ಮರೆಯಬಾರದು.
6. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ವಿರೋಧ ಪಕ್ಷವು ಅನಿವಾರ್ಯವಾಗಿದ್ದು ಅದು ಮಹತ್ವದ ಪಾತ್ರ ವಹಿಸುತ್ತದೆ.

## ಅಭ್ಯಾಸಗಳು

**1. ಕೆಳಕಂಡ ಪ್ರಶ್ನೆಗಳಿಗೆ ಒಂದು ವಾಕ್ಯದ ಉತ್ತರಗಳನ್ನು ಬರೆಯಿರಿ.**

ಅ. ಪ್ರಜಾಪ್ರಭುತ್ವ ಜೀವನ ವಿಧಾನವನ್ನು ಜಗತ್ತು ಯಾರಿಂದ ಸ್ವೀಕರಿಸಿತು ?

ಆ. ಪ್ರಜಾಪ್ರಭುತ್ವದ ಅರ್ಥ ವಿವರಣೆಯ ಸಂದರ್ಭದಲ್ಲಿ ಅಬ್ರಹಾಂ ಲಿಂಕನ್ನನ ಹೇಳಿಕೆಯನ್ನು ಉದ್ಧರಿಸಿ.

ಇ. ಯಾವುದೇ ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಸಮೂಹ ಮಾಧ್ಯಮಗಳು ಯಾವುವು ?

ಈ. 1991ರವರೆಗೆ ಸ್ವತಂತ್ರ ಭಾರತದಲ್ಲಿ ಎಷ್ಟು ಸಾರ್ವತ್ರಿಕ ಚುನಾವಣೆಗಳು ನಡೆದಿವೆ ?

ಉ. ಚುನಾವಣೆಯಲ್ಲಿ ಯಾರ ಠೇವಣಿ ಮುಟ್ಟುಗೋಲಾಗುತ್ತದೆ ?

ಋ. ಚುನಾವಣೆಯಲ್ಲಿ ಸ್ವತಂತ್ರ ಅಭ್ಯರ್ಥಿ (ಉಮೇದುವಾರ) ಎಂದರೆ ಯಾರು ?

ಎ. ವಿರೋಧ ಪಕ್ಷವನ್ನು "ಪ್ರಜಾಪ್ರಭುತ್ವದ ಕಾವಲು ನಾಯಿ" ಎಂದು ಏಕೆ ಕರೆಯುತ್ತಾರೆ ?

ಏ. ಮತದಾರನ ಕನಿಷ್ಠ ವಯಸ್ಸು ಎಷ್ಟಿರಬೇಕು ?

**2. ಬಿಟ್ಟ ಸ್ಥಳಗಳನ್ನು ಸರಿಯಾದ ಶಬ್ದಗಳಿಂದ ತುಂಬಿ.**

ಅ. ಮಾತೃಸಂಸತ್ತು ಎಂದು ....... ಪಾರ್ಲಿಮೆಂಟನ್ನು ಕರೆಯಲಾಗಿದೆ.

ಆ. ಗ್ರೀಕ್ ಭಾಷೆಯಲ್ಲಿ 'ಡೆಮಾಸ್' ಎಂದರೆ...... ಎಂದರ್ಥ, ಮತ್ತು........ ಎಂದರೆ ಅಧಿಕಾರ ಎಂದರ್ಥ.

ಇ. ಒಬ್ಬ ನಾಯಕನು ತನಗೆ....... ಹೋದಾಗ ಎದೆಗುಂದಬೇಕಾಗಿಲ್ಲ.

ಈ. ಭಾರತದಲ್ಲಿ ಚುನಾವಣೆಯನ್ನು ನಡೆಸುವ ಜವಾಬ್ದಾರಿಯು....... ಎಂಬ ಸಂಸ್ಥೆಯ ಮೇಲಿದೆ.

ಉ. ......... ರಿಗೆ ಸಹಾಯವಾಗಲೆಂದು ಅಭ್ಯರ್ಥಿಗಳಿಗೆ ಬೇರೆ ಬೇರೆ....... ಗಳನ್ನು ಮತಪತ್ರದಲ್ಲಿ ಸೂಚಿಸಲಾಗಿರುತ್ತದೆ.

**3. ಇವುಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

ಅ. ಭಾರತದ ಪ್ರಜಾಪ್ರಭುತ್ವವು ಏಕೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ ?

ಆ. ಒಂದು ದೇಶದಲ್ಲಿ ಪ್ರಜಾಪ್ರಭುತ್ವದ ಅಂಶಗಳನ್ನು ಹೇಗೆ ಪಡೆಯಬಹುದು ?

ಇ. ಸಾರ್ವತ್ರಿಕ ವಯಸ್ಕರ ಮತದಾನ ಪದ್ಧತಿ ಎಂದರೇನು ?

ಈ. ಸಾರ್ವತ್ರಿಕ ವಯಸ್ಕರ ಮತದಾನ ಪದ್ಧತಿಯನ್ನು ಕೆಲವರು ವಿರೋಧಿಸುತ್ತಾರೆ. ಏಕೆ ?

**4. i). ಈ ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ನಾಲ್ಕರಿಂದ ಆರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

ಅ. ಸರ್ವಾಧಿಕಾರದ ಆಳ್ವಿಕೆಗೆ ಕಾರಣವಾಗುವ ಅಂಶಗಳು ಯಾವುವು ?

ಆ. ಪ್ರತ್ಯಕ್ಷ ಪ್ರಜಾಪ್ರಭುತ್ವ, ಪರೋಕ್ಷ ಪ್ರಜಾಪ್ರಭುತ್ವ ಇವೆರಡರ ವ್ಯತ್ಯಾಸವನ್ನು ತಿಳಿಸಿ.

ಇ. ಪ್ರಜಾಪ್ರಭುತ್ವದಲ್ಲಿ ಎರಡು ಪಕ್ಷಗಳ ವ್ಯವಸ್ಥೆ ಮತ್ತು ಬಹುಪಕ್ಷಗಳ ವ್ಯವಸ್ಥೆಗಳಿಗಿರುವ ವ್ಯತ್ಯಾಸಗಳೇನು ?

**ii) ಇವುಗಳಿಗೆ ಟಿಪ್ಪಣಿ ಬರೆಯಿರಿ.**

ಅ. ವಿವೇಕದ ನಾಯಕತ್ವ.

ಆ. ಶಿಸ್ತಿನ ಪ್ರಜಾವರ್ಗ.

ಇ. ಪ್ರಜಾಪ್ರಭುತ್ವದಲ್ಲಿ 'ವಿರೋಧ ಪಕ್ಷ'

**5. ಇವುಗಳಿಗೆ ಒಂದು ಪುಟದ ಉತ್ತರ ಬರೆಯಿರಿ.**

ಅ. ಪ್ರಜಾಪ್ರಭುತ್ವದ ನಾಲ್ಕು ಮುಖ್ಯ ಅಗತ್ಯಗಳನ್ನು ಕುರಿತು ಬರೆಯಿರಿ.

ಆ. ಯಾವುದಾದರೊಂದು ಚುನಾವಣೆ ಅಥವಾ ಮಧ್ಯಂತರ ಚುನಾವಣೆಯಲ್ಲಿ ಚುನಾವಣೆ ನಡೆಸುವ ಕ್ರಮಗಳನ್ನು ಕುರಿತು ಬರೆಯಿರಿ.

6. **ಕೆಳಗಿನ ಹೇಳಿಕೆಗಳಲ್ಲಿ ಕೆಲವು ತಪ್ಪಾಗಿವೆ. ಹಾಗೆ ತಪ್ಪಿರುವ ಹೇಳಿಕೆಗಳನ್ನು ಮಾತ್ರ ತಿದ್ದಿ ಬರೆಯಿರಿ.**

ಅ. ಅಂತಿಮವಾಗಿ ಪ್ರಜಾಪ್ರಭುತ್ವದಲ್ಲಿ ಆಡಳಿತವನ್ನು ನಡೆಸುವ ಜವಾಬ್ದಾರಿಯು "ಅಧಿಕಾರಿ"ಗಳಲ್ಲಿ ಇರುತ್ತದೆ.

ಆ. ಸಂವಿಧಾನವು ದೇಶದ ಮೂಲಭೂತ ಕಾನೂನು.

ಇ. "ಸಾಮಾನ್ಯವಾಗಿ ಒಂದು ಅಲ್ಪಮತೀಯರ ಗುಂಪಿನ ನಾಯಕನು ಅಧಿಕಾರವನ್ನು ಬಯಸುವಂತಿಲ್ಲ"

ಈ. ಒಂದು ಚುನಾವಣಾ ವಿವಾದವನ್ನು ದೇಶದ ಕೆಳಗಿನ ಕೋರ್ಟು ಮಾತ್ರ ಪರಿಹರಿಸಬಲ್ಲುದು.

ಉ. 'ವಿರೋಧ' ಮತ್ತು 'ಭಿನ್ನಾಭಿಪ್ರಾಯ'ಗಳಿರುವುದು ಪ್ರಜಾಪ್ರಭುತ್ವದಲ್ಲಿ ತುಂಬಾ ಸಾಮಾನ್ಯ.

ಊ. ಒಮ್ಮೆ ಚುನಾಯಿತಗೊಂಡ ಮೇಲೆ ಅಭ್ಯರ್ಥಿ ಅಥವಾ ಪಕ್ಷವು ಸಾರ್ವಜನಿಕ ಅಭಿಪ್ರಾಯಗಳಿಗೆ ಮನ್ನಣೆ ಕೊಡಬೇಕಾಗಿಲ್ಲ.

7. **ಚಟುವಟಿಕೆಗಳು**

ಅ. ರಾಜಕೀಯ ಪಕ್ಷಗಳು ಏರ್ಪಡಿಸುವ ಸಭೆಗಳಿಗೆ – ಮುಖ್ಯವಾಗಿ ಚುನಾವಣಾ ಸಭೆಗಳಿಗೆ – ಹಾಜರಿ ಹಾಕಿರಿ ಮತ್ತು ಪ್ರಸ್ತಾಪಿತವಾಗುವ ಅಂಶಗಳನ್ನು ವಿಮರ್ಶಾತ್ಮಕವಾಗಿ ತೂಗಿ ನೋಡಿ.

ಆ. ಚುನಾವಣೆಯ ಫಲಿತಾಂಶಗಳನ್ನು ವೈಚಾರಿಕವಾಗಿ ವಿಶ್ಲೇಷಿಸಿ.

ಇ. ಚುನಾವಣೆಯ ಹಂತಗಳನ್ನು ವಿವರವಾಗಿ ಅಧ್ಯಯನ ಮಾಡಿ.

# ೨. ನಮ್ಮ ಪ್ರಜಾಪ್ರಭುತ್ವವನ್ನು ಬಲಪಡಿಸುವಿಕೆ

ರಾಜಕೀಯ ಚಿಂತಕರು ಬದಲಿ ಅತ್ಯುತ್ತಮ ಸರಕಾರದ ವ್ಯವಸ್ಥೆಯನ್ನು ರೂಪಿಸಿಲ್ಲವಾದ್ದರಿಂದ ಸದ್ಯಕ್ಕೆ ಪ್ರಜಾಪ್ರಭುತ್ವ ವ್ಯವಸ್ಥೆಯೇ ಶ್ರೇಷ್ಠ ಪದ್ಧತಿ ಎಂದು ಹೇಳಬಹುದು. ಸರ್ವಾಧಿಕಾರದ ಆಳ್ವಿಕೆ ಈ ಜಗತ್ತಿನಲ್ಲಿ ಕ್ರಮೇಣ ತನ್ನ ಹಿಡಿತವನ್ನು ಕಳೆದುಕೊಳ್ಳುತ್ತಿದೆ. ಸಮಾಜವಾದದ ವೇಷದಲ್ಲಿ ಬಂದ ಸರ್ವಾಧಿಕಾರಿ ವ್ಯವಸ್ಥೆ ಕೂಡ ಪೂರ್ವ ಯುರೋಪ್ ರಾಜ್ಯಗಳಲ್ಲಿ ವಿಫಲವಾಗಿದೆ (ಹಿಂದಿನ ಸೋವಿಯತ್ ಒಕ್ಕೂಟದ ಇತ್ತೀಚಿನ ಬೆಳವಣಿಗೆಗಳು ಇದಕ್ಕೆ ಒಂದು ಉದಾಹರಣೆ. ಹಾಗೆಯೇ ಚೈನಾ ಜನತೆ ಕೂಡ ನಿರಂಕುಶ ಆಳ್ವಿಕೆಯ ವಿರುದ್ಧ ಸೊಲ್ಲೆತ್ತಿರುವುದನ್ನು ಕಾಣಬಹುದಾಗಿದೆ).

ಸ್ವಾತಂತ್ರ್ಯ ಬಂದ ಸಂದರ್ಭದಿಂದ ನಮ್ಮ ದೇಶವು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅನುಸರಿಸಿದ್ದು ಭಾರತದ ಜನರು ಇದನ್ನು ತಮ್ಮ ಜೀವನ ಸೂತ್ರವಾಗಿ ಸ್ವೀಕರಿಸಿದ್ದಾರೆ. ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವವಾಗಿ ಭಾರತವು ಸರ್ವಾಂಗೀಣ ಪ್ರಗತಿಯತ್ತ ಸಾಗುತ್ತಿದೆ. ಪ್ರಜಾಸತ್ತೆಯ ತತ್ವ ಬಲಗೊಂಡು ಈ ಪುರಾತನ ಭೂಮಿಯಲ್ಲಿ ಭದ್ರವಾಗಿ ಬೇರೂರುತ್ತಿದೆ. ಈ ತತ್ವದ ಪ್ರಕಾರ ಸಮಾಜದ ದೀನದಲಿತರ ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳ ಬಗೆಗೆ ಸರಕಾರವು ನಡೆಸುತ್ತಿರುವ ಕ್ರೀಯಾಶೀಲ ಯೋಜನೆಗಳನ್ನು ಅರ್ಥಮಾಡಿಕೊಳ್ಳುವಷ್ಟು, ಜನರು ರಾಜಕೀಯ ಪ್ರಜ್ಞೆ ಹೊಂದಿದ್ದಾರೆ. ಈ ಚಟುವಟಿಕೆಗಳು ಎಲ್ಲರ ಏಳಿಗೆಗೆ ಸಹಾಯಕವಾಗಿವೆ.

ಪ್ರಜಾಪ್ರಭುತ್ವವು ಸುಭದ್ರವಾಗಬೇಕಾದರೆ ಅನೇಕ ಬಗೆಯ ಸಹಕಾರ ಅಗತ್ಯ. ಉದಾಹರಣೆಗೆ ತಿಳಿವಳಿಕಸ್ಥರಾದ ಹಾಗೂ ಜವಾಬ್ದಾರಿಯುಳ್ಳ ಪ್ರಜಾವರ್ಗ, ವಿಸ್ತಾರವಾದ ವಾರ್ತಾಜಾಲಗಳು, ಪತ್ರಿಕಾ ಸ್ವಾತಂತ್ರ್ಯ, ಸಮೂಹ ಮಾಧ್ಯಮ ಮತ್ತು ಉತ್ತಮ ಸಂಪರ್ಕ ವ್ಯವಸ್ಥೆ ಇತ್ಯಾದಿಗಳು.

**ಭಾರತದಲ್ಲಿ ಉತ್ತಮ ಪೌರತ್ವದ ಲಕ್ಷಣಗಳು**

ಹಿಂದಿನ ಅಧ್ಯಾಯದಲ್ಲಿ ಈ ಬಗೆಗೆ ಸ್ವಲ್ಪ ವಿವೇಚನೆ ಮಾಡಲಾಗಿದೆ. ಪ್ರಜಾಪ್ರಭುತ್ವದ ಯಶಸ್ಸು ಪೌರತ್ವದ ಯೋಗ್ಯತೆಯ ಮೇಲೆ ನಿಂತಿದೆ ಎಂಬುದನ್ನು ಮರೆಯಬಾರದು. ಒಂದು ಚುನಾವಣೆಯಿಂದ ಮತ್ತೊಂದಕ್ಕೆ ಸಾಗಿದಾಗಲೂ ಭಾರತವು ಗುಣಾತ್ಮಕವಾದ ಪ್ರಗತಿಯನ್ನು ಪ್ರದರ್ಶಿಸಿಕೊಂಡೇ ಬಂದಿದೆ.

ಜನಸಾಮಾನ್ಯರ ಮಟ್ಟದಲ್ಲಿ ಜನತೆಗೆ ನಾಯಕತ್ವದ ತರಬೇತಿಯನ್ನು ಕೊಡುವಂತೆ ಕೇಂದ್ರದ ಎಲ್ಲ ರಾಜ್ಯಗಳಲ್ಲೂ ಸ್ಥಾನಿಕ ಪರಿಷತ್ತುಗಳಿಗೆ ಹೆಚ್ಚಿನ ಅಧಿಕಾರವನ್ನು ಕಲ್ಪಿಸಿಕೊಡಲಾಗಿದೆ.

ಈ ಮಟ್ಟದಲ್ಲಿ ಆಡಳಿತಕ್ಕೆ ಸಂಬಂಧಿಸಿದ ಹಲವಾರು ಸಂಗತಿಗಳನ್ನು ಜನರಿಗೆ ತಿಳಿಸಲಾಗುತ್ತದೆ. ಗ್ರಾಮ ಪಂಚಾಯಿತಿ, ಮಂಡಲ ಪಂಚಾಯಿತಿಗಳು 1985ರ ಪಂಚಾಯತ್ ರಾಜ್ ವಿಧಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದು ಹೆಚ್ಚು

ಅಧಿಕಾರವನ್ನು ಪಡೆದುಕೊಂಡಿವೆ. ಕರ್ನಾಟಕ ಪಂಚಾಯಿತಿ ಅಧಿನಿಯಮ 1993 ರಂತೆ ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳ ವ್ಯವಸ್ಥೆ ಆಗಿದೆ. ಜ್ಞಾನ ಲಾಭಕ್ಕಾಗಿ ಸಹಕಾರ ಚಳುವಳಿಯನ್ನು ಕೂಡ ವ್ಯಾಪಕವಾಗಿ ಜನಪ್ರಿಯಗೊಳಿಸಲಾಗುತ್ತಿದೆ.

**ವಾರ್ತಾ ಸಮೃದ್ಧಿ**

ನಾವು ವಾರ್ತಾಕ್ರಾಂತಿಯ ಯುಗದಲ್ಲಿ ಸಾಗುತ್ತಿದ್ದೇವೆ. ಇದರ ಪರಿಣಾಮವಾಗಿ ಇಂದಿನ ಜಗತ್ತು ಜ್ಞಾನಸ್ಫೋಟಕ್ಕೆ ಅಣಿಯಾಗಿರುವುದು ನಿತ್ಯದ ಸಂಗತಿಯಾಗಿದೆ. ಭಾರತೀಯ ಪೌರರು ಈ ಸಂದರ್ಭವನ್ನು ಚೆನ್ನಾಗಿ ಬಳಸಿಕೊಳ್ಳಬೇಕು. ಪ್ರಜಾಪ್ರಭುತ್ವದ ನಾನಾ ಘಟಕಗಳ ಪೂರ್ಣ ತಿಳುವಳಿಕೆ ಹೊಂದಿ ಜ್ಞಾನವನ್ನು ವಿಸ್ತರಿಸಿಕೊಳ್ಳಬೇಕು. ಸಾಕ್ಷರತಾ ಪ್ರಸಾರದಿಂದ ಸುದ್ದಿ ಪ್ರಸಾರಕ್ಕೆ ದಾರಿಯಾಗುತ್ತದೆ ಮತ್ತು ಪ್ರಜಾಪ್ರಭುತ್ವವು ಯಶಸ್ವಿಯಾಗುತ್ತದೆ.

**ಸಾಕ್ಷರತಾ ಯೋಜನೆ**

ವಿದ್ಯೆ ಮತ್ತು ಸಾಕ್ಷರತೆಗಳನ್ನು ಹರಡುವುದರಿಂದ ಜ್ಞಾನ ಸಂಪಾದನೆಯು ಸಾಧ್ಯವಾಗುತ್ತದೆ. ಬೇರೆ ರಾಷ್ಟ್ರಗಳೊಂದಿಗೆ ಹೋಲಿಸಿದಾಗ ಈ ವಿಷಯದಲ್ಲಿ ಭಾರತವು ತುಂಬ ಹಿಂದೆ ಬಿದ್ದಿದೆ. ಸ್ವತಂತ್ರ ಭಾರತದಲ್ಲಿ ಹಲವಾರು ಸಾಕ್ಷರತಾ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದ್ದು ಅವು ಇಂದಿಗೂ ಮುಂದುವರಿಯುತ್ತಿವೆ. 1991 ಜನಗಣತಿ ವರದಿಯ ಆಧಾರದ ಮೇಲೆ ಹೇಳುವುದಾದರೆ ಭಾರತವು ಶೇ. 52.11ರಷ್ಟು ಸಾಕ್ಷರತಾ ಪ್ರಗತಿಯನ್ನು ಸಾಧಿಸಿದ್ದು ಶೇಕಡಾ ನೂರರ ಗುರಿಯನ್ನು ಸಾಧಿಸಲು ಇಚ್ಛಿಸಿದೆ. ರಾಷ್ಟ್ರದ ಕೆಲವು ಭಾಗಗಳಲ್ಲಿ ಈ ಗುರಿಯನ್ನು ಮುಟ್ಟಲಾಗಿದೆ. 1951ರಲ್ಲಿ ನಮ್ಮ ರಾಷ್ಟ್ರದಲ್ಲಿ ಸಾಕ್ಷರತಾ ಪ್ರಮಾಣವು ಕೇವಲ ಶೇ. 16.7 ರಷ್ಟಿತ್ತು ಎಂಬುದನ್ನು ಮರೆಯಬಾರದು. ಕೇರಳವನ್ನು ಈಗ ಪೂರ್ಣ ಸಾಕ್ಷರ ರಾಜ್ಯ ಎಂದು ಘೋಷಿಸಲಾಗಿದೆ. ಕರ್ನಾಟಕದ ಹಾಗೂ ಇತರ ರಾಜ್ಯಗಳ ಕೆಲವು ಜಿಲ್ಲೆಗಳು ಈ ಹಂತವನ್ನು ತಲುಪಿವೆ. ಈ ಸಾಕ್ಷರತಾ ಆಂದೋಲನವನ್ನು ನಾವು ಶ್ರದ್ಧೆ ಉತ್ಸಾಹಗಳಿಂದ ಮುಂದುವರಿಸಿದ್ದೇ ಆದರೆ ಇಡೀ ಭಾರತವನ್ನು ಪೂರ್ಣ ಸಾಕ್ಷರ ರಾಷ್ಟ್ರ ಎಂದು ಘೋಷಿಸುವ ದಿನ ದೂರ ಉಳಿಯುವುದಿಲ್ಲ.

**ಪತ್ರಿಕೆ ಹಾಗೂ ಸಮೂಹ ಮಾಧ್ಯಮಗಳ ಸ್ವಾತಂತ್ರ್ಯ**

ಸಮೂಹ ಮಾಧ್ಯಮ: ಆಧುನಿಕ ಜಗತ್ತಿನ ಪ್ರಜಾಪ್ರಭುತ್ವದಲ್ಲಿ ಸಮೂಹ ಮಾಧ್ಯಮವು ಪ್ರಮುಖ ಪಾತ್ರ ವಹಿಸಿದೆ. ದೂರದರ್ಶನ, ಬಾನುಲಿ, ಪತ್ರಿಕೆ ಮತ್ತು ಸಾರ್ವಜನಿಕ ವೇದಿಕೆಗಳ ಮೂಲಕವಾಗಿ ಜನಾಭಿಪ್ರಾಯವನ್ನು ರೂಪಿಸಿ ಮಾರ್ಗದರ್ಶನ ಮಾಡಬಹುದು. ಭಾರತದಲ್ಲಿ ಪತ್ರಿಕೆಗಳಿಗೆ ಉಕ್ತಿ ಸ್ವಾತಂತ್ರ್ಯವನ್ನು ನೀಡಲಾಗಿದೆ. ಸಾರ್ವಜನಿಕ ವೇದಿಕೆಗಳನ್ನು ಮುಕ್ತ ಚರ್ಚೆ ಹಾಗೂ ಅರ್ಥಪೂರ್ಣ ಸಂವಾದಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಇನ್ನೆರಡು ಸಮೂಹ ಮಾಧ್ಯಮಗಳೆಂದರೆ ಬಾನುಲಿ ಮತ್ತು

ದೂರದರ್ಶನ. ಇವು ಕೇಂದ್ರದ ಸುದ್ದಿ ಮತ್ತು ವಾರ್ತಾಪ್ರಸಾರ ಶಾಖೆಯ ಕೈಯ್ಯಲ್ಲಿವೆ. ಆದರೂ ಸರಕಾರವು ಸಾರ್ವಜನಿಕ ವ್ಯವಹಾರಗಳಲ್ಲಿ ವಿರೋಧದ ಅಭಿಪ್ರಾಯ ವ್ಯಕ್ತಪಡಿಸುವವರಿಗೂ ತಮ್ಮ ಭಾವನೆಗಳನ್ನು ತಿಳಿಸಲು ಅವಕಾಶ ಮಾಡಿಕೊಡುತ್ತಿದೆ. ಈ ಎರಡು ಸಮೂಹ ಮಾಧ್ಯಮಗಳು ಸರಕಾರದ ನಿಯಂತ್ರಣದಲ್ಲಿರಬಾರದು ಎಂಬ ಬೇಡಿಕೆಯೂ ಇದೆ. ಈ ಮಾಧ್ಯಮಗಳಿಗೆ ಸ್ವಾಯುತ್ತತೆಯನ್ನು ಕೊಟ್ಟು ಪುನರ್ ವ್ಯವಸ್ಥೆಗೊಳಿಸುನ ಪ್ರಸ್ತಾವನೆಯೂ ಇದೆ.

### ವೃತ್ತ ಪತ್ರಿಕೆ ಮತ್ತು ಸ್ವಾತಂತ್ರ್ಯ

ವೃತ್ತ ಪತ್ರಿಕೆಯು ಭಾರತದಲ್ಲಿ ಮುಕ್ತ ಸ್ವರೂಪದ್ದಾಗಿದೆ. ವೃತ್ತ ಪತ್ರಿಕೆಗಳಿಗೆ ಅಭಿಪ್ರಾಯ ಸ್ವಾತಂತ್ರ್ಯವಿದೆ. ಪ್ರಪಂಚದ ಇತರ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿರುವಂತೆ ಭಾರತದಲ್ಲಿಯೂ ಪತ್ರಿಕಾ ಲೋಕವು ತಾನೊಂದು ಪ್ರಬಲ ಮಾಧ್ಯಮ ಎಂಬುದನ್ನು ತೋರಿಸಿಕೊಟ್ಟಿದೆ. ಸಾಮಾನ್ಯ ಮನುಷ್ಯನು ಎದುರಿಸುತ್ತಿರುವ ಹಲವಾರು ಸಮಸ್ಯೆಗಳ ಬಗೆಗೆ ಪತ್ರಿಕೆಯು ಅಭಿಪ್ರಾಯಗಳನ್ನು ಮಂಥನ ಮಾಡಿ ಒಂದು ಸಾರ್ವಜನಿಕ ದೃಷ್ಟಿಕೋನವನ್ನು ಬಿಂಬಿಸುತ್ತದೆ. ಅಲ್ಲದೆ ಈ ವಿಷಯಗಳ ಬಗೆಗೆ ಕಾರ್ಯೋನ್ಮುಖವಾಗುವಂತೆ ಸರಕಾರವನ್ನೂ ಒತ್ತಾಯಿಸುತ್ತದೆ. ಯುದ್ಧ ಅಥವಾ ಶಾಂತಿಯ ಸಂದರ್ಭಗಳಲ್ಲಿ ಸರಿಯಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದರಲ್ಲಿ ಪತ್ರಿಕೆಗಳು ಶ್ಲಾಘನೀಯ ಕಾರ್ಯಗಳನ್ನು ಮಾಡಿವೆ. ಪಕ್ಷಗಳ ನೇತಾರರು ವಿಶೇಷ ಸಂದರ್ಭಗಳಲ್ಲಿ ವಿಶೇಷ ಪತ್ರಿಕಾ ಸಂದರ್ಶನಗಳನ್ನು ಏರ್ಪಡಿಸಿ ದೇಶದ ಮುಂದಿರುವ ಮಹತ್ವದ ಸಮಸ್ಯೆಗಳ ಬಗೆಗೆ ತಮ್ಮ ನಿಲುವೇನು ಎಂಬುದನ್ನು ವಿವರಿಸುತ್ತಾರೆ. ಆ ಸಂದರ್ಭಗಳಲ್ಲಿ ಪತ್ರಕರ್ತರು ಹಾಕುವ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದದ್ದು ನೇತಾರರ ನೈತಿಕ ಹೊಣೆಯಾಗಿರುತ್ತದೆ.

ಭಾರತದಲ್ಲಿ ನಾಲ್ಕು ವಾರ್ತಾಸಂಸ್ಥೆಗಳಿವೆ. ಪಿ.ಟಿ.ಐ., (ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾ) ಯು.ಎನ್.ಐ. (ಯುನೈಟೆಡ್ ನ್ಯೂಸ್ ಆಫ್ ಇಂಡಿಯಾ) ಸಮಾಚಾರ ಭಾರತಿ ಮತ್ತು ಹಿಂದೂಸ್ತಾನ್ ಸಮಾಚಾರ್.

1978ರ ಪ್ರೆಸ್ ಕೌನ್ಸಿಲ್ ಮಸೂದೆಯ ಪ್ರಕಾರ 1979ರಲ್ಲಿ ಮೊದಲನೆಯ ಪ್ರೆಸ್ ಕೌನ್ಸಿಲನ್ನು ಸ್ಥಾಪಿಸಲಾಯಿತು. ಈ ಕೌನ್ಸಿಲ್ ಪತ್ರಿಕೆಗಳ ಸ್ವಾತಂತ್ರ್ಯವನ್ನು ರಕ್ಷಿಸುತ್ತದೆ, ಪತ್ರಿಕೆಗಳ ಮತ್ತು ವಾರ್ತಾಸಂಸ್ಥೆಗಳ ಗುಣಮಟ್ಟವನ್ನು ಅಭಿವೃದ್ಧಿಪಡಿಸುತ್ತದೆ.

### ದೂರದರ್ಶನ

1959ರಲ್ಲಿ ಭಾರತದಲ್ಲಿ ದೂರದರ್ಶನವನ್ನು ಪರಿಚಯಿಸಲಾಯಿತು. ದೆಹಲಿಯಲ್ಲಿ ಮಾತ್ರ ಯೋಜನೆ ಆರಂಭವಾಯಿತು. ದೂರದರ್ಶನವು ಅಖಿಲ ಭಾರತದ ವ್ಯಾಪ್ತಿಯ ಪ್ರಸಾರ ಜಾಲವನ್ನು ಹೊಂದಿದ್ದು ರಾಷ್ಟ್ರದ ಶೇ. 80 ರಷ್ಟು ಜನರಿಗೆ ತಲುಪಬಲ್ಲುದಾಗಿದೆ. ರಾಜ್ಯದ ರಾಜಧಾನಿಗಳಲ್ಲಿ ಎರಡನೆಯ ಚಾನೆಲ್ ಅನ್ನು ಕ್ರಮೇಣ

ಆರಂಭಿಸಲಾಗಿದೆ. ರಾಷ್ಟ್ರದ ಅತಿ ದೊಡ್ಡ ದೂರದರ್ಶನ ಗೋಪುರವನ್ನು ದೆಹಲಿಯ ಬಳಿಯ ಪೀಠಂಪುರದ ಬಳಿ 1988ರ ನವೆಂಬರ್ ಏಳರಂದು ಕಾರ್ಯೋನ್ಮುಖಗೊಳಿಸಲಾಯಿತು. 1989ರಲ್ಲಿ ದೆಹಲಿಯಲ್ಲಿ ಫೆಬ್ರವರಿ ಆರರಂದು ಒಂದು ಕೇಂದ್ರ ಉತ್ಪಾದನಾ ಘಟಕ (ಸೆಂಟ್ರಲ್ ಪ್ರೊಡಕ್ಷನ್ ಸೆಂಟರ್, ಸಿ.ಪಿ.ಸಿ)ವನ್ನು ಆರಂಭಿಸಲಾಯಿತು. ದೂರದರ್ಶನದಲ್ಲಿ ವಾಣಿಜ್ಯ ಪ್ರಸಾರ ಸೇವೆಯನ್ನು ಆರಂಭಿಸಿರುವುದರಿಂದ ಸರಕಾರದ ಆದಾಯದಲ್ಲಿ ತಕ್ಕ ಮಟ್ಟಿನ ಹೆಚ್ಚಳ ಕಾಣಿಸಿಕೊಂಡಿತು. 1989–90 ರ ವರ್ಷದಲ್ಲಿ ಅದರ ಗಳಿಕೆ 210.13 ಕೋಟಿ ರೂ.ಗಳು. ಟೆಲಿವಿಷನ್ ಸೆಟ್‌ಗಳ ಸಂಖ್ಯೆ 1992ರ ವೇಳೆಗೆ ಸುಮಾರು 45.6 ದಶಲಕ್ಷಗಳಿಗೆ ಏರಬಹುದೆಂದು ಅಂದಾಜು ಮಾಡಲಾಗಿತ್ತು. 1981ರ ಆಗಸ್ಟ್ 15 ರಂದು ದೂರದರ್ಶನದಲ್ಲಿ ಆರಂಭವಾದ ಉನ್ನತ ಶಿಕ್ಷಣ ಕಾರ್ಯಕ್ರಮಗಳು ಈಗಲೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ. ಇವು ದೂರದರ್ಶನದ ಕಾರ್ಯಕ್ರಮಗಳ ಮೌಲ್ಯವನ್ನು ಹೆಚ್ಚಿಸಿವೆ.

ದೂರದರ್ಶನ ಒಂದು ಪ್ರಬಲ ಪ್ರಸಾರ ಮಾಧ್ಯಮ. ಇದು ತನ್ನ ಮನರಂಜನೆಯ ಕಾರ್ಯಕ್ರಮಗಳ ಜೊತೆಗೆ ಜ್ವಲಂತ ಸಮಸ್ಯೆಗಳ ವಿಷಯದಲ್ಲಿ ಜನಾಭಿಪ್ರಾಯವನ್ನು ಕ್ರೋಡೀಕರಿಸುವ ಕೆಲಸವನ್ನು ಮಾಡುತ್ತಿದೆ.

**ಬಾನುಲಿ**

ಭಾರತದಲ್ಲಿ ಬಾನುಲಿ ಪ್ರಸಾರವು 1927ರಲ್ಲಿ ಆರಂಭಗೊಂಡಿತು. ಆಗ ಮುಂಬಯಿ ಕಲ್ಕತ್ತಾಗಳಲ್ಲಿ ಎರಡು ಖಾಸಗಿ ಒಡೆತನದ ಟ್ರಾನ್ಸ್‌ಮಿಟರ್‌ಗಳಿದ್ದುವು. ಅವುಗಳನ್ನು ಸರಕಾರ ಕೊಂಡುಕೊಂಡು 1930ರಲ್ಲಿ ಭಾರತ ಪ್ರಸಾರ ಸೇವೆಯನ್ನು ಆರಂಭಿಸಿತು. (ಇಂಡಿಯನ್ ಬ್ರಾಡ್ ಕಾಸ್ಟಿಂಗ್ ಸರ್ವಿಸಸ್, I.B.S) 1936ರಲ್ಲಿ ಆಲ್ ಇಂಡಿಯಾ ರೇಡಿಯೋ ಎಂದು ಕರೆಯಲಾಯಿತು. 1935 ರಲ್ಲಿ ಮೈಸೂರು ನಗರದಲ್ಲಿ ಖಾಸಗಿ ಬಾನುಲಿ ಕೇಂದ್ರ ಆರಂಭವಾಯಿತು. 1941ರಲ್ಲಿ ಅದು ಆಲ್ ಇಂಡಿಯಾ ರೇಡಿಯೋ (AIR) ವ್ಯಾಪ್ತಿಗೆ ಬಂತು. 1957ರಲ್ಲಿ ಇದಕ್ಕೆ ಆಕಾಶವಾಣಿ ಎಂಬ ಹೆಸರು ಬಂದಿತು. (ಈ ಹೆಸರನ್ನು ಮೈಸೂರಿನ ಖಾಸಗಿ ಕೇಂದ್ರ ಮೊದಲು ಬಳಸಿತ್ತು.) ಈಗ ಆಕಾಶವಾಣಿಗೆ ಇನ್ನೂರಕ್ಕೂ ಹೆಚ್ಚು ಪ್ರಸಾರ ಕೇಂದ್ರಗಳಿವೆ. ಆಕಾಶವಾಣಿಯ ವಾರ್ತಾಸೇವಾ ವಿಭಾಗವು (ನ್ಯೂಸ್ ಸರ್ವಿಸ್ ಡಿವಿಷನ್) 19ಭಾಷೆಗಳಲ್ಲಿ ಸುದ್ದಿ ಪ್ರಸಾರ ಮಾಡುತ್ತದೆ. 'ವಿವಿಧ ಭಾರತಿ' ಶ್ರೋತೃಗಳಿಗೆ ಮನರಂಜನೆಯನ್ನು ಒದಗಿಸುತ್ತದೆ. ವಾಣಿಜ್ಯ ಪ್ರಸಾರದಿಂದ ಬರುವ ಒಟ್ಟು ಆದಾಯವು ವರ್ಷಕ್ಕೆ ಮೂವತ್ತು ಕೋಟಿ ರೂ.ಗಳಿಗೂ ಹೆಚ್ಚಿನದಾಗಿದೆ.

**ಸಾರ್ವಜನಿಕ ವೇದಿಕೆ**

ಸಂವಿಧಾನವು ವಾಕ್ ಸ್ವಾತಂತ್ರ್ಯವನ್ನು ಕೊಟ್ಟಿರುವುದರಿಂದ ಸಾರ್ವಜನಿಕ

ವೇದಿಕೆಗಳು ಜನಾಭಿಪ್ರಾಯವನ್ನು ರೂಪಿಸಲು ಸಾಧ್ಯವಾಗಿದೆ. ರಾಜಕೀಯ ಪಕ್ಷ, ಖಾಸಗಿ ವೇದಿಕೆ ಮೊದಲಾದವುಗಳು ಸಾರ್ವಜನಿಕ ಉಪನ್ಯಾಸಗಳಿಗೆ ಅವಕಾಶವಿತ್ತು, ಅಂತರ ರಾಷ್ಟ್ರೀಯ, ರಾಷ್ಟ್ರೀಯ ಹಾಗೂ ದೇಶೀಯ ಸಮಸ್ಯೆಗಳನ್ನು ಚರ್ಚಿಸುತ್ತವೆ. ಚುನಾವಣೆಯ ಸಂದರ್ಭದಲ್ಲಿ ನಾಯಕರು ತಮ್ಮ ವಾಗ್ಮೀಯತೆಯನ್ನು ಪ್ರದರ್ಶಿಸಿ ಜನರು ರಾಜಕೀಯ ಪ್ರಜ್ಞೆ ಬೆಳೆಸಿಕೊಳ್ಳುವಂತೆ ಮಾಡುತ್ತಾರೆ. ಜನತೆ ಇವರ ವಾಗ್ಮೀಯತೆಯ ಪ್ರವಾಹದಲ್ಲಿ ಕೊಚ್ಚಿ ಹೋಗಬಾರದು. ಅವರ ಉಪನ್ಯಾಸವನ್ನು ಕೇಳಿ ತಮ್ಮದೇ ಆದ ತೀರ್ಮಾನಗಳಿಗೆ ಬರಬೇಕಾದದ್ದು ಪೌರರ ಕರ್ತವ್ಯ.

### ವೈಚಾರಿಕ ತೀರ್ಮಾನ

ಪೌರನು ವೈಚಾರಿಕವಾಗಿ ತೀರ್ಮಾನಿಸಬೇಕಾಗುತ್ತದೆ. ಪ್ರಚಾರ ಮತ್ತು ಸತ್ಯ ಇವುಗಳ ಅಂತರವನ್ನು ಪೌರನು ವಿಮರ್ಶಿಸಬೇಕು. ರಾಜಕೀಯ ಪಕ್ಷಗಳು ಕೆಲವು ಬಾರಿ ಒದಗಿದ ಸಂದರ್ಭಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚಿಕೊಳ್ಳುತ್ತವೆ. ಅಂಥ ಸಂದರ್ಭಗಳಲ್ಲಿ ಪೌರನಿಗೆ ಗೊಂದಲವುಂಟಾಗುತ್ತದೆ. ಆದುದರಿಂದ ಉತ್ತಮ ಪೌರನಾಗಬೇಕಾದರೆ ವೈಚಾರಿಕ ತೀರ್ಮಾನ ಅಗತ್ಯ.

### ಮತದಾನದ ಹಕ್ಕನ್ನು ನ್ಯಾಯಯುತವಾಗಿ ಚಲಾಯಿಸುವುದು

ಇದು ಪೌರನಲ್ಲಿರಬೇಕಾದ ಇನ್ನೊಂದು ಮುಖ್ಯ ಗುಣ. ಮತವನ್ನು ಚಲಾಯಿಸುವುದು ಮತ್ತು ಸರಿಯಾದ ಉಮೇದುವಾರನನ್ನು ತಮ್ಮ ಕ್ಷೇತ್ರದ ಪ್ರತಿನಿಧಿಯಾಗಿ ಆರಿಸುವುದು ಪ್ರತಿನಾಗರಿಕನ ಪವಿತ್ರ ಕರ್ತವ್ಯ. ಮತದಾನದ ಬಗೆಗೆ ತಟಸ್ಥ ಧೋರಣೆ ತಳೆಯುವುದು, ನಮ್ಮ ಹಿತಕ್ಕೇ ಧಕ್ಕೆ ತರುತ್ತದೆ ಎಂಬುದನ್ನು ಮರೆಯಬಾರದು. ಏಕೆಂದರೆ ಭಾರತದ ಸಂವಿಧಾನದಲ್ಲಿ ಗೆದ್ದ ಅಭ್ಯರ್ಥಿಯನ್ನು ಹಿಂದಕ್ಕೆ ಕರೆಯಲು ಅವಕಾಶವಿಲ್ಲ. ಯಾವುದಾದರೂ ಸಂವಿಧಾನದ ತೊಡಕು ಬಂದ ಹೊರತು ಉಳಿದಂತೆ ಸಾಮಾನ್ಯವಾಗಿ ಒಮ್ಮೆ ಆಯ್ಕೆಯಾದವರು ಪೂರ್ಣ ಅವಧಿಯವರೆಗೆ ಸದಸ್ಯರಾಗಿಯೇ ಉಳಿಯುತ್ತಾರೆ.

### ಸಾರ್ವಜನಿಕ ಜೀವನದಲ್ಲಿ ಶಿಸ್ತು

ಇದು ಕೂಡ ಜನರಲ್ಲಿ ಹಾಗೂ ಅವರ ನಾಯಕರುಗಳಲ್ಲಿ ಇರಬೇಕಾದ ಗುಣ. ಆಡಳಿತದಲ್ಲಿರುವವರು ತಪ್ಪು ಆಳ್ವಿಕೆ ನಡೆಸಿದರೆ ಅಥವಾ ಅಕೃತ್ಯಗಳನ್ನು ಮಾಡಿದರೆ ಅದನ್ನು ವಿರೋಧಿಸಲು ಶಾಸಕಾಂಗ, ಪತ್ರಿಕೆ ಮತ್ತು ಸಾರ್ವಜನಿಕ ವೇದಿಕೆಗಳಂಥ ಸ್ಪಷ್ಟ ಮಾರ್ಗಗಳಿವೆ.

ಈ ವೇದಿಕೆಗಳು ಅವರ ಅಕೃತ್ಯಗಳ ಬಗೆಗೆ ಅಸಮಾಧಾನವನ್ನು ಸೂಚಿಸಿ ವಿಮರ್ಶಿಸಲು ಅಧಿಕೃತ ಮಾಧ್ಯಮಗಳಾಗಿವೆ. ಒಂದು ಕ್ರಿಯಾಶೀಲ ಪ್ರಜಾಸತ್ತೆಯಲ್ಲಿ ಜನವರ್ತನೆಯಲ್ಲಿ ಹಿಂಸಾಮಾರ್ಗವನ್ನು ತ್ಯಜಿಸುವುದು ಅದರ ದೊಡ್ಡ ಗುಣಗಳಲ್ಲಿ ಒಂದಾಗಿದೆ. ಜನರು ತಮ್ಮ ಸಂಕಟಗಳಿಗೆ ಪರಿಹಾರವನ್ನು ಕೋರಲು ಕೆಲವು ಸಲ

ಹಿಂಸಾಚಾರಕ್ಕಿಳಿದು, ಸಾರ್ವಜನಿಕ ಆಸ್ತಿಪಾಸ್ತಿಗೆ ಧಕ್ಕೆ ತರಲು ಪ್ರಯತ್ನಿಸುವ ಸಂಗತಿ ನಮಗೆಲ್ಲ ತಿಳಿದೇ ಇದೆ. ಸಾರ್ವಜನಿಕ ಜೀವನದಲ್ಲಿ ಈ ಬಗೆಯ ವರ್ತನೆ ಪ್ರಜಾಸತ್ತೆಯ ಅಪಕ್ವ ಚಿಹ್ನೆಯಾಗುತ್ತದೆ. ಆದರೆ ಇಂಥವು ಅಲ್ಲಲ್ಲಿ ನಡೆದಿದ್ದರೂ ಭಾರತದ ಜನತೆ, ಮುಖ್ಯವಾಗಿ ಚುನಾವಣೆಯ ಕಾಲದಲ್ಲಿ, ತುಂಬ ಪಕ್ವವಾದ ಬುದ್ಧಿಯನ್ನು ತೋರಿದ್ದಾರೆಂದು ಹೇಳಬೇಕು. ನಮ್ಮ ದೇಶದಲ್ಲಿ ಅನೇಕ ಸಂದರ್ಭಗಳಲ್ಲಿ ಅತೃಪ್ತ ಜನ ಹಿಂಸಾಮಾರ್ಗಕ್ಕೆ ಇಳಿದಿದ್ದಾರೆ.

**ಸಾಮಾಜಿಕ ಮತ್ತು ಆರ್ಥಿಕ ಸಮಾನತೆ**

ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯೇ ನಮ್ಮ ಪ್ರಜಾಸತ್ತೆಯ ಅಂತಿಮ ಗುರಿ. ಇವೆರಡನ್ನೂ ಎಲ್ಲರಿಗೂ ಒದಗಿಸದೆ ಹೋದರೆ ಪ್ರಜಾಪ್ರಭುತ್ವ ಎಂಬ ಮಾತಿಗೆ ಅರ್ಥವೇ ಇರುವುದಿಲ್ಲ. ಸಾಮಾಜಿಕ ಮತ್ತು ಆರ್ಥಿಕ ನ್ಯಾಯವನ್ನು ಒದಗಿಸುವುದಕ್ಕಾಗಿ ನಮ್ಮ ಸಂವಿಧಾನದಲ್ಲಿ ಹಲವಾರು ಕ್ರಮಗಳನ್ನು ಸೂಚಿಸಲಾಗಿದೆ. ಕಳೆದ ಹತ್ತಾರು ವರ್ಷಗಳಲ್ಲಿ ಅನೇಕ ಉತ್ತಮ ಯೋಜನೆಗಳನ್ನು ಅನುಷ್ಠಾನಕ್ಕೆ ತರಲಾಗಿದೆ. ಕರ್ನಾಟಕ ರಾಜ್ಯದ ಭೂಸುಧಾರಣಾ ಮಸೂದೆಯು ಬಡ ರೈತರಿಗೆ ತುಂಬ ಉಪಯೋಗಕರವಾಯಿತು. ಪಟ್ಟಣ ಪ್ರದೇಶದ ಭೂ ಮಿತಿಯ ಮಸೂದೆಯು ಭೂರಹಿತ ಜನತೆಗೆ ಉಪಕಾರಿಯಾಯಿತು. ಸಾಲ ವಿಮೋಚನೆ ಮತ್ತು ಜೀತಪದ್ಧತಿಯ ರದ್ದತಿಗಳು ಕೆಳವರ್ಗದ ಜನರಿಗೆ ಸಾಕಷ್ಟು ಪರಿಹಾರವನ್ನು ತಂದುಕೊಟ್ಟವು. ಈ ಆಜ್ಞೆಗಳಿಂದಾಗಿ ಸರಕಾರವು ಸಾವಿರಾರು ಜನರನ್ನು ಬಡತನದ ರೇಖೆಯಿಂದ ಮೇಲೆತ್ತಲು ಪ್ರಯತ್ನಿಸಿತು. 1955ರ ಅಸ್ಪೃಶ್ಯತಾ ನಿವಾರಣೆಯ ಕಾನೂನು ಸಮಾಜದ ದಲಿತರಿಗೆ ಮೇಲುವರ್ಗದವರೊಂದಿಗೆ ಸಮಾನ ಸ್ಥಾನಮಾನವನ್ನು ಗಳಿಸಿ ಕೊಡುವುದರಲ್ಲಿ ನೆರವಾಯಿತು. ವರದಕ್ಷಿಣೆ ಕೊಡುವುದನ್ನು ಅಥವಾ ತೆಗೆದುಕೊಳ್ಳುವುದನ್ನು ಈಗ ಕಾನೂನು ಬಾಹಿರವೆಂದು ಪರಿಗಣಿಸಲಾಗಿದೆ. ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡಲಾಗಿದೆ. ಭಾರತದಲ್ಲಿ ಈಗ ಸ್ತ್ರೀಯರ ಸ್ಥಾನಮಾನ ಸುಧಾರಿಸಿದೆ. ರಾಷ್ಟ್ರದ ಅಜ್ಞಾತ ಮೂಲೆಗಳಲ್ಲೂ ಸಾಕ್ಷರತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಬ್ಯಾಂಕುಗಳು ಬಡವರ ಹಳೆಯ ಸಾಲವನ್ನು ಮನ್ನಾ ಮಾಡಿವೆ ಮತ್ತು ಅಗತ್ಯಕ್ಕೆ ತಕ್ಕಂತೆ ಬಡವರಿಗೆ ವಿವಿಧ ಬಡ್ಡಿದರಗಳಲ್ಲಿ ಸಾಲವನ್ನು ಕೊಡುತ್ತಿವೆ. ರಾಸಾಯನಿಕ ಗೊಬ್ಬರಗಳನ್ನು ರೈತಾಪಿ ಜನರ ಅನುಕೂಲಕ್ಕಾಗಿ ಸರಕಾರದ ಸಹಾಯ ಧನ ಬೆಲೆಗಳಲ್ಲಿ ಕೊಡಲಾಗುತ್ತಿದೆ. ಉದ್ಯೋಗ ಮೀಸಲಾತಿ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶಾವಕಾಶ ಮೀಸಲಾತಿ ಕ್ರಮಗಳಿಂದಾಗಿ ಕೆಳವರ್ಗದ ನಿರುದ್ಯೋಗಿಗಳಿಗೂ ಮತ್ತು ವಿದ್ಯಾ ಅವಕಾಶಗಳಿಂದ ವಂಚಿತರಾಗಿದ್ದವರಿಗೂ ಅನುಕೂಲವಾಗಿದೆ. ಗ್ರಾಮೀಣ ಸ್ಥಾನಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ಮೀಸಲಾಗಿಟ್ಟಿರುವುದರಿಂದ ಕುಗ್ರಾಮಗಳಲ್ಲಿರುವವರಿಗೂ ಸಹಾಯವಾಗಿದೆ.

ಇಂಥ ಇನ್ನೂ ಹಲವಾರು ಕ್ರಮಗಳು ನಮ್ಮ ಜನರ ಸಾಮಾಜಿಕ ಮತ್ತು ಆರ್ಥಿಕ

ಸ್ಥಿತಿಗತಿಗಳನ್ನು ಸುಧಾರಿಸುವುದರಲ್ಲಿ ನೆರವಾಗಿವೆ. ಈ ದಿಸೆಯಲ್ಲಿ ಆಗಬೇಕಾದ ಕೆಲಸ ಇನ್ನೂ ಬಹಳ ಇದೆ. 8ನೇ ಪಂಚವಾರ್ಷಿಕ ಯೋಜನೆಯನ್ನು ಯೋಜನಾ ಆಯೋಗವು ಜಾರಿಗೆ ತಂದಿದೆ. ಈ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ನಮ್ಮ ಜನರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತದೆ ಮತ್ತು ಪ್ರಜಾಸತ್ತೆ ಬಲಗೊಳ್ಳುತ್ತದೆ ಎಂದು ಆಶಿಸೋಣ.

## ಅಭ್ಯಾಸಗಳು

1. **ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**
   - ಅ. 1990–91ರ ಜನಗಣತಿ ವರದಿಯ ಪ್ರಕಾರ ಭಾರತದಲ್ಲಿ ಸಾಕ್ಷರತೆಯ ಶೇಕಡಾವಾರು ಪ್ರಮಾಣ ಎಷ್ಟಿತ್ತು ?
   - ಆ. ರಾಜಕೀಯ ಪಕ್ಷಗಳು ಸಾರ್ವಜನಿಕ ವೇದಿಕೆಗಳನ್ನು ಸಮೂಹ ಮಾಧ್ಯಮಗಳಾಗಿ ಯಾವ ಸಂದರ್ಭದಲ್ಲಿ ಬಳಸಿಕೊಳ್ಳುತ್ತವೆ ?
   - ಇ. ಪ್ರಜಾಪ್ರಭುತ್ವದ ಪದ್ಧತಿಯಲ್ಲಿ ಅಸಂತೃಪ್ತಿಯನ್ನು ವ್ಯಕ್ತಪಡಿಸಲು ಬಳಸಿಕೊಳ್ಳುವ ಅಧಿಕೃತ ಮಾಧ್ಯಮಗಳು ಯಾವುವು ?
   - ಈ. ಒಮ್ಮೆ ಆಯ್ಕೆಗೊಂಡ ಸದಸ್ಯರನ್ನು 'ಹಿಂದಕ್ಕೆ ಕರೆಸುವುದು' ಎಂದರೇನು ?
   - ಉ. ಈಚಿನ ದಿನಗಳಲ್ಲಿ ಬಾನುಲಿಯ ಜನಪ್ರಿಯತೆ ಕುಗ್ಗಿರುವುದಕ್ಕೆ ಕಾರಣವೇನು ?
2. **ಇವಕ್ಕೆ ಕಾರಣಗಳೇನು ?**
   - ಅ. ದೂರದರ್ಶನದ ಎರಡನೆಯ ಚಾನಲ್‌ಗಳನ್ನು ರಾಜ್ಯಗಳ ರಾಜಧಾನಿಗಳಲ್ಲಿ ಆರಂಭಿಸಲಾಗಿದೆ.
   - ಆ. ಸಾರ್ವಜನಿಕ ಜೀವನದಲ್ಲಿ ಹಿಂಸೆಯನ್ನು ತ್ಯಜಿಸುವುದು ಅಪೇಕ್ಷಣೀಯ.
   - ಇ. ಮಹಿಳೆಯರ ಕಲ್ಯಾಣದ ವಿಧೇಯಕವನ್ನು ಭಾರತದಲ್ಲಿ ಜಾರಿಗೆ ತರಬೇಕಾಗಿದೆ.
3. **ಬಿಟ್ಟಿರುವ ಸ್ಥಳಗಳನ್ನು ತುಂಬಿರಿ.**
   - ಅ. ಜಗತ್ತಿನಲ್ಲಿಯೇ ಭಾರತವು ಅತಿ ದೊಡ್ಡ.......ವಾಗಿದೆ.
   - ಆ. ಎಲ್ಲಿ ನಿರಕ್ಷರಿಗಳಿದ್ದರೋ ಅಲ್ಲಿ ........... ಹರಡುವುದರ ಮೇಲೆ ಪ್ರಜಾಪ್ರಭುತ್ವದ ಯಶಸ್ಸು ನಿಂತಿದೆ.
   - ಇ. ಟೆಲಿವಿಷನ್‌ಗೆ ಭಾರತೀಯ ಹೆಸರು ಯಾವುದೆಂದರೆ........
   - ಈ. ಎ.ಐ.ಆರ್. ಇದರ ವಿಸ್ತರಣೆ........ ......... ........
   - ಉ. ಭಾರತದ ವಾರ್ತೆ ಮತ್ತು ಪ್ರಸಾರ ಸಚಿವಾಲಯದ ಅಧೀನದಲ್ಲಿರುವ ಎರಡು ಮುಖ್ಯ ಸಮೂಹ ಮಾಧ್ಯಮಗಳೆಂದರೆ......... ಮತ್ತು.........
   - ಊ. ಎರಡು ಖಾಸಗಿ ಒಡೆತನದ ಟ್ರಾನ್ಸಮಿಟರ್‌ಗಳಿಂದ ಮುಂಬಯಿ ಮತ್ತು......... ಗಳಲ್ಲಿ ಭಾರತದ ಪ್ರಸಾರ ಸೇವೆಯು......... ನೇ ವರ್ಷದಲ್ಲಿ ಆರಂಭವಾಯಿತು.

**4. ಇವಕ್ಕೆ ಟಿಪ್ಪಣಿ ಬರೆಯಿರಿ.**

ಅ. ಭಾರತದಲ್ಲಿ ಸಾಕ್ಷರತಾ ಕಾರ್ಯಕ್ರಮ.
ಆ. ಸಮೂಹ ಮಾಧ್ಯಮಗಳ ಮಹತ್ವ.
ಇ. ಬಾನುಲಿ (ಆಕಾಶವಾಣಿ).
ಈ. ಸಮೂಹ ಮಾಧ್ಯಮಗಳಾಗಿ ಸಾರ್ವಜನಿಕ ವೇದಿಕೆಗಳು.

**5. ಈ ಪ್ರಶ್ನೆಗಳಿಗೆ ಒಂದೊಂದು ಪುಟದಲ್ಲಿ ಉತ್ತರ ಬರೆಯಿರಿ.**

ಅ. ಪ್ರಜಾಪ್ರಭುತ್ವದಲ್ಲಿ ನಾಗರಿಕನ ಕರ್ತವ್ಯಗಳು.
ಆ. ಸಾಮಾಜಿಕ ಆರ್ಥಿಕ ಸಮಾನತೆಯ ಗುರಿಯನ್ನು ಸಾಧಿಸುವ ಉದ್ದೇಶದಿಂದ ಭಾರತದಲ್ಲಿ ಅಂಗೀಕೃತವಾದ ಮಸೂದೆಗಳು.

**6. ಇವುಗಳನ್ನು ಅರ್ಥಪೂರ್ಣವಾಗಿ ಹೊಂದಿಸಿ ಬರೆಯಿರಿ. ಕಂಸಗಳಲ್ಲಿ ಸಂಖ್ಯೆಯನ್ನು ಬರೆಯಿರಿ.**

| | ಅ | ಆ |
|---|---|---|
| 1. | ಪ್ರೆಸ್ ಕೌನ್ಸಿಲ್ ವಿಧೇಯಕವನ್ನು ಮಂಡಿಸಿದ ವರ್ಷ ಯಾವುದೆಂದರೆ | 1927 – ( ) |
| 2. | ಭಾರತದಲ್ಲಿ ಅತಿ ಎತ್ತರದ ದೂರದರ್ಶನ ಗೋಪುರವನ್ನು ಕಟ್ಟಿದ ವರ್ಷವೆಂದರೆ | 1955 – ( ) |
| 3. | ಪಂಚಾಯತಿ ರಾಜ್ ಮಸೂದೆಯನ್ನು ಕರ್ನಾಟಕದಲ್ಲಿ ಅಂಗೀಕರಿಸಿದ ವರ್ಷವೆಂದರೆ | 1978 – ( ) |
| 4. | ಕೇಂದ್ರ ಸರಕಾರವು ಖಾಸಗಿ ಒಡೆತನದ ಪ್ರಸಾರ ವ್ಯವಸ್ಥೆಯನ್ನು ತನ್ನ ಕೈಗೆ ತೆಗೆದುಕೊಂಡ ವರ್ಷ ಯಾವುದೆಂದರೆ | 1985 – ( ) |
| 5. | ಅಸ್ಪೃಶ್ಯತಾ ನಿವಾರಣೆಯ. ಮಸೂದೆ ಅಂಗೀಕೃತವಾದ ವರ್ಷವೆಂದರೆ | 1930 – ( ) |

**7. ಚಟುವಟಿಕೆ**

ಅ. ಸೂಚಿತವಾಗಿರುವ 'ಪ್ರಸಾರ ಭಾರತಿ' ಮಸೂದೆಯ ಬಗೆಗೆ ವಿವರವಾದ ಮಾಹಿತಿಗಳನ್ನು ಸಂಗ್ರಹಿಸಿ.
ಆ. ನಮ್ಮ ಜನರ ಸಾಮಾಜಿಕ – ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸುವ ದೃಷ್ಟಿಯಿಂದ ಭಾರತ ಸರಕಾರವು ಕೈಕೊಂಡ ಕ್ರಮಗಳನ್ನು ಕಾಲಾನುಕ್ರಮವಾಗಿ ವಿವರಿಸಿ.

# ೩. ರಾಷ್ಟ್ರೀಯ ಸಮಗ್ರತೆ

## ಭಾರತದ ಜನತೆ ಮತ್ತು ವೈವಿಧ್ಯಗಳು

ಬಹುಕಾಲದ ವಿದೇಶೀ ಆಳ್ವಿಕೆಯ ನಂತರ ಭಾರತೀಯರು ಮೊದಲ ಬಾರಿಗೆ ಒಂದೇ ಧ್ವಜದ ಅಡಿಯಲ್ಲಿ ಒಂದಾದರು. ಭಾರತವು 32.8 ಲಕ್ಷ ಚದರ ಕಿಲೋ ಮೀಟರುಗಳ ವ್ಯಾಪ್ತಿಯ ಪ್ರದೇಶವನ್ನುಳ್ಳ ಒಂದು ದೊಡ್ಡ ರಾಷ್ಟ್ರ. ಭಾರತವು ಗಾತ್ರದಲ್ಲಿ ಜಗತ್ತಿನ ಏಳನೆಯದು. ಜನಸಂಖ್ಯೆಯಲ್ಲಿ ಎರಡನೆಯದು. ಭಾರತದಲ್ಲಿ ತುಂಬ ಭೌತಿಕ ವೈವಿಧ್ಯಗಳಿವೆ. ಹವಾಗುಣ ಹಾಗೂ ಭೂಗುಣದಲ್ಲಿ ವೈವಿಧ್ಯವಿರುವುದರ ಫಲವಾಗಿ ಇಲ್ಲಿ ಆಹಾರ ಪದ್ಧತಿ ಮತ್ತು ಧಾರ್ಮಿಕ ಆಚಾರಗಳಲ್ಲೂ ವೈವಿಧ್ಯವಿದೆ.

ಭಾರತದ ದೀರ್ಘ ಇತಿಹಾಸದಲ್ಲಿ ಜಗತ್ತಿನ ಬೇರೆ ಬೇರೆ ಭಾಗದ ಜನ ಈ ದೇಶವನ್ನು ತಮ್ಮ ನೆಲೆಯಾಗಿ ಸ್ವೀಕರಿಸಿದ್ದಾರೆ. ಭಾರತದ ಆದಿಕಾಲದ ಇತಿಹಾಸವನ್ನು ಸಿಂಧೂ ಕಣಿವೆಯ ನಾಗರಿಕತೆಯಲ್ಲಿ ಕಾಣಬಹುದು. ವೇದಗಳು, ಉಪನಿಷತ್ತುಗಳು, ಪುರಾಣಗಳು, ಇವೆಲ್ಲ ನಮ್ಮ ಸಂಸ್ಕೃತಿಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟಿವೆ. ಮುಂದೆ ಶಕರು, ಹೂಣರು, ಗ್ರೀಕರು, ಪರ್ಷಿಯನ್ನರು ನಮ್ಮ ದೇಶಕ್ಕೆ ಬಂದರು. ಅವರೆಲ್ಲ ವಿಭಿನ್ನ ಸಂಸ್ಕೃತಿಯ ಹಿನ್ನೆಲೆ ಇದ್ದವರು. ಅವರಿಗೆ ತಮ್ಮದೇ ಆದ ಸ್ವಭಾವ, ಪದ್ಧತಿ, ಪರಂಪರೆ, ನಡವಳಿಕೆಗಳಿದ್ದು, ಈ ಮಿಶ್ರಣದ ಫಲವಾಗಿ ನಮ್ಮಲ್ಲಿ ಒಂದು ಸಂಯುಕ್ತ ಸಂಸ್ಕೃತಿ, ಹೊಸ ವಾಸ್ತುಶಿಲ್ಪ, ಚಿತ್ರಕಲೆ ಮುಂತಾದವುಗಳು ಮೂಡಿ ಬಂದವು. ಜೈನಧರ್ಮ ಬೌದ್ಧಧರ್ಮಗಳು ನಮ್ಮಲ್ಲೇ ಮೂಡಿ ಪ್ರವರ್ಧಮಾನಕ್ಕೆ ಬಂದವು. ಇಸ್ಲಾಂ ಧರ್ಮದ ಪ್ರವೇಶವು ಭಾರತದ ಸಂಸ್ಕೃತಿಗೆ ಹೊಸ ಆಯಾಮವನ್ನು ಒದಗಿಸಿತು. ಅನಂತರ ಯೂರೋಪಿಯನ್ನರು ತಮ್ಮೊಂದಿಗೆ ಪಶ್ಚಿಮ ಸಂಸ್ಕೃತಿಯ ಅಂಶಗಳನ್ನು ತಂದರು. ಬ್ರಿಟಿಷರು ಭಾರತವನ್ನು ಒಂದು ಆಡಳಿತದ ಕಕ್ಷೆಗೆ ತಂದರು. ಸ್ವಭಾವ, ವೇಷ ಮತ್ತು ಚಿಂತನೆಗಳಲ್ಲಿ ನಮ್ಮ ಜೀವನ ಪದ್ಧತಿಯು ಅವರ ಪ್ರಭಾವಕ್ಕೆ ಒಳಗಾಯಿತು.

ಹೀಗೆ ಚಾರಿತ್ರಿಕ ಮತ್ತು ಭೌಗೋಳಿಕ ಅಂಶಗಳು ನಮ್ಮ ಸಂಸ್ಕೃತಿಯನ್ನು ವೈವಿಧ್ಯಮಯವಾಗುವಂತೆ ಮಾಡಿವೆ. ಭಾರತದ ಪ್ರತಿಯೊಂದು ಪ್ರಾಂತವೂ ತನ್ನದೇ ಆದ ಭಾಷೆ, ಸಾಹಿತ್ಯ, ವೇಷ, ಆಹಾರ, ಕಲೆ ಮತ್ತು ಸಾಮಾಜಿಕ ಪರಂಪರೆಯನ್ನು ಹೊಂದಿದೆ. ಹೀಗೆ ಭಾರತ ಸಂಸ್ಕೃತಿಯ ಬಹುಮುಖತೆ ಮತ್ತು ವೈವಿಧ್ಯಗಳು ಸಾವಿರಾರು ವರ್ಷಗಳಿಂದ ಬೆಳೆದು ಬಂದಿವೆ. ಒಂದು ವಿಶಿಷ್ಟ ಸಮ್ಮಿಶ್ರಣವಾಗಿ ರೂಪುಗೊಂಡಿವೆ. ಇಷ್ಟೊಂದು ವೈವಿಧ್ಯಗಳಿದ್ದರೂ ಭಾರತವು ಒಂದು.. "ವೈವಿಧ್ಯದಲ್ಲಿ ಏಕತೆ" ಎಂದು ನೆಹರೂ ಅವರು ಸರಿಯಾಗಿ ಗುರುತಿಸಿದ್ದಾರೆ. ಭಾರತದ ವೈವಿಧ್ಯದ ಅಂತರಾಳದಲ್ಲಿ ಒಂದು ಏಕತೆಯ ಒಳಸೆಲೆ ಇದೆ.

ಪ್ರತಿಯೊಬ್ಬ ಭಾರತೀಯನಿಗೂ ತನ್ನ ಸಂಸ್ಕೃತಿ, ಇತಿಹಾಸ, ಭಾಷೆ, ಕಲೆ, ಧರ್ಮ,

ಸಂಗೀತ ಹಾಗೂ ತತ್ವಗಳ ಬಗೆಗೆ ಹೆಮ್ಮೆಯಿದೆ. ಭಾರತೀಯನಲ್ಲಿ ತಾನು ಕರ್ನಾಟಕದಲ್ಲಿರಲಿ, ಕಾಶ್ಮೀರದಲ್ಲಿರಲಿ ಒಂದೇ ರಾಷ್ಟ್ರದವನೆಂಬ ಆಪ್ತತೆಯಿದೆ. ಇಂಥ ಭಾವನೆಯ ಸಮಾವೇಶದಿಂದ ರಾಷ್ಟ್ರೀಯ ಭಾವೈಕ್ಯ ಮೂಡುತ್ತದೆ. ಭಾವೈಕ್ಯ ಎಂದರೆ ರಾಷ್ಟ್ರದ ಜನರಲ್ಲಿ ತಾವೆಲ್ಲ ಒಂದೇ ಎಂಬ ಭಾವನೆ ಹೊಂದಿರುವಿಕೆ. ಅದು ಎಲ್ಲ ಜನರನ್ನೂ ಒಗ್ಗೂಡಿಸುತ್ತದೆ. ಈ ಸಮಗ್ರ ಆಪ್ತಭಾವವು ರಾಷ್ಟ್ರೀಯ ಭಾವೈಕ್ಯವನ್ನು ಪೋಷಿಸುತ್ತದೆ. ಬ್ರಿಟಿಷ್ ಆಳ್ವಿಕೆಯ ವಿರುದ್ಧ ನಡೆದ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಇಂಥ ಭಾವೈಕ್ಯ ಮೂಡಿ ಬಂದಿತ್ತು. ಹಾಗೆಯೇ ಹೊರಗಿನವರಿಂದ ಆಕ್ರಮಣ ನಡೆದಾಗಲೆಲ್ಲ ನಮ್ಮವರು ಸಹಜವಾಗಿ ತಾವೆಲ್ಲ ಒಂದೇ ಎಂದು ತೋರಿಸಿಕೊಟ್ಟಿದ್ದಾರೆ. ಭಾರತೀಯ ಸಂಸ್ಕೃತಿಯ ಮೂಲಭೂತ ಗುಣಗಳು:

1. ಅನ್ಯ ಧರ್ಮ ಮತ್ತು ಅನ್ಯ ಪದ್ಧತಿಗಳನ್ನು ಗೌರವಿಸುವಿಕೆ.
2. ಔದಾರ್ಯ, ಸಹಿಷ್ಣುತೆ ಮತ್ತು ಪರಸ್ಪರ ಗೌರವ ಭಾವ.

ಈ ಗುಣಗಳು ಭಾರತೀಯತೆಯ ಭಾವನೆಗಳನ್ನು ತರುತ್ತವೆ. ಅವು ಏಕತೆ ಮತ್ತು ದೃಢತೆಗಳನ್ನು ಪೋಷಿಸುತ್ತವೆ.

## ರಾಷ್ಟ್ರೀಯ ಏಕತೆಗೆ ಭಂಗ ತರುವ ಅಂಶಗಳು

ಸ್ವಾತಂತ್ರ್ಯ ಬಂದ ನಂತರ ನಾವು ರಾಷ್ಟ್ರೀಯ ಏಕತೆ ಮತ್ತು ಸಮಗ್ರತೆ ಮೊದಲಾದ ದಿವ್ಯ ಸ್ಫೂರ್ತಿಗಳಿಂದ ವಂಚಿತರಾಗಿರುವಂತೆ ಕಾಣುತ್ತದೆ. ಸ್ವಾತಂತ್ರ್ಯವು ನಮ್ಮನ್ನು ನಿರ್ಲಕ್ಷ್ಯದಿಂದ ಇರುವಂತೆ ಮಾಡಿದೆ. ಈಗ ಭಾರತದ ಏಕತೆಯನ್ನು ಮುರಿಯುವ ಪ್ರಯತ್ನವನ್ನು ಹಲವಾರು ದುಷ್ಟ ಶಕ್ತಿಗಳು ಮಾಡುತ್ತಿವೆ. ಅವು ಯಾವುವೆಂದರೆ:

ಪ್ರಾಂತೀಯತೆ, ಜಾತೀಯತೆ, ಭಾಷಾಪ್ರೇಮ, ಮೂಲಭೂತವಾದಿತ್ವ, ಆರ್ಥಿಕ ಅಸಮಾನತೆ, ಭಯೋತ್ಪಾದಕತೆ ಮತ್ತು ರಾಜ್ಯಾಂಗದಿಂದ ಬೇರ್ಪಡೆಯಾಗುವ ಬುದ್ಧಿ. ಇವೆಲ್ಲ ತಮ್ಮ ದುಷ್ಟ ಹೆಡೆಯನ್ನು ಎತ್ತುತ್ತಿವೆ. ನಮ್ಮಲ್ಲಿ ರಾಜಕೀಯ ದೇಶೈಕ್ಯವನ್ನು ಸಾಧಿಸಲಾಗಿದೆ ನಿಜ. ಆದರೆ ಅದಕ್ಕೂ ಮುಖ್ಯವಾದ ಭಾವೈಕ್ಯವನ್ನು ಸಾಧಿಸಬೇಕಾಗಿದೆ. ಡಾ. ಎಸ್. ರಾಧಾಕೃಷ್ಣನ್ ಅವರು "ರಾಷ್ಟ್ರೀಯ ಭಾವೈಕ್ಯವನ್ನು ಇಟ್ಟಿಗೆ ಮತ್ತು ಗಾರೆಗಳಿಂದ ಕಟ್ಟಲು ಸಾಧ್ಯವಿಲ್ಲ. ಅದು ಮೌನವಾಗಿ ಜನರ ಅಂತರಂಗದಲ್ಲಿ ಬೆಳೆದು ನಿಲ್ಲಬೇಕು" ಎಂದು ಸೂಕ್ತವಾಗಿ ಹೇಳಿದ್ದಾರೆ. ಅಪನಂಬಿಕೆ, ಪೂರ್ವಾಗ್ರಹ, ದ್ವೇಷ, ಪಕ್ಷಪಾತ ಇವುಗಳಿಗೆ ಬದಲಾಗಿ ಪರಸ್ಪರ ಗೌರವ, ಅರ್ಥವಂತಿಕೆ ಮತ್ತು ಪ್ರೇಮ ಕಾಣಿಸಿಕೊಳ್ಳಬೇಕು. ರಾಷ್ಟ್ರದ ಏಕತೆ ಎಂದರೆ ಅಚ್ಚು ಹೊಯ್ದಂತೆ ಎಲ್ಲವನ್ನೂ ಒಂದು ಮಾಡಿ ಬಿಡುವುದಲ್ಲ. ಏಕತೆ ಎನ್ನುವುದು ರೂಪ ಸಮಾನತೆಯಲ್ಲ. ವ್ಯಕ್ತಿ ತನ್ನ ಧರ್ಮವನ್ನು, ಭಾಷಾ ಪ್ರೇಮವನ್ನು, ತನ್ನ ಪದ್ಧತಿಯನ್ನು ಅನುಸರಿಸಬಾರದು ಎಂಬುದು ಅರ್ಥವಲ್ಲ.

## ರಾಷ್ಟ್ರೀಯ ಏಕತೆಯನ್ನು ಪೋಷಿಸುವುದು

ಸಂಸ್ಕೃತಿ, ಇತಿಹಾಸ ಮತ್ತು ಮೌಲ್ಯ ಪ್ರಜ್ಞೆಗಳಿಂದಾಗಿ ಮೂಡಿ ಬರುವ ನಮ್ಮ ಒಕ್ಕೂಟದ ಶಕ್ತಿಯು ವಿಚ್ಛಿದ್ರಕಾರಕ ಶಕ್ತಿಗಳಿಗಿಂತ ಹೆಚ್ಚು ಬಲಶಾಲಿಯಾಗಿದೆ. ಸ್ವಾತಂತ್ರ್ಯ ಬಂದ ದಿನದಿಂದ ಹಿಡಿದು ಇಂದಿನವರೆಗೂ ರಾಜಕೀಯವಾಗಿ ಒಂದಾಗಿ ಮುಂದುವರಿಯುತ್ತಿದ್ದೇವೆ. ಇದರಿಂದ ನಮ್ಮ ಸ್ಥಾನಿಕ ಸಂಸ್ಥೆಗಳು ಬೆಳೆಯಲು ಅವಕಾಶವಾಗಿದೆ. ಹೀಗಾಗಿ ಜಗತ್ತಿನಲ್ಲಿ ಒಂದು ದೊಡ್ಡ ಕ್ರಿಯಾಶೀಲ ಪ್ರಜಾಸತ್ತೆಯಾಗಿ ಭಾರತವು ಬೆಳೆದಿದೆ.

ರಾಷ್ಟ್ರೀಯ ಏಕತೆಯನ್ನು ಪೋಷಿಸುವ ಶಕ್ತಿಗಳು ಹಲವಾರಿವೆ. ಅವು ಯಾವುವೆಂದರೆ:

1.ಸಂವಿಧಾನ 2.ನಮ್ಮ ಸಂಪದ್ಯುಕ್ತ ಸಾಂಸ್ಕೃತಿಕ ಪರಂಪರೆಯ ಪ್ರಜ್ಞೆ 3.ರಾಷ್ಟ್ರೀಯ ಚಿಹ್ನೆಗಳಿಗೆ ಗೌರವ 4. ರಾಷ್ಟ್ರೀಯ ಹಬ್ಬಗಳ ಆಚರಣೆ 5. ಪ್ರಾಂತ್ಯಗಳ ಪರಸ್ಪರಾವಲಂಬನವನ್ನು ಪೋಷಿಸುವುದು ಮತ್ತು 6. ಆರ್ಥಿಕ ಪ್ರಗತಿ.

### ಸಂವಿಧಾನ

ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ರೂಪಿಸಲಾದ ಜಾತ್ಯಾತೀತತೆ, ಸಮಾಜವಾದ, ಪ್ರಜಾಪ್ರಭುತ್ವ, ಉದಾರವಾದ, ಗಣತಂತ್ರವಾದ ಮೊದಲಾದ ಮೌಲ್ಯಗಳನ್ನು 'ಸಂವಿಧಾನ'ವು ಎತ್ತಿ ಹಿಡಿಯುತ್ತದೆ. ಭಾರತದಲ್ಲಿ ಎಲ್ಲರಿಗೂ ಅನ್ವಯವಾಗುವಂಥ ಒಂದು ಸಂವಿಧಾನವಿದೆ. ಜಾತಿ, ಮತ, ವರ್ಣ, ಧರ್ಮ ಅಥವಾ ಪ್ರದೇಶಗಳನ್ನು ಮೀರಿ ಅದು ಎಲ್ಲರಿಗೂ ಅನ್ವಯವಾಗುತ್ತದೆ. ಭಾರತದ ಪ್ರತಿಯೊಬ್ಬ ಪ್ರಜೆಯೂ ಭಾರತದ ಪ್ರಜೆ. ಈ ಪೌರತ್ವ ಆತನಿಗೆ ಗೌರವ ಸ್ಥಾನ ಮತ್ತು ಸಮಾನತೆಯನ್ನು ತಂದುಕೊಡುತ್ತದೆ. ಕೇಂದ್ರದ ಮತ್ತು ರಾಜ್ಯಗಳ ಶಾಸಕರು ಮತ್ತು ಸಚಿವರುಗಳು ಸಾರ್ವತ್ರಿಕ ಮತದಾನದ ನಿಯಮದಂತೆ ಜನರಿಂದ ಆರಿಸಿ ಬಂದವರೇ ಆಗಿರುತ್ತಾರೆ. ಇದರಿಂದ ಪ್ರತಿಯೊಬ್ಬ ಪೌರನಿಗೆ ದೇಶದ ವಿದ್ಯಮಾನಗಳಲ್ಲಿ ತನ್ನ ಮಾತಿಗೂ ಬೆಲೆಯಿದೆ ಎಂದು ಹೇಳಲು ಅವಕಾಶವಿದೆ. ಚಿಂತನ ಸ್ವಾತಂತ್ರ್ಯ, ಧರ್ಮ ಹಾಗೂ ಪೂಜಾ ಸ್ವಾತಂತ್ರ್ಯಗಳನ್ನು ಸಂವಿಧಾನವು ಎಲ್ಲರಿಗೂ ಸಮಾನವಾಗಿ ಕೊಟ್ಟಿದೆ. ಆದುದರಿಂದ ನಮ್ಮ ಸಂವಿಧಾನವು ಎಲ್ಲರನ್ನೂ ಒಗ್ಗೂಡಿಸುವ ಒಂದು ಶಕ್ತಿಯಾಗಿದ್ದು, ಜನತೆಯಲ್ಲಿ ಧ್ಯೇಯ ಪ್ರಜ್ಞೆಯನ್ನು ಮೂಡಿಸುತ್ತದೆ.

### ಭಾರತದ ಶ್ರೀಮಂತ ಸಾಂಸ್ಕೃತಿಕ ಪರಂಪರೆಯ ಬಗೆಗೆ ಎಚ್ಚರ ಬೆಳೆಸುವುದು

ವಿವಿಧ ಕಾಲಗಳಲ್ಲಿದ್ದ ಸಾಹಿತ್ಯ ಪುಂಗವರ ಕೃತಿ, ಕಾಣಿಕೆಗಳಿಂದ ಪುಷ್ಟಿಗೊಂಡ ಸಾಹಿತ್ಯ ಸಂಪತ್ತನ್ನು ಭಾರತೀಯ ಭಾಷೆಗಳು ತಂದುಕೊಟ್ಟಿವೆ. ನಮ್ಮಲ್ಲಿ ಒಂದು ಶ್ರೀಮಂತವಾದ ಕಲೆ, ಸಂಗೀತ, ನೃತ್ಯ, ಶಿಲ್ಪ, ಚಿತ್ರ, ಜಾನಪದ ಮುಂತಾದ ಪರಂಪರೆಯಿದೆ. ಉದಾರಿಗಳಾದ ರಾಜರುಗಳನ್ನು ಮತ್ತು ನಮ್ಮ ಸಂಸ್ಕೃತಿಯನ್ನು ಅವರು ಪೋಷಿಸಿದ ಬಗೆಯನ್ನು ಹೆಮ್ಮೆಯಿಂದ ಸ್ಮರಿಸಬಹುದು.

ನಾವು ಅಂಥ ಒಂದು ಭವ್ಯ ಸಂಸ್ಕೃತಿ ಪರಂಪರೆಯ ವಾರಸುದಾರರಾಗಿರುವುದು ನಮ್ಮ ಪುಣ್ಯ. ಇದನ್ನು ಉಳಿಸಿ ಬೆಳಸಿ ಮುಂದಿನ ತಲೆಮಾರಿನ ಜನತೆಗೆ ವಹಿಸಿಕೊಡಬೇಕಾದುದು ನಮ್ಮ ಕರ್ತವ್ಯ.

## ನಮ್ಮ ರಾಷ್ಟ್ರೀಯ ಚಿಹ್ನೆಗಳನ್ನು ಗೌರವಿಸುವುದು

ಸ್ವತಂತ್ರ ಭಾರತದಲ್ಲಿ ಏಕತೆ ಮತ್ತು ಗೌರವಗಳನ್ನು ಸೂಚಿಸುವುದಕ್ಕಾಗಿ ಕೆಲವು ರಾಷ್ಟ್ರೀಯ ಚಿಹ್ನೆಗಳನ್ನು ರೂಪಿಸಲಾಗಿದೆ. ದೇಶದೊಂದಿಗೆ ನಮ್ಮನ್ನು ಗುರುತಿಸಿಕೊಳ್ಳುವಂತೆ ಮಾಡುವುದು, ಧ್ಯೇಯಗಳನ್ನು ಪ್ರೀತಿಸುವುದು, ದೇಶಪ್ರೇಮ ಆತ್ಮಗೌರವಗಳನ್ನು ಬೆಳೆಸುವುದು ಮೊದಲಾದ ಮನೋವೈಜ್ಞಾನಿಕ ಅಂಶಗಳ ಆಧಾರದ ಮೇಲೆ ಈ ಚಿಹ್ನೆಗಳನ್ನು ರೂಪಿಸಲಾಗಿದೆ. ಅಂತಹ ರಾಷ್ಟ್ರೀಯ ಚಿಹ್ನೆಗಳು ಯಾವುವೆಂದರೆ:

1. ರಾಷ್ಟ್ರ ಧ್ವಜ
2. ರಾಷ್ಟ್ರ ಗೀತೆ
3. ರಾಷ್ಟ್ರ ಚಿಹ್ನೆ

**ರಾಷ್ಟ್ರ ಧ್ವಜವು** ನಮ್ಮ ದೇಶದ ಧ್ಯೇಯಗಳನ್ನೂ, ಮೌಲ್ಯಗಳನ್ನೂ ಸಂಕೇತಿಸುತ್ತದೆ. ಅದು ತ್ರಿವರ್ಣ ಧ್ವಜ. ಮೇಲ್ಭಾಗದಲ್ಲಿ ಕೇಸರಿ ವರ್ಣ, ಮಧ್ಯದಲ್ಲಿ ಶ್ವೇತವರ್ಣ ಹಾಗೂ ಕೆಳಭಾಗದಲ್ಲಿ ಹಸಿರು ವರ್ಣದ ಅಡ್ಡಹಾಸುಗಳಿವೆ. ಕೇಸರಿ ಬಣ್ಣವು ತ್ಯಾಗ, ಧೈರ್ಯ ಮತ್ತು ತಪಸ್ಸಿನ ಸಂಕೇತ. ಬಿಳಿಯ ಬಣ್ಣವು ಸತ್ಯ ಮತ್ತು ಚಿಂತನ ಶುದ್ಧಿಗಳ ಪ್ರತೀಕ. ಹಸಿರು ಬಣ್ಣವು ಜೀವಂತಿಕೆ, ಸಮೃದ್ಧಿ ಹಾಗೂ ಪ್ರಗತಿಗಳ ಸಂಕೇತ. ಧ್ವಜದ ಮಧ್ಯಭಾಗದಲ್ಲಿ 24 ಅರಗಳ ಒಂದು ಚಕ್ರದ ಚಿಹ್ನೆಯು ನೀಲವರ್ಣದ್ದಾಗಿದ್ದು ಅದು ಚಲನಶೀಲತೆ ಮತ್ತು ಏಳಿಗೆಗಳನ್ನು ಧ್ವನಿಸುತ್ತದೆ. ಈ ಧ್ವಜವು ಪ್ರತಿ ನಾಗರಿಕನಲ್ಲೂ ದೇಶಪ್ರೇಮ ಮತ್ತು ಗೌರವ ಭಾವಗಳನ್ನು ಮೂಡಿಸುತ್ತದೆ. ಇದನ್ನು ನಮ್ಮ ರಾಷ್ಟ್ರದ ಕೀರ್ತಿ ಎಂದು ತಿಳಿದು ಅದನ್ನು ಕಾಪಾಡಲು ನಾವು ಸಿದ್ಧರಾಗಿರಲೇಬೇಕು. ಅದಕ್ಕಾಗಿ 'ಮಾಡು ಇಲ್ಲವೇ ಮಡಿ' ಎನ್ನಬಲ್ಲ ಸಿದ್ಧತೆ ನಮ್ಮದಾಗಿರಬೇಕು.

**ರಾಷ್ಟ್ರಗೀತೆ:** 'ಜನಗಣಮನ' ಎಂಬ ರಾಷ್ಟ್ರಗೀತೆಯ ರಚಯಿತರು ಶ್ರೀ ರವೀಂದ್ರನಾಥ ಠಾಕೂರರು. 1950ರ ಜನವರಿ 24 ರಂದು ಇದನ್ನು ರಾಷ್ಟ್ರಗೀತೆಯಾಗಿ ಆರಿಸಲಾಯಿತು. ಇದಕ್ಕೆ ಮೊದಲು 1911ನೇ ಇಸವಿ ಡಿಸೆಂಬರ್ 27ರಂದು ಕಲ್ಕತ್ತಾದಲ್ಲಿ ನಡೆದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಇದನ್ನು ಹಾಡಲಾಗಿತ್ತು. ನಮ್ಮ ರಾಷ್ಟ್ರಗೀತೆಯು ನಮ್ಮ ರಾಷ್ಟ್ರರಕ್ಷಕನನ್ನು ಕುರಿತು ಹೇಳುತ್ತದೆ ಮತ್ತು ಭಾರತದ ಜನತೆ ಎಲ್ಲೆಲ್ಲಿಯವರೆಂಬುದನ್ನು ಹೇಳುತ್ತದೆ. ದೇಶಪ್ರೇಮವನ್ನು ಉಕ್ಕಿಸುವ ಹಾಡು ಇದು. ಇದು ಗೀತಮಯವಾಗಿರುವುದೇ ಅಲ್ಲದೆ ಅರ್ಥಪೂರ್ಣವೂ ಆಗಿದೆ.

**ರಾಷ್ಟ್ರಚಿಹ್ನೆ:** ಅಶೋಕ ಚಕ್ರವರ್ತಿಯು ನಿರ್ಮಿಸಿದ ಸಾರನಾಥ್ ಸ್ತೂಪದಿಂದ ನಮ್ಮ ರಾಷ್ಟ್ರಚಿಹ್ನೆಯನ್ನು ತೆಗೆದುಕೊಳ್ಳಲಾಗಿದೆ. ಇದನ್ನು 1950 ರ ಜನವರಿ 26 ರಂದು ಸ್ವೀಕರಿಸಲಾಯಿತು. ಈ ಚಿಹ್ನೆಯಲ್ಲಿ ಪಿಂಗಾಲ ಮೇಲೆ ಕುಳಿತ ನಾಲ್ಕು ಸಿಂಹಗಳ ಚಿತ್ರವಿದೆ. ವೈವಿಧ್ಯದಲ್ಲಿ ಏಕತೆಯ ಭಾವವನ್ನು ಇದು ಬಿಂಬಿಸುತ್ತದೆ. ಇವುಗಳ ಕೆಳಗೆ ಪ್ರಸಿದ್ಧವಾದ

ಅಶೋಕಚಕ್ರ (ಧರ್ಮಚಕ್ರ)ವನ್ನು ಕಾಣಬಹುದಾಗಿದೆ. ಅದರ ತಳಧಲ್ಲಿ "ಸತ್ಯಮೇವ ಜಯತೇ" ಎಂಬ ಸೂಕ್ತಿಯಿದೆ. ಅಂದರೆ ಯಾವಾಗಲೂ ಸತ್ಯಕ್ಕೆ ಜಯ ಎಂದರ್ಥ.

**ರಾಷ್ಟ್ರೀಯ ಹಬ್ಬಗಳ ಆಚರಣೆ**

ಹಬ್ಬ ಎಂದರೆ ಬದುಕಿನ ಸಂಭ್ರಮದ ಆಚರಣೆ. ಇದಕ್ಕೆ ಸಾಮಾಜಿಕ ಮಹತ್ವವೂ ಇದೆ. ರಾಷ್ಟ್ರೀಯ ಮಹತ್ವದ ಹಬ್ಬಗಳನ್ನಾಚರಿಸುವುದರಿಂದ ನಾವೆಲ್ಲರೂ ಒಂದು ಎಂಬ ಸಂಭ್ರಮ್ಮದಿಂದ ಪಾಲ್ಗೊಳ್ಳುವ ಅವಕಾಶ ದೊರೆಯುತ್ತದೆ. ಭಾರತೀಯರಿಗೆ ಮುಖ್ಯವಾದ ರಾಷ್ಟ್ರೀಯ ಹಬ್ಬಗಳೆಂದರೆ ಸ್ವಾತಂತ್ರ್ಯ ದಿನಾಚರಣೆ ಮತ್ತು ಗಣರಾಜ್ಯ ದಿನಾಚರಣೆ. ನಮ್ಮ ರಾಷ್ಟ್ರನಾಯಕರ ಜನ್ಮ ಜಯಂತಿಗಳನ್ನಾಚರಿಸುವುದರಿಂದ ನಮ್ಮ ಸಂಸ್ಕೃತಿಯನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತದೆ. ಇಂಥ ಸಾಮಾಜಿಕ ಉತ್ಸವಗಳು ಎಲ್ಲ ಜಾತಿ, ಮತ, ಧರ್ಮ, ಭಾಷೆ ಮತ್ತು ಭಿನ್ನ ವಯೋಮಾನಗಳ ಜನತೆಯನ್ನು ಹತ್ತಿರ ತರುತ್ತವೆ.

**ಪ್ರಾಂತ್ಯಗಳ ಪರಸ್ಪರ ಅವಲಂಬನೆಯನ್ನು ಪೋಷಿಸುವುದು**

ರಾಷ್ಟ್ರದ ಯಾವ ಪ್ರಾಂತ್ಯವೂ ತನ್ನಷ್ಟಕ್ಕೆ ಸ್ವತಂತ್ರವಾದ ಒಂದು ಘಟಕವಲ್ಲ. ತನ್ನ ಅನೇಕ ಅವಶ್ಯಕತೆಗಳಿಗೆ ಅದು ಬೇರೆ ರಾಜ್ಯಗಳ ಸಹಾಯವನ್ನು ಅಪೇಕ್ಷಿಸುತ್ತದೆ. ಸಮಗ್ರ ದೇಶದ ಪ್ರಗತಿಗೆ ರಾಷ್ಟ್ರದ ಬೇರೆ ಬೇರೆ ಪ್ರಾಂತ್ಯಗಳ ಪರಸ್ಪರ ಅವಲಂಬನೆ ಬಹಳ ಮುಖ್ಯ. ಪರಸ್ಪರ ಅವಲಂಬನೆಯ ಕ್ಷೇತ್ರಗಳೆಂದರೆ ವ್ಯವಹಾರ, ವಾಣಿಜ್ಯ, ಕೈಗಾರಿಕೆ, ಕೃಷಿ, ಸಾರಿಗೆ, ನದಿಯ ನೀರು ಇತ್ಯಾದಿ. ಪ್ರವಾಸ ಮತ್ತು ತೀರ್ಥ ಪರ್ಯಟನಗಳನ್ನೂ ಈ ಪಟ್ಟಿಗೆ ಸೇರಿಸಬಹುದು. ಅಂಥ ಪರಸ್ಪರ ಅವಲಂಬನೆ ಮತ್ತು ಸಹಕಾರಗಳು ಸಂಪತ್ತನ್ನು ಉತ್ಪಾದಿಸುವುದರೊಂದಿಗೆ ಅದರ ವಿಂಗಡನೆಗೂ ಸಹಕಾರಿಯಾಗುತ್ತವೆ.

**ಆರ್ಥಿಕ ಪ್ರಗತಿ**

ಬಡತನ ಯಾವುದೇ ರಾಷ್ಟ್ರಕ್ಕೆ ಶತ್ರು. ಸಂಪತ್ತು ತುಂಬ ಅಸಮವಾಗಿ ಹಂಚಿ ಹೋದಾಗ ಸಾಮಾಜಿಕ ಸೌಹಾರ್ದಕ್ಕೆ ಧಕ್ಕೆಯಾಗುತ್ತದೆ. ವ್ಯವಸ್ಥಿತವಾದ ಮತ್ತು ರಚನಾತ್ಮಕವಾದ ಆರ್ಥಿಕ ಪ್ರಗತಿಯು ದೇಶದ ಏಳಿಗೆಗೆ ಅಗತ್ಯ. ಇದರ ಫಲವಾಗಿ ಸರಕಾರಿ ಹಾಗೂ ಖಾಸಗಿ ಘಟಕಗಳು ನಮ್ಮ ಅರ್ಥ ವ್ಯವಸ್ಥೆಯಲ್ಲಿ ಸಹಬಾಳ್ವೆ ನಡೆಸುತ್ತಿವೆ. ಮಿಶ್ರ ಆರ್ಥಿಕ ವ್ಯವಸ್ಥೆಯ ಸೂತ್ರದಲ್ಲಿ ಮುಕ್ತವಾದ ಮತ್ತು ನಿಯಂತ್ರಿಕವಾದ ಅರ್ಥವ್ಯವಸ್ಥೆಗಳೆರಡರ ಸೌಲಭ್ಯಗಳೂ ಇವೆ. ಸಾರ್ವಜನಿಕ ಘಟಕಗಳು ಬಡವರ್ಗಗಳ ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸುವುದರ ಜೊತೆಗೆ ಸಂಪತ್ತನ್ನು ಉತ್ಪಾದಿಸುತ್ತವೆ. ಬಡವರಿಗೆ ಆರ್ಥಿಕ ಸೌಲಭ್ಯ ಒದಗಿಸುವ ಸಲುವಾಗಿ ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಗಿದೆ. ನಾವು ಈಗಾಗಲೇ ಏಳು ಪಂಚವಾರ್ಷಿಕ ಯೋಜನೆಗಳನ್ನು ಪೂರೈಸಿ ವ್ಯವಸ್ಥಿತ ಆರ್ಥಿಕ ಬೆಳವಣಿಗೆಗಾಗಿ ಎಂಟನೆಯದನ್ನು ಆರಂಭಿಸಿದ್ದೇವೆ. ಸುಖೀರಾಜ್ಯದ ಕಲ್ಪನೆಯು ಇಂಥ ನಿಲುವುಗಳಿಂದ ರಾಷ್ಟ್ರಿಯ ಏಕತೆಯನ್ನು ಸಾಧಿಸುವುದು ಸಾಧ್ಯವಾಗುತ್ತದೆ.

ಪ್ರತಿ ರಾಷ್ಟ್ರಕ್ಕೂ ಏಕತೆ ಅಗತ್ಯ. ಬೇರೆ ದೇಶಗಳಿಗಿಂತ ನಮ್ಮ ದೇಶಕ್ಕೆ ಅದು ಅತ್ಯಗತ್ಯ. ಏಕೆಂದರೆ ಭೌಗೋಳಿಕ ವಿಸ್ತಾರ, ಪ್ರಾಂತ್ಯ ಸಂಸ್ಕೃತಿಗಳ ವೈವಿಧ್ಯ, ನಾಗರಿಕತೆಯ ಸುದೀರ್ಘ ಇತಿಹಾಸ ಮತ್ತು ಮತಧರ್ಮಗಳ ಬಾಹುಳ್ಯ ನಮ್ಮಲ್ಲೇ ಬಹಳ ಹೆಚ್ಚು. ಈ ಘನ ಕಾರ್ಯದಲ್ಲಿ ನಮ್ಮನ್ನು ತೊಡಗಿಸಿಕೊಳ್ಳೋಣ. ಹಾಗೆ ಮಾಡಿ ಜಗತ್ತಿಗೇ ಮಾದರಿಯಾಗುವಂತೆ ಭಾರತವನ್ನು ಕಟ್ಟೋಣ.

## ಅಭ್ಯಾಸ

**I. ಇವುಗಳಿಗೆ ಉತ್ತರಿಸಿ.**

1. ಭಾರತದ ವಿವಿಧ ಭಾಗಗಳಲ್ಲಿ ವ್ಯತ್ಯಾಸಗಳು ಕಂಡುಬರಲು ಕಾರಣವೇನು ?
2. ಭಾರತೀಯ ಸಂಸ್ಕೃತಿಯ ವಿವಿಧ ಅಂಶಗಳಾವುವು ?
3. ಭಾರತಕ್ಕೆ ಬಂದು ನೆಲೆಸಿದ ವಿದೇಶೀಯರು ಯಾರು ? ಅವರು ನಮ್ಮ ಸಂಸ್ಕೃತಿಗೆ ನೀಡಿರುವ ಕಾಣಿಕೆ ಏನು ?
4. ನಮ್ಮ ರಾಷ್ಟ್ರೀಯ ಚಿಹ್ನೆಗಳ ಮಹತ್ವವನ್ನು ವಿವರಿಸಿ.
5. ರಾಷ್ಟ್ರೀಯ ಏಕತೆ ಎಂದರೇನು ?
6. ರಾಷ್ಟ್ರೀಯ ಏಕತೆಗೆ ನೆರವಾಗುವ ಅಂಶಗಳು ಯಾವುವು ?
7. ಭಾರತದಲ್ಲಿ ರಾಷ್ಟ್ರೀಯ ಏಕತೆಗೆ ಭಂಗ ತರುವ ಅಂಶಗಳು ಯಾವುವು ?
8. ನಮ್ಮ ಸಂವಿಧಾನದಲ್ಲಿ ಉಕ್ತವಾಗಿರುವ ರಾಷ್ಟ್ರೀಯ ಏಕತೆಗೆ ಪೋಷಕವಾಗುವ ಅಂಶಗಳನ್ನು ವಿವರಿಸಿ.
9. ರಾಷ್ಟ್ರೀಯ ಚಿಹ್ನೆಗಳ ಮೂಲಕ ರಾಷ್ಟ್ರೀಯ ಏಕತೆಯನ್ನು ಬೆಳೆಸುವುದು ಹೇಗೆ ?
10. ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವುದರಿಂದ ರಾಷ್ಟ್ರೀಯ ಏಕತೆ ಹೇಗೆ ಮೂಡುತ್ತದೆ ?
11. ಅಂತರ ಪ್ರಾಂತ್ಯ ಪರಸ್ಪರಾವಲಂಬನೆಯಿಂದ ರಾಷ್ಟ್ರೀಯ ಏಕತೆಯನ್ನು ಸಾಧಿಸಲು ಹೇಗೆ ಸಾಧ್ಯವಾಗುತ್ತದೆ ?
12. ಆರ್ಥಿಕ ಪ್ರಗತಿ ಹಾಗೂ ರಾಷ್ಟ್ರೀಯ ಏಕತೆಗಳು ಹೇಗೆ ಪರಸ್ಪರ ಅವಲಂಬಿಗಳಾಗಿವೆ ?

**II. ಬಿಟ್ಟಿರುವ ಜಾಗಗಳನ್ನು ಭರ್ತಿ ಮಾಡಿ.**

1. ಭಾರತವು ಗಾತ್ರದಲ್ಲಿ ಜಗತ್ತಿನ......... ಯದು ಜನಸಂಖ್ಯೆಯಲ್ಲಿ...... ಯದು.
2. ಭಾರತೀಯ ಸಂಸ್ಕೃತಿಯ ಮುಖ್ಯ ಸ್ವರೂಪ.......... ದಲ್ಲಿ ಏಕತೆ.
3. ರಾಷ್ಟ್ರೀಯ ಏಕತೆಯನ್ನು ಬರಿಯ....... ಮತ್ತು ಗಾರೆಗಳಿಂದ ಕಟ್ಟಲು ಸಾಧ್ಯವಿಲ್ಲ.
4. ನಮ್ಮ ರಾಷ್ಟ್ರದ ಮೂರು ರಾಷ್ಟ್ರೀಯ ಚಿಹ್ನೆಗಳೆಂದರೆ........ .......... ...........
5. ನಮ್ಮ ರಾಷ್ಟ್ರಗೀತೆಯನ್ನು ರಚಿಸಿದವರು...........

ಒಟ್ಟಿನಲ್ಲಿ ನಾವು ಭಾರತದಲ್ಲಿ ಮತದಾನದ ಕ್ರಮವನ್ನು ಯಶಸ್ವಿಯಾಗಿ ನಿರ್ವಹಿಸಿದ್ದೇವೆ ಎನ್ನಬಹುದು. ಭಾರತದಲ್ಲಿ ಅತಿ ದೊಡ್ಡ ಮತದಾರರ ಗುಂಪು ಇರುವುದು ಮತ್ತು ಭಾರತವು ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವವಾಗಿರುವುದು ಮೆಚ್ಚಬೇಕಾದ ಸಂಗತಿಯಾಗಿದೆ.

**ಸಾರ್ವತ್ರಿಕ ಚುನಾವಣೆಗಳು ಮತ್ತು ಚುನಾವಣಾ ಕ್ರಮ**

1950–51ರ ರೆಪ್ರೆಸೆಂಟೇಷನ್ ಪೀಪಲ್ಸ್ ಆಕ್ಟ್ ಪ್ರಕಾರ ಚುನಾವಣೆಯ ನಿಯಮಗಳು, ಸ್ಥಾನಗಳ ಹಂಚಿಕೆ, ಪಾರ್ಲಿಮೆಂಟ್ ಮತ್ತು ಆಸೆಂಬ್ಲಿ ಕ್ಷೇತ್ರ ನಿರ್ಧಾರ, ಮತದಾರರ ಅರ್ಹತೆಗಳು, ಮತದಾರರ ಪಟ್ಟಿಗಳ ತಯಾರಿಕೆ, ಚುನಾವಣೆಗಳನ್ನು ಸಕ್ರಮವಾಗಿ ಜರುಗಿಸಲು ಅಧಿಕಾರಿಗಳ ನೇಮಕ, ಚುನಾವಣೆಯ ಹಂತಗಳು ಇತ್ಯಾದಿ, ಇತ್ಯಾದಿಗಳೆಲ್ಲ ಸೂಚಿತವಾಗಿವೆ.

ಸಾರ್ವತ್ರಿಕ ಚುನಾವಣೆಗಳು ಐದು ವರ್ಷಕ್ಕೊಮ್ಮೆ ನಡೆಯುತ್ತವೆ. ಅಗತ್ಯಬಿದ್ದರೆ ಪ್ರತಿನಿಧಿಗಳನ್ನಾರಿಸಲು ಮಧ್ಯಕಾಲೀನ ಚುನಾವಣೆಗಳನ್ನು ನಡೆಸುವುದೂ ಉಂಟು. ಬೇರೆ ಬೇರೆ ಪಕ್ಷಗಳ ರಾಜಕೀಯ ಧುರೀಣರು ಚುನಾವಣೆಗೆ ನಿಲ್ಲುತ್ತಾರೆ. ಈ ಪಕ್ಷಗಳು ತಮ್ಮ ಕಾರ್ಯಕ್ರಮಗಳ ಆಧಾರದ ಮೇಲೆ ಜನಬೆಂಬಲವನ್ನು ಪಡೆಯಲು ಸ್ಪರ್ಧಿಸುತ್ತವೆ. ಯಾವ ಪಕ್ಷಕ್ಕೂ ಸೇರದವರನ್ನು 'ಸ್ವತಂತ್ರ ಅಭ್ಯರ್ಥಿ' ಎಂದು ಕರೆಯುತ್ತಾರೆ. ಎಲ್ಲಿ ಚುನಾವಣೆಗಳು ಮುಕ್ತವಾಗಿ ಚೆನ್ನಾಗಿ ನಡೆಯುತ್ತವೋ ಅಲ್ಲಿ ಪ್ರಜಾಪ್ರಭುತ್ವವು ಯಶಸ್ಸು ಸಾಧಿಸುವುದು ಖಂಡಿತ.

**ಚುನಾವಣಾ ಆಯೋಗ**

ಗೊತ್ತುಪಡಿಸಿದ ಕಾಲಕ್ಕೆ ನ್ಯಾಯಪೂರ್ಣವಾದ ಮುಕ್ತ ಚುನಾವಣೆಯನ್ನು ನಡೆಸುವ ಜವಾಬ್ದಾರಿ ಭಾರತದ ಚುನಾವಣಾ ಆಯೋಗದ ಮೇಲೆ ಬೀಳುತ್ತದೆ. ಈ ಸ್ವಾಯುತ್ತ ಸಂಸ್ಥೆಯ ಮುಖ್ಯಸ್ಥರನ್ನು 'ಪ್ರಧಾನ ಚುನಾವಣಾಧಿಕಾರಿ' ಎಂದು ಕರೆಯುತ್ತಾರೆ. ಅನಕ್ಷರಸ್ಥ ಮತದಾರರಿಗೆ ಸಹಾಯವಾಗಲೆಂದು ಆಯೋಗವು ಅಭ್ಯರ್ಥಿಗಳಿಗೆ ವಿವಿಧ ಚುನಾವಣಾ ಸಂಕೇತಗಳನ್ನು ನೀಡುತ್ತದೆ. ಮತದಾನವು ಗುಪ್ತ ಮತದಾನ ಪದ್ಧತಿಯಲ್ಲಿ ನಡೆಯುತ್ತದೆ. ಚುನಾವಣೆಯ ಎಲ್ಲ ಹಂತಗಳನ್ನು ವ್ಯವಸ್ಥೆಗೊಳಿಸುವ ಹಾಗೂ ಮೇಲ್ವಿಚಾರಣೆ ಮಾಡುವ ಕೆಲಸವನ್ನು ಈ ಆಯೋಗವು ನಿರ್ವಹಿಸುತ್ತದೆ.

ಚುನಾವಣೆಯ ವಿವಿಧ ಹಂತಗಳಲ್ಲಿ ಏಳುವ ವಿವಾದಗಳಲ್ಲಿ ಆಯೋಗವು ತೀರ್ಪುಕೊಡುತ್ತದೆ. ಚುನಾವಣಾ ಕಾನೂನನ್ನಾಗಲೀ ನಡವಳಿಕೆಯನ್ನಾಗಲೀ ಮೀರುವುದು ಶಿಕ್ಷಾರ್ಹ ಅಪರಾಧವಾಗುತ್ತದೆ. ಚುನಾವಣಾ ಆಯೋಗದ ತೀರ್ಮಾನಗಳನ್ನು ನ್ಯಾಯಾಲಯಗಳಲ್ಲಿ ಪ್ರಶ್ನಿಸಲು ಅವಕಾಶವಿದೆ. ಚುನಾವಣಾ ಆಯೋಗವು 1991ರವರೆಗೆ ಹತ್ತು ಸಾರ್ವತ್ರಿಕ ಚುನಾವಣೆಗಳನ್ನೂ ಹಲವಾರು ಉಪಚುನಾವಣೆಗಳನ್ನೂ

ಯಶಸ್ವಿಯಾಗಿ ನಡೆಸಿಕೊಟ್ಟಿದೆ. ರಾಷ್ಟ್ರ ಮಟ್ಟದಿಂದ ಹಿಡಿದು ತಾಲ್ಲೂಕಿನ ಮಟ್ಟದವರೆಗೆ ಶ್ರೇಣೀಕೃತ ಸಿಬ್ಬಂದಿ ವರ್ಗವನ್ನು ಆಯೋಗವು ನೇಮಿಸುತ್ತದೆ.

**ಚುನಾವಣಾ ಕ್ರಮ: ಒಂದು ಸಂಕ್ಷಿಪ್ತ ಅಧ್ಯಯನ**

ಮತದಾರರ ಮತ್ತು ಅಭ್ಯರ್ಥಿಗಳ ಅನುಕೂಲಕ್ಕಾಗಿ ಚುನಾವಣಾ ಆಯೋಗವು ಸಾಕಷ್ಟು ಮುಂಚೆಯೇ ಚುನಾವಣೆಗೆ ಸಂಬಂಧಿಸಿದ ವೇಳಾಪಟ್ಟಿಯನ್ನು ಪ್ರಕಟಿಸುತ್ತದೆ. ಪ್ರಕಟಣೆಯಲ್ಲಿ ಈ ಅಂಶಗಳು ಇರುತ್ತವೆ:

**i) ನಾಮಪತ್ರಗಳನ್ನು ತುಂಬುವಿಕೆ**

ಗೊತ್ತುಪಡಿಸಿದ ಕಾಲದೊಳಗೆ ಚುನಾವಣೆಗೆ ನಿಲ್ಲಬಯಸುವ ಅಭ್ಯರ್ಥಿಗಳು ತಮ್ಮ ನಾಮಪತ್ರಗಳನ್ನು ಚುನಾವಣಾಧಿಕಾರಿಗೆ ಸಲ್ಲಿಸಬೇಕಾಗುತ್ತದೆ. ಅದಕ್ಕೆ ಕಾನೂನಿನಂತೆ ನಿಗದಿಯಾದ ಠೇವಣಿಯನ್ನು ಕೊಡಬೇಕಾಗುತ್ತದೆ. ನಿಗದಿ ಪಡಿಸಿದ ಶೇಕಡಾವಾರು ಮತಗಳನ್ನು ಅಭ್ಯರ್ಥಿಗಳು ಪಡೆಯದೆ ಹೋದರೆ ಅವರು ಠೇವಣಿಯನ್ನು ಕಳೆದುಕೊಳ್ಳಬೇಕಾಗುತ್ತದೆ.

**ii) ನಾಮಪತ್ರ ಪರಿಶೀಲನೆ**

ಅಭ್ಯರ್ಥಿಯ ಅರ್ಹತೆಯನ್ನು ಪರಿಶೀಲಿಸಲಾಗುತ್ತದೆ. ಅನರ್ಹ ಅಭ್ಯರ್ಥಿಯ ಪತ್ರಗಳನ್ನು ತಿರಸ್ಕರಿಸಲಾಗುತ್ತದೆ ಮತ್ತು ಸ್ಪರ್ಧಿಗಳ ಅಂತಿಮ ಪಟ್ಟಿಯನ್ನು ತಯಾರಿಸಲಾಗುತ್ತದೆ.

**iii) ನಾಮಪತ್ರಗಳನ್ನು ಹಿಂತೆಗೆದುಕೊಳ್ಳುವಿಕೆ**

ನಾಮಪತ್ರಗಳನ್ನು ಹಿಂತೆಗೆದುಕೊಳ್ಳ ಬಯಸುವವರು ಅದಕ್ಕೆ ನಿಗದಿಪಡಿಸಿದ ದಿನಾಂಕದೊಳಗೆ ಹಾಗೆ ಮಾಡಲು ಅವಕಾಶವಿದೆ.

**iv) ಚುನಾವಣಾ ಪ್ರಚಾರ**

ಅಭ್ಯರ್ಥಿಗಳು ಮತ್ತು ರಾಜಕೀಯ ಪಕ್ಷಗಳವರು ಪ್ರಚಾರವನ್ನು ಆರಂಭಿಸಿ ಚುನಾವಣಾ ಪ್ರಣಾಳಿಕೆಯನ್ನು ಹೊರಡಿಸಿ ಮತದಾರರ ಮನವೊಲಿಸಲು ತೊಡಗುತ್ತಾರೆ. ಪ್ರಚಾರದ ಅವಧಿಯಲ್ಲಿ ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿ ಚುನಾವಣಾ ಭಾಷಣಗಳನ್ನು ಮಾಡಲಾಗುತ್ತದೆ. ವಿಧಿಸಿದ ಕಾನೂನನ್ನು ಮೀರದೆ ಸ್ವತಂತ್ರವಾಗಿ ಪ್ರಚಾರ ಕಾರ್ಯವನ್ನು ಮಾಡಲು ಅಭ್ಯರ್ಥಿಗಳಿಗೆ ಸ್ವಾತಂತ್ರ್ಯವಿದೆ. ಚುನಾವಣೆ ಆರಂಭವಾಗುವುದಕ್ಕೆ 48 ಗಂಟೆಗಳ ಮುಂಚೆ ಅಭ್ಯರ್ಥಿಗಳು ಪ್ರಚಾರ ಕಾರ್ಯವನ್ನು ನಿಲ್ಲಿಸಬೇಕು.

**v) ಚುನಾವಣಾ ದಿನ**

ಅಗತ್ಯ ಬಿದ್ದರೆ ಚುನಾವಣೆ ನಡೆಸಲಾಗುತ್ತದೆ. ಮತದಾನವು ಸುಸೂತ್ರವಾಗಿ

ಸಾಗಲು ನೆರವಾಗುವಂತೆ ತಕ್ಕ ಸಿಬ್ಬಂದಿಯನ್ನು ಆಯೋಗವು ನೇಮಕ ಮಾಡುತ್ತದೆ. ಸಂರಕ್ಷಣಾ ವ್ಯವಸ್ಥೆಗಳನ್ನು ಮಾಡಲಾಗುತ್ತದೆ. ಚುನಾವಣಾ ನಿಯಮಗಳನ್ನು ಯಾರೂ ಮೀರಬಾರದೆಂಬುದೇ ಇದರ ಉದ್ದೇಶ. ಚುನಾವಣೆಯ ದಿನ ಸಾರ್ವಜನಿಕ ರಜಾದಿನವೆಂದು ಘೋಷಿಸಲಾಗುತ್ತದೆ. ಅಂಗವಿಕಲರಿಗೂ, ಕುರುಡರಿಗೂ ಸಹ ಮತದಾನ ಮಾಡಲು ಅವಕಾಶವಿದೆ. ಅಭ್ಯರ್ಥಿಗಳ ಇಷ್ಟಪಟ್ಟರೆ ಮತದಾನದ ಕೇಂದ್ರಗಳಲ್ಲಿ ಪೋಲಿಂಗ್ ಏಜೆಂಟರನ್ನು ಇಡಬಹುದು.

**vi) ಮತ ಪತ್ರಗಳ ಎಣಿಕೆ**

ಎಣಿಕೆಯ ಕೇಂದ್ರಗಳಲ್ಲಿ ಮೊಹರು ಆದ ಮತ ಪೆಟ್ಟಿಗೆಗಳನ್ನು ಇಡಲಾಗುತ್ತದೆ. ಅಭ್ಯರ್ಥಿಗಳ ಅಥವಾ ಏಜೆಂಟರ ಸಮ್ಮುಖದಲ್ಲಿ ಎಣಿಕೆಯನ್ನು ಆರಂಭಿಸಲಾಗುತ್ತದೆ.

**vii) ಘೋಷಣೆ**

ಅತಿ ಹೆಚ್ಚು ಮತಗಳನ್ನು ಪಡೆದವರನ್ನು 'ಆಯ್ಕೆಯಾಗಿದ್ದಾರೆ' ಎಂದು ಘೋಷಿಸಲಾಗುತ್ತದೆ.

ಲೋಕಸಭೆ, ವಿಧಾನಸಭೆ, ನಗರಸಭೆ ಮತ್ತು ಪುರಸಭೆಗಳ ಹಾಗೂ ಜಿಲ್ಲಾ ತಾಲ್ಲೂಕು ಮತ್ತು ಗ್ರಾಮ ಪಂಚಾಯತ್ ಚುನಾವಣೆಗಳಿಗೆಲ್ಲಾ ಈ ಕ್ರಮವನ್ನು ಅನುಸರಿಸಲಾಗುತ್ತದೆ. ಕರ್ನಾಟಕದ ಜಿಲ್ಲಾ ಪರಿಷತ್ತು ಹಾಗೂ ಪಂಚಾಯಿತಿಗಳ ಚುನಾವಣೆಯಲ್ಲಿ ಅಲ್ಪ ಸ್ವಲ್ಪ ಮಾರ್ಪಾಡುಗಳೊಂದಿಗೆ ಇದೇ ಕ್ರಮ ಜಾರಿಯಲ್ಲಿದೆ.

## ಪ್ರಜಾಪ್ರಭುತ್ವದಲ್ಲಿ ಪಕ್ಷ ಪದ್ಧತಿ: 'ಎರಡು ಪಕ್ಷ' ಪದ್ಧತಿ ಮತ್ತು 'ಬಹುಪಕ್ಷ' ಪದ್ಧತಿ

ಯಾವುದೇ ಪ್ರಜಾಪ್ರಭುತ್ವದಲ್ಲಾಗಲಿ ರಾಜಕೀಯ ಪಕ್ಷಗಳ ಪಾತ್ರ ಮಹತ್ವದ್ದಾಗಿರುತ್ತದೆ. ಆಧುನಿಕ ಪ್ರಜಾಪ್ರಭುತ್ವದಲ್ಲಿ ಎರಡು ರಾಜಕೀಯ ಪಕ್ಷಗಳ ಅಥವಾ ಬಹುಪಕ್ಷಗಳ ಕಾರ್ಯಪದ್ಧತಿ ಇರುತ್ತದೆ. ಅಮೆರಿಕಾ ಹಾಗೂ ಬ್ರಿಟನ್‌ಗಳಲ್ಲಿ ಎರಡು ಪ್ರಧಾನ ಪಕ್ಷಗಳು ಅಧಿಕಾರಕ್ಕಾಗಿ ಸೆಣಸುತ್ತವೆ. ಭಾರತ, ಫ್ರಾನ್ಸ್ ಮೊದಲಾದ ದೇಶಗಳಲ್ಲಿ ಬಹು ಪಕ್ಷಗಳಿವೆ. ಆದ್ದರಿಂದ ಇಲ್ಲಿ ಯಾವುದೇ ಒಂದು ರಾಜಕೀಯ ಪಕ್ಷ ಅಥವಾ ರಾಜಕೀಯ ಪಕ್ಷಗಳ ಒಕ್ಕೂಟವು ಸರಕಾರವನ್ನು ರಚಿಸುತ್ತದೆ. ಪ್ರಜಾಪ್ರಭುತ್ವವು ಕ್ರಿಯಾತ್ಮಕವಾಗಬೇಕಾದರೆ 'ಎರಡು ಪಕ್ಷ'ದ ವ್ಯವಸ್ಥೆ ತುಂಬ ಉತ್ತಮ ಎಂದು ಹೇಳುತ್ತಾರೆ. ಭಾರತದಲ್ಲಿ ಬಹುಮತ ಪಡೆದ ಪಕ್ಷದ ಚುನಾಯಿತ ಸದಸ್ಯರು ತಮ್ಮ ನಾಯಕನನ್ನು ಆರಿಸುತ್ತಾರೆ. ಆ ನಾಯಕನು ಸರಕಾರ ನಡೆಸಲು ಮಂತ್ರಿಮಂಡಲವನ್ನು ರಚಿಸುತ್ತಾನೆ. 1991 ರಲ್ಲಿ ಭಾರತದಲ್ಲಿ ನೇತಾಡುವ ಲೋಕಸಭೆ (HUNG PARLIAMENT)ಯ ಸಂದರ್ಭ ಒದಗಿ ಬಂದಿತ್ತು. ಏಕೆಂದರೆ ಯಾವೊಂದು ಪಕ್ಷಕ್ಕೂ ಬಹುಮತ ದೊರೆಯಲಿಲ್ಲ.

**ಪ್ರಜಾಪ್ರಭುತ್ವದಲ್ಲಿ ವಿರೋಧ ಪಕ್ಷಗಳ ಪಾತ್ರ**

1. ವಿರೋಧ ಪಕ್ಷವನ್ನು "ಪ್ರಜಾಪ್ರಭುತ್ವದ ಕಾವಲು ನಾಯಿ" ಎಂದು ಹೇಳಲಾಗಿದೆ. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ವಿರೋಧ ಪಕ್ಷದವರು ಆಳುವ ಪಕ್ಷದವರಷ್ಟೇ ಸಮರ್ಥರಾಗಿದ್ದು ಅಗತ್ಯ ಬಿದ್ದರೆ ರಾಜ್ಯವನ್ನಾಳುವ ಜವಾಬ್ದಾರಿಯನ್ನು ಹೊರಬಲ್ಲವರಾಗಿರಬೇಕು.
2. ಆಳುವ ಪಕ್ಷವು ವಿರೋಧ ಪಕ್ಷದ ದೃಷ್ಟಿ ಕೋನವನ್ನು ಗೌರವಿಸಬೇಕು. ವಿರೋಧ ಪಕ್ಷವು ಆಳುವ ಪಕ್ಷವನ್ನು ಸದಾ ಎಚ್ಚರದ ಸ್ಥಿತಿಯಲ್ಲಿ ಇಟ್ಟಿರುತ್ತದೆ.
3. ಆಳುವ ಪಕ್ಷವು ಕಾರ್ಯ ನಿರ್ವಹಿಸಲು ವಿಫಲವಾದಾಗ ವಿರೋಧ ಪಕ್ಷವು ಆಳುವ ಪಕ್ಷವಾಗುತ್ತದೆ.
4. ಎಲ್ಲ ರಾಜಕೀಯ ಪಕ್ಷಗಳ ಅಂತಿಮ ಗುರಿಯು ಜನರ ಕಲ್ಯಾಣ ಮತ್ತು ಸಮಾಜದ ಎಲ್ಲ ವರ್ಗಗಳ ಏಳಿಗೆಗಾಗಿ ದುಡಿಯುವುದೇ ಆಗಿದೆ.
5. ಪ್ರಜಾಪ್ರಭುತ್ವದಲ್ಲಿ ವಿರೋಧ ಪಕ್ಷವು ಜವಾಬ್ದಾರಿಯುತವಾದ ಮತ್ತು ರಚನಾತ್ಮಕವಾದ ಟೀಕೆಗಳನ್ನು ಮಾಡುತ್ತದೆಂದು ನಿರೀಕ್ಷಿಸಲಾಗುತ್ತದೆ. 'ಕೇವಲ ವಿರೋಧಿಸುವುದಕ್ಕಾಗಿ ವಿರೋಧ' ಎಂಬುದು ವಿರೋಧ ಪಕ್ಷದ ಧ್ಯೇಯವಾಗಬಾರದು, ರಾಷ್ಟ್ರದ ಹಿತ ಮತ್ತು ಸಮಾಜದ ಜನಗಳ ಕಲ್ಯಾಣ ಈ ಎರಡು ಅಂಶಗಳನ್ನು ವಿರೋಧ ಪಕ್ಷಗಳು ಮರೆಯಬಾರದು.
6. ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ವಿರೋಧ ಪಕ್ಷವು ಅನಿವಾರ್ಯವಾಗಿದ್ದು ಅದು ಮಹತ್ವದ ಪಾತ್ರ ವಹಿಸುತ್ತದೆ.

## ಅಭ್ಯಾಸಗಳು

**1. ಕೆಳಕಂಡ ಪ್ರಶ್ನೆಗಳಿಗೆ ಒಂದು ವಾಕ್ಯದ ಉತ್ತರಗಳನ್ನು ಬರೆಯಿರಿ.**

ಅ. ಪ್ರಜಾಪ್ರಭುತ್ವ ಜೀವನ ವಿಧಾನವನ್ನು ಜಗತ್ತು ಯಾರಿಂದ ಸ್ವೀಕರಿಸಿತು ?

ಆ. ಪ್ರಜಾಪ್ರಭುತ್ವದ ಅರ್ಥ ವಿವರಣೆಯ ಸಂದರ್ಭದಲ್ಲಿ ಅಬ್ರಹಾಂ ಲಿಂಕನ್ನನ ಹೇಳಿಕೆಯನ್ನು ಉದ್ಧರಿಸಿ.

ಇ. ಯಾವುದೇ ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಸಮೂಹ ಮಾಧ್ಯಮಗಳು ಯಾವುವು ?

ಈ. 1991ರವರೆಗೆ ಸ್ವತಂತ್ರ ಭಾರತದಲ್ಲಿ ಎಷ್ಟು ಸಾರ್ವತ್ರಿಕ ಚುನಾವಣೆಗಳು ನಡೆದಿವೆ ?

ಉ. ಚುನಾವಣೆಯಲ್ಲಿ ಯಾರ ಠೇವಣಿ ಮುಟ್ಟುಗೋಲಾಗುತ್ತದೆ ?

ಋ. ಚುನಾವಣೆಯಲ್ಲಿ ಸ್ವತಂತ್ರ ಅಭ್ಯರ್ಥಿ (ಉಮೇದುವಾರ) ಎಂದರೆ ಯಾರು ?

ಎ. ವಿರೋಧ ಪಕ್ಷವನ್ನು "ಪ್ರಜಾಪ್ರಭುತ್ವದ ಕಾವಲು ನಾಯಿ" ಎಂದು ಏಕೆ ಕರೆಯುತ್ತಾರೆ ?

ಏ. ಮತದಾರನ ಕನಿಷ್ಠ ವಯಸ್ಸು ಎಷ್ಟಿರಬೇಕು ?

**2. ಬಿಟ್ಟ ಸ್ಥಳಗಳನ್ನು ಸರಿಯಾದ ಶಬ್ದಗಳಿಂದ ತುಂಬಿ.**

ಅ. ಮಾತೃಸಂಸತ್ತು ಎಂದು ....... ಪಾರ್ಲಿಮೆಂಟನ್ನು ಕರೆಯಲಾಗಿದೆ.

ಆ. ಗ್ರೀಕ್ ಭಾಷೆಯಲ್ಲಿ 'ಡೆಮಾಸ್' ಎಂದರೆ...... ಎಂದರ್ಥ, ಮತ್ತು........ ಎಂದರೆ ಅಧಿಕಾರ ಎಂದರ್ಥ.

ಇ. ಒಬ್ಬ ನಾಯಕನು ತನಗೆ....... ಹೋದಾಗ ಎದೆಗುಂದಬೇಕಾಗಿಲ್ಲ.

ಈ. ಭಾರತದಲ್ಲಿ ಚುನಾವಣೆಯನ್ನು ನಡೆಸುವ ಜವಾಬ್ದಾರಿಯು....... ಎಂಬ ಸಂಸ್ಥೆಯ ಮೇಲಿದೆ.

ಉ. ......... ರಿಗೆ ಸಹಾಯವಾಗಲೆಂದು ಅಭ್ಯರ್ಥಿಗಳಿಗೆ ಬೇರೆ ಬೇರೆ....... ಗಳನ್ನು ಮತಪತ್ರದಲ್ಲಿ ಸೂಚಿಸಲಾಗಿರುತ್ತದೆ.

**3. ಇವುಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

ಅ. ಭಾರತದ ಪ್ರಜಾಪ್ರಭುತ್ವವು ಏಕೆ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ ?

ಆ. ಒಂದು ದೇಶದಲ್ಲಿ ಪ್ರಜಾಪ್ರಭುತ್ವದ ಅಂಶಗಳನ್ನು ಹೇಗೆ ಪಡೆಯಬಹುದು ?

ಇ. ಸಾರ್ವತ್ರಿಕ ವಯಸ್ಕರ ಮತದಾನ ಪದ್ಧತಿ ಎಂದರೇನು ?

ಈ. ಸಾರ್ವತ್ರಿಕ ವಯಸ್ಕರ ಮತದಾನ ಪದ್ಧತಿಯನ್ನು ಕೆಲವರು ವಿರೋಧಿಸುತ್ತಾರೆ. ಏಕೆ ?

**4. i). ಈ ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ನಾಲ್ಕರಿಂದ ಆರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

ಅ. ಸರ್ವಾಧಿಕಾರದ ಆಳ್ವಿಕೆಗೆ ಕಾರಣವಾಗುವ ಅಂಶಗಳು ಯಾವುವು ?

ಆ. ಪ್ರತ್ಯಕ್ಷ ಪ್ರಜಾಪ್ರಭುತ್ವ, ಪರೋಕ್ಷ ಪ್ರಜಾಪ್ರಭುತ್ವ ಇವೆರಡರ ವ್ಯತ್ಯಾಸವನ್ನು ತಿಳಿಸಿ.

ಇ. ಪ್ರಜಾಪ್ರಭುತ್ವದಲ್ಲಿ ಎರಡು ಪಕ್ಷಗಳ ವ್ಯವಸ್ಥೆ ಮತ್ತು ಬಹುಪಕ್ಷಗಳ ವ್ಯವಸ್ಥೆಗಳಿಗಿರುವ ವ್ಯತ್ಯಾಸಗಳೇನು ?

**ii) ಇವುಗಳಿಗೆ ಟಿಪ್ಪಣಿ ಬರೆಯಿರಿ.**

ಅ. ವಿವೇಕದ ನಾಯಕತ್ವ.

ಆ. ಶಿಸ್ತಿನ ಪ್ರಜಾವರ್ಗ.

ಇ. ಪ್ರಜಾಪ್ರಭುತ್ವದಲ್ಲಿ 'ವಿರೋಧ ಪಕ್ಷ'

**5. ಇವುಗಳಿಗೆ ಒಂದು ಪುಟದ ಉತ್ತರ ಬರೆಯಿರಿ.**

ಅ. ಪ್ರಜಾಪ್ರಭುತ್ವದ ನಾಲ್ಕು ಮುಖ್ಯ ಅಗತ್ಯಗಳನ್ನು ಕುರಿತು ಬರೆಯಿರಿ.

ಆ. ಯಾವುದಾದರೊಂದು ಚುನಾವಣೆ ಅಥವಾ ಮಧ್ಯಂತರ ಚುನಾವಣೆಯಲ್ಲಿ ಚುನಾವಣೆ ನಡೆಸುವ ಕ್ರಮಗಳನ್ನು ಕುರಿತು ಬರೆಯಿರಿ.

6. **ಕೆಳಗಿನ ಹೇಳಿಕೆಗಳಲ್ಲಿ ಕೆಲವು ತಪ್ಪಾಗಿವೆ. ಹಾಗೆ ತಪ್ಪಿರುವ ಹೇಳಿಕೆಗಳನ್ನು ಮಾತ್ರ ತಿದ್ದಿ ಬರೆಯಿರಿ.**

ಅ. ಅಂತಿಮವಾಗಿ ಪ್ರಜಾಪ್ರಭುತ್ವದಲ್ಲಿ ಆಡಳಿತವನ್ನು ನಡೆಸುವ ಜವಾಬ್ದಾರಿಯು "ಅಧಿಕಾರಿ"ಗಳಲ್ಲಿ ಇರುತ್ತದೆ.

ಆ. ಸಂವಿಧಾನವು ದೇಶದ ಮೂಲಭೂತ ಕಾನೂನು.

ಇ. "ಸಾಮಾನ್ಯವಾಗಿ ಒಂದು ಅಲ್ಪಮತೀಯರ ಗುಂಪಿನ ನಾಯಕನು ಅಧಿಕಾರವನ್ನು ಬಯಸುವಂತಿಲ್ಲ"

ಈ. ಒಂದು ಚುನಾವಣಾ ವಿವಾದವನ್ನು ದೇಶದ ಕೆಳಗಿನ ಕೋರ್ಟು ಮಾತ್ರ ಪರಿಹರಿಸಬಲ್ಲುದು.

ಉ. 'ವಿರೋಧ' ಮತ್ತು 'ಭಿನ್ನಾಭಿಪ್ರಾಯ'ಗಳಿರುವುದು ಪ್ರಜಾಪ್ರಭುತ್ವದಲ್ಲಿ ತುಂಬಾ ಸಾಮಾನ್ಯ.

ಊ. ಒಮ್ಮೆ ಚುನಾಯಿತಗೊಂಡ ಮೇಲೆ ಅಭ್ಯರ್ಥಿ ಅಥವಾ ಪಕ್ಷವು ಸಾರ್ವಜನಿಕ ಅಭಿಪ್ರಾಯಗಳಿಗೆ ಮನ್ನಣೆ ಕೊಡಬೇಕಾಗಿಲ್ಲ.

7. **ಚಟುವಟಿಕೆಗಳು**

ಅ. ರಾಜಕೀಯ ಪಕ್ಷಗಳು ಏರ್ಪಡಿಸುವ ಸಭೆಗಳಿಗೆ – ಮುಖ್ಯವಾಗಿ ಚುನಾವಣಾ ಸಭೆಗಳಿಗೆ – ಹಾಜರಿ ಹಾಕಿರಿ ಮತ್ತು ಪ್ರಸ್ತಾಪಿತವಾಗುವ ಅಂಶಗಳನ್ನು ವಿಮರ್ಶಾತ್ಮಕವಾಗಿ ತೂಗಿ ನೋಡಿ.

ಆ. ಚುನಾವಣೆಯ ಫಲಿತಾಂಶಗಳನ್ನು ವೈಚಾರಿಕವಾಗಿ ವಿಶ್ಲೇಷಿಸಿ.

ಇ. ಚುನಾವಣೆಯ ಹಂತಗಳನ್ನು ವಿವರವಾಗಿ ಅಧ್ಯಯನ ಮಾಡಿ.

# ೨. ನಮ್ಮ ಪ್ರಜಾಪ್ರಭುತ್ವವನ್ನು ಬಲಪಡಿಸುವಿಕೆ

ರಾಜಕೀಯ ಚಿಂತಕರು ಬದಲಿ ಅತ್ಯುತ್ತಮ ಸರಕಾರದ ವ್ಯವಸ್ಥೆಯನ್ನು ರೂಪಿಸಿಲ್ಲವಾದ್ದರಿಂದ ಸದ್ಯಕ್ಕೆ ಪ್ರಜಾಪ್ರಭುತ್ವ ವ್ಯವಸ್ಥೆಯೇ ಶ್ರೇಷ್ಠ ಪದ್ಧತಿ ಎಂದು ಹೇಳಬಹುದು. ಸರ್ವಾಧಿಕಾರದ ಆಳ್ವಿಕೆ ಈ ಜಗತ್ತಿನಲ್ಲಿ ಕ್ರಮೇಣ ತನ್ನ ಹಿಡಿತವನ್ನು ಕಳೆದುಕೊಳ್ಳುತ್ತಿದೆ. ಸಮಾಜವಾದದ ವೇಷದಲ್ಲಿ ಬಂದ ಸರ್ವಾಧಿಕಾರಿ ವ್ಯವಸ್ಥೆ ಕೂಡ ಪೂರ್ವ ಯೂರೋಪ್ ರಾಜ್ಯಗಳಲ್ಲಿ ವಿಫಲವಾಗಿದೆ (ಹಿಂದಿನ ಸೋವಿಯತ್ ಒಕ್ಕೂಟದ ಇತ್ತೀಚಿನ ಬೆಳವಣಿಗೆಗಳು ಇದಕ್ಕೆ ಒಂದು ಉದಾಹರಣೆ. ಹಾಗೆಯೇ ಚೈನಾ ಜನತೆ ಕೂಡ ನಿರಂಕುಶ ಆಳ್ವಿಕೆಯ ವಿರುದ್ಧ ಸೊಲ್ಲೆತ್ತಿರುವುದನ್ನು ಕಾಣಬಹುದಾಗಿದೆ).

ಸ್ವಾತಂತ್ರ್ಯ ಬಂದ ಸಂದರ್ಭದಿಂದ ನಮ್ಮ ದೇಶವು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅನುಸರಿಸಿದ್ದು ಭಾರತದ ಜನರು ಇದನ್ನು ತಮ್ಮ ಜೀವನ ಸೂತ್ರವಾಗಿ ಸ್ವೀಕರಿಸಿದ್ದಾರೆ. ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವವಾಗಿ ಭಾರತವು ಸರ್ವಾಂಗೀಣ ಪ್ರಗತಿಯತ್ತ ಸಾಗುತ್ತಿದೆ. ಪ್ರಜಾಸತ್ತೆಯ ತತ್ವ ಬಲಗೊಂಡು ಈ ಪುರಾತನ ಭೂಮಿಯಲ್ಲಿ ಭದ್ರವಾಗಿ ಬೇರೂರುತ್ತಿದೆ. ಈ ತತ್ವದ ಪ್ರಕಾರ ಸಮಾಜದ ದೀನದಲಿತರ ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳ ಬಗೆಗೆ ಸರಕಾರವು ನಡೆಸುತ್ತಿರುವ ಕ್ರಿಯಾಶೀಲ ಯೋಜನೆಗಳನ್ನು ಅರ್ಥಮಾಡಿಕೊಳ್ಳುವಷ್ಟು, ಜನರು ರಾಜಕೀಯ ಪ್ರಜ್ಞೆ ಹೊಂದಿದ್ದಾರೆ. ಈ ಚಟುವಟಿಕೆಗಳು ಎಲ್ಲರ ಏಳಿಗೆಗೆ ಸಹಾಯಕವಾಗಿವೆ.

ಪ್ರಜಾಪ್ರಭುತ್ವವು ಸುಭದ್ರವಾಗಬೇಕಾದರೆ ಅನೇಕ ಬಗೆಯ ಸಹಕಾರ ಅಗತ್ಯ. ಉದಾಹರಣೆಗೆ ತಿಳಿವಳಿಕಸ್ಥರಾದ ಹಾಗೂ ಜವಾಬ್ದಾರಿಯುಳ್ಳ ಪ್ರಜಾವರ್ಗ, ವಿಸ್ತಾರವಾದ ವಾರ್ತಾಜಾಲಗಳು, ಪತ್ರಿಕಾ ಸ್ವಾತಂತ್ರ್ಯ, ಸಮೂಹ ಮಾಧ್ಯಮ ಮತ್ತು ಉತ್ತಮ ಸಂಪರ್ಕ ವ್ಯವಸ್ಥೆ ಇತ್ಯಾದಿಗಳು.

## ಭಾರತದಲ್ಲಿ ಉತ್ತಮ ಪೌರತ್ವದ ಲಕ್ಷಣಗಳು

ಹಿಂದಿನ ಅಧ್ಯಾಯದಲ್ಲಿ ಈ ಬಗೆಗೆ ಸ್ವಲ್ಪ ವಿವೇಚನೆ ಮಾಡಲಾಗಿದೆ. ಪ್ರಜಾಪ್ರಭುತ್ವದ ಯಶಸ್ಸು ಪೌರತ್ವದ ಯೋಗ್ಯತೆಯ ಮೇಲೆ ನಿಂತಿದೆ ಎಂಬುದನ್ನು ಮರೆಯಬಾರದು. ಒಂದು ಚುನಾವಣೆಯಿಂದ ಮತ್ತೊಂದಕ್ಕೆ ಸಾಗಿದಾಗಲೂ ಭಾರತವು ಗುಣಾತ್ಮಕವಾದ ಪ್ರಗತಿಯನ್ನು ಪ್ರದರ್ಶಿಸಿಕೊಂಡೇ ಬಂದಿದೆ.

ಜನಸಾಮಾನ್ಯರ ಮಟ್ಟದಲ್ಲಿ ಜನತೆಗೆ ನಾಯಕತ್ವದ ತರಪೇತಿಯನ್ನು ಕೊಡುವಂತೆ ಕೇಂದ್ರದ ಎಲ್ಲ ರಾಜ್ಯಗಳಲ್ಲೂ ಸ್ಥಾನಿಕ ಪರಿಷತ್ತುಗಳಿಗೆ ಹೆಚ್ಚಿನ ಅಧಿಕಾರವನ್ನು ಕಲ್ಪಿಸಿಕೊಡಲಾಗಿದೆ.

ಈ ಮಟ್ಟದಲ್ಲಿ ಆಡಳಿತಕ್ಕೆ ಸಂಬಂಧಿಸಿದ ಹಲವಾರು ಸಂಗತಿಗಳನ್ನು ಜನರಿಗೆ ತಿಳಿಸಲಾಗುತ್ತದೆ. ಗ್ರಾಮ ಪಂಚಾಯಿತಿ, ಮಂಡಲ ಪಂಚಾಯಿತಿಗಳು 1985ರ ಪಂಚಾಯತ್ ರಾಜ್ ವಿಧಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದು ಹೆಚ್ಚು

ಅಧಿಕಾರವನ್ನು ಪಡೆದುಕೊಂಡಿವೆ. ಕರ್ನಾಟಕ ಪಂಚಾಯಿತಿ ಅಧಿನಿಯಮ 1993 ರಂತೆ ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳ ವ್ಯವಸ್ಥೆ ಆಗಿದೆ. ಜ್ಞಾನ ಲಾಭಕ್ಕಾಗಿ ಸಹಕಾರ ಚಳುವಳಿಯನ್ನು ಕೂಡ ವ್ಯಾಪಕವಾಗಿ ಜನಪ್ರಿಯಗೊಳಿಸಲಾಗುತ್ತಿದೆ.

**ವಾರ್ತಾ ಸಮೃದ್ಧಿ**

ನಾವು ವಾರ್ತಾಕ್ರಾಂತಿಯ ಯುಗದಲ್ಲಿ ಸಾಗುತ್ತಿದ್ದೇವೆ. ಇದರ ಪರಿಣಾಮವಾಗಿ ಇಂದಿನ ಜಗತ್ತು ಜ್ಞಾನಸ್ಫೋಟಕ್ಕೆ ಅಣಿಯಾಗಿರುವುದು ನಿತ್ಯದ ಸಂಗತಿಯಾಗಿದೆ. ಭಾರತೀಯ ಪೌರರು ಈ ಸಂದರ್ಭವನ್ನು ಚೆನ್ನಾಗಿ ಬಳಸಿಕೊಳ್ಳಬೇಕು. ಪ್ರಜಾಪ್ರಭುತ್ವದ ನಾನಾ ಘಟಕಗಳ ಪೂರ್ಣ ತಿಳುವಳಿಕೆ ಹೊಂದಿ ಜ್ಞಾನವನ್ನು ವಿಸ್ತರಿಸಿಕೊಳ್ಳಬೇಕು. ಸಾಕ್ಷರತಾ ಪ್ರಸಾರದಿಂದ ಸುದ್ದಿ ಪ್ರಸಾರಕ್ಕೆ ದಾರಿಯಾಗುತ್ತದೆ ಮತ್ತು ಪ್ರಜಾಪ್ರಭುತ್ವವು ಯಶಸ್ವಿಯಾಗುತ್ತದೆ.

**ಸಾಕ್ಷರತಾ ಯೋಜನೆ**

ವಿದ್ಯೆ ಮತ್ತು ಸಾಕ್ಷರತೆಗಳನ್ನು ಹರಡುವುದರಿಂದ ಜ್ಞಾನ ಸಂಪಾದನೆಯು ಸಾಧ್ಯವಾಗುತ್ತದೆ. ಬೇರೆ ರಾಷ್ಟ್ರಗಳೊಂದಿಗೆ ಹೋಲಿಸಿವಾಗ ಈ ವಿಷಯದಲ್ಲಿ ಭಾರತವು ತುಂಬ ಹಿಂದೆ ಬಿದ್ದಿದೆ. ಸ್ವತಂತ್ರ ಭಾರತದಲ್ಲಿ ಹಲವಾರು ಸಾಕ್ಷರತಾ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದ್ದು ಅವು ಇಂದಿಗೂ ಮುಂದುವರಿಯುತ್ತಿವೆ. 1991 ಜನಗಣತಿ ವರಧಿಯ ಆಧಾರದ ಮೇಲೆ ಹೇಳುವುದಾದರೆ ಭಾರತವು ಶೇ. 52.11ರಷ್ಟು ಸಾಕ್ಷರತಾ ಪ್ರಗತಿಯನ್ನು ಸಾಧಿಸಿದ್ದು ಶೇಕಡಾ ನೂರರ ಗುರಿಯನ್ನು ಸಾಧಿಸಲು ಇಚ್ಛಿಸಿದೆ. ರಾಷ್ಟ್ರದ ಕೆಲವು ಭಾಗಗಳಲ್ಲಿ ಈ ಗುರಿಯನ್ನು ಮುಟ್ಟಲಾಗಿದೆ. 1951ರಲ್ಲಿ ನಮ್ಮ ರಾಷ್ಟ್ರದಲ್ಲಿ ಸಾಕ್ಷರತಾ ಪ್ರಮಾಣವು ಕೇವಲ ಶೇ. 16.7 ರಷ್ಟಿತ್ತು ಎಂಬುದನ್ನು ಮರೆಯಬಾರದು. ಕೇರಳವನ್ನು ಈಗ ಪೂರ್ಣ ಸಾಕ್ಷರ ರಾಜ್ಯ ಎಂದು ಘೋಷಿಸಲಾಗಿದೆ. ಕರ್ನಾಟಕದ ಹಾಗೂ ಇತರ ರಾಜ್ಯಗಳ ಕೆಲವು ಜಿಲ್ಲೆಗಳು ಈ ಹಂತವನ್ನು ತಲುಪಿವೆ. ಈ ಸಾಕ್ಷರತಾ ಆಂದೋಲನವನ್ನು ನಾವು ಶ್ರದ್ಧೆ ಉತ್ಸಾಹಗಳಿಂದ ಮುಂದುವರಿಸಿದ್ದೇ ಆದರೆ ಇಡೀ ಭಾರತವನ್ನು ಪೂರ್ಣ ಸಾಕ್ಷರ ರಾಷ್ಟ್ರ ಎಂದು ಘೋಷಿಸುವ ದಿನ ದೂರ ಉಳಿಯುವುದಿಲ್ಲ.

**ಪತ್ರಿಕೆ ಹಾಗೂ ಸಮೂಹ ಮಾಧ್ಯಮಗಳ ಸ್ವಾತಂತ್ರ್ಯ**

ಸಮೂಹ ಮಾಧ್ಯಮ: ಆಧುನಿಕ ಜಗತ್ತಿನ ಪ್ರಜಾಪ್ರಭುತ್ವದಲ್ಲಿ ಸಮೂಹ ಮಾಧ್ಯಮವು ಪ್ರಮುಖ ಪಾತ್ರ ವಹಿಸಿದೆ. ದೂರದರ್ಶನ, ಬಾನುಲಿ, ಪತ್ರಿಕೆ ಮತ್ತು ಸಾರ್ವಜನಿಕ ವೇದಿಕೆಗಳ ಮೂಲಕವಾಗಿ ಜನಾಭಿಪ್ರಾಯವನ್ನು ರೂಪಿಸಿ ಮಾರ್ಗದರ್ಶನ ಮಾಡಬಹುದು. ಭಾರತದಲ್ಲಿ ಪತ್ರಿಕೆಗಳಿಗೆ ಉಕ್ತಿ ಸ್ವಾತಂತ್ರ್ಯವನ್ನು ನೀಡಲಾಗಿದೆ. ಸಾರ್ವಜನಿಕ ವೇದಿಕೆಗಳನ್ನು ಮುಕ್ತ ಚರ್ಚೆ ಹಾಗೂ ಅರ್ಥಪೂರ್ಣ ಸಂವಾದಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಇನ್ನೆರಡು ಸಮೂಹ ಮಾಧ್ಯಮಗಳೆಂದರೆ ಬಾನುಲಿ ಮತ್ತು

ದೂರದರ್ಶನ. ಇವು ಕೇಂದ್ರದ ಸುದ್ದಿ ಮತ್ತು ವಾರ್ತಾಪ್ರಸಾರ ಶಾಖೆಯ ಕೈಯ್ಯಲ್ಲಿವೆ. ಆದರೂ ಸರಕಾರವು ಸಾರ್ವಜನಿಕ ವ್ಯವಹಾರಗಳಲ್ಲಿ ವಿರೋಧದ ಅಭಿಪ್ರಾಯ ವ್ಯಕ್ತಪಡಿಸುವವರಿಗೂ ತಮ್ಮ ಭಾವನೆಗಳನ್ನು ತಿಳಿಸಲು ಅವಕಾಶ ಮಾಡಿಕೊಡುತ್ತಿದೆ. ಈ ಎರಡು ಸಮೂಹ ಮಾಧ್ಯಮಗಳು ಸರಕಾರದ ನಿಯಂತ್ರಣದಲ್ಲಿರಬಾರದು ಎಂಬ ಬೇಡಿಕೆಯೂ ಇದೆ. ಈ ಮಾಧ್ಯಮಗಳಿಗೆ ಸ್ವಾಯುತ್ತತೆಯನ್ನು ಕೊಟ್ಟು ಪುನರ್ ವ್ಯವಸ್ಥೆಗೊಳಿಸುವ ಪ್ರಸ್ತಾವನೆಯೂ ಇದೆ.

## ವೃತ್ತ ಪತ್ರಿಕೆ ಮತ್ತು ಸ್ವಾತಂತ್ರ್ಯ

ವೃತ್ತ ಪತ್ರಿಕೆಯು ಭಾರತದಲ್ಲಿ ಮುಕ್ತ ಸ್ವರೂಪದ್ದಾಗಿದೆ. ವೃತ್ತ ಪತ್ರಿಕೆಗಳಿಗೆ ಅಭಿಪ್ರಾಯ ಸ್ವಾತಂತ್ರ್ಯವಿದೆ. ಪ್ರಪಂಚದ ಇತರ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿರುವಂತೆ ಭಾರತದಲ್ಲಿಯೂ ಪತ್ರಿಕಾ ಲೋಕವು ತಾನೊಂದು ಪ್ರಬಲ ಮಾಧ್ಯಮ ಎಂಬುದನ್ನು ತೋರಿಸಿಕೊಟ್ಟಿದೆ. ಸಾಮಾನ್ಯ ಮನುಷ್ಯನು ಎದುರಿಸುತ್ತಿರುವ ಹಲವಾರು ಸಮಸ್ಯೆಗಳ ಬಗೆಗೆ ಪತ್ರಿಕೆಯು ಅಭಿಪ್ರಾಯಗಳನ್ನು ಮಂಥನ ಮಾಡಿ ಒಂದು ಸಾರ್ವಜನಿಕ ದೃಷ್ಟಿಕೋನವನ್ನು ಬಿಂಬಿಸುತ್ತದೆ. ಅಲ್ಲದೆ ಈ ವಿಷಯಗಳ ಬಗೆಗೆ ಕಾರ್ಯೋನ್ಮುಖವಾಗುವಂತೆ ಸರಕಾರವನ್ನೂ ಒತ್ತಾಯಿಸುತ್ತದೆ. ಯುದ್ಧ ಅಥವಾ ಶಾಂತಿಯ ಸಂದರ್ಭಗಳಲ್ಲಿ ಸರಿಯಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದರಲ್ಲಿ ಪತ್ರಿಕೆಗಳು ಶ್ಲಾಘನೀಯ ಕಾರ್ಯಗಳನ್ನು ಮಾಡಿವೆ. ಪಕ್ಷಗಳ ನೇತಾರರು ವಿಶೇಷ ಸಂದರ್ಭಗಳಲ್ಲಿ ವಿಶೇಷ ಪತ್ರಿಕಾ ಸಂದರ್ಶನಗಳನ್ನು ಏರ್ಪಡಿಸಿ ದೇಶದ ಮುಂದಿರುವ ಮಹತ್ವದ ಸಮಸ್ಯೆಗಳ ಬಗೆಗೆ ತಮ್ಮ ನಿಲುವೇನು ಎಂಬುದನ್ನು ವಿವರಿಸುತ್ತಾರೆ. ಆ ಸಂದರ್ಭಗಳಲ್ಲಿ ಪತ್ರಕರ್ತರು ಹಾಕುವ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದದ್ದು ನೇತಾರರ ನೈತಿಕ ಹೊಣೆಯಾಗಿರುತ್ತದೆ.

ಭಾರತದಲ್ಲಿ ನಾಲ್ಕು ವಾರ್ತಾಸಂಸ್ಥೆಗಳಿವೆ. ಪಿ.ಟಿ.ಐ., (ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾ) ಯು.ಎನ್.ಐ. (ಯುನೈಟೆಡ್ ನ್ಯೂಸ್ ಆಫ್ ಇಂಡಿಯಾ) ಸಮಾಚಾರ ಭಾರತಿ ಮತ್ತು ಹಿಂದೂಸ್ತಾನ್ ಸಮಾಚಾರ್.

1978ರ ಪ್ರೆಸ್ ಕೌನ್ಸಿಲ್ ಮಸೂದೆಯ ಪ್ರಕಾರ 1979ರಲ್ಲಿ ಮೊದಲನೆಯ ಪ್ರೆಸ್ ಕೌನ್ಸಿಲನ್ನು ಸ್ಥಾಪಿಸಲಾಯಿತು. ಈ ಕೌನ್ಸಿಲ್ ಪತ್ರಿಕೆಗಳ ಸ್ವಾತಂತ್ರ್ಯವನ್ನು ರಕ್ಷಿಸುತ್ತದೆ, ಪತ್ರಿಕೆಗಳ ಮತ್ತು ವಾರ್ತಾಸಂಸ್ಥೆಗಳ ಗುಣಮಟ್ಟವನ್ನು ಅಭಿವೃದ್ಧಿಪಡಿಸುತ್ತದೆ.

## ದೂರದರ್ಶನ

1959ರಲ್ಲಿ ಭಾರತದಲ್ಲಿ ದೂರದರ್ಶನವನ್ನು ಪರಿಚಯಿಸಲಾಯಿತು. ದೆಹಲಿಯಲ್ಲಿ ಮಾತ್ರ ಯೋಜನೆ ಆರಂಭವಾಯಿತು. ದೂರದರ್ಶನವು ಅಖಿಲ ಭಾರತದ ವ್ಯಾಪ್ತಿಯ ಪ್ರಸಾರ ಜಾಲವನ್ನು ಹೊಂದಿದ್ದು ರಾಷ್ಟ್ರದ ಶೇ. 80 ರಷ್ಟು ಜನರಿಗೆ ತಲುಪಬಲ್ಲುದಾಗಿದೆ. ರಾಜ್ಯದ ರಾಜಧಾನಿಗಳಲ್ಲಿ ಎರಡನೆಯ ಚಾನೆಲ್ ಅನ್ನು ಕ್ರಮೇಣ

ಆರಂಭಿಸಲಾಗಿದೆ. ರಾಷ್ಟ್ರದ ಅತಿ ದೊಡ್ಡ ದೂರದರ್ಶನ ಗೋಪುರವನ್ನು ದೆಹಲಿಯ ಬಳಿಯ ಪೀತಂಪುರದ ಬಳಿ 1988ರ ನವೆಂಬರ್ ಏಳರಂದು ಕಾರ್ಯೋನ್ಮುಖಗೊಳಿಸಲಾಯಿತು. 1989ರಲ್ಲಿ ದೆಹಲಿಯಲ್ಲಿ ಫೆಬ್ರವರಿ ಆರರಂದು ಒಂದು ಕೇಂದ್ರ ಉತ್ಪಾದನಾ ಘಟಕ (ಸೆಂಟ್ರಲ್ ಪ್ರೊಡಕ್ಷನ್ ಸೆಂಟರ್, ಸಿ.ಪಿ.ಸಿ)ವನ್ನು ಆರಂಭಿಸಲಾಯಿತು. ದೂರದರ್ಶನದಲ್ಲಿ ವಾಣಿಜ್ಯ ಪ್ರಸಾರ ಸೇವೆಯನ್ನು ಆರಂಭಿಸಿರುವುದರಿಂದ ಸರಕಾರದ ಆದಾಯದಲ್ಲಿ ತಕ್ಕ ಮಟ್ಟಿನ ಹೆಚ್ಚಳ ಕಾಣಿಸಿಕೊಂಡಿತು. 1989–90 ರ ವರ್ಷದಲ್ಲಿ ಅದರ ಗಳಿಕೆ 210.13 ಕೋಟಿ ರೂ.ಗಳು. ಟೆಲಿವಿಷನ್ ಸೆಟ್‌ಗಳ ಸಂಖ್ಯೆ 1992ರ ವೇಳೆಗೆ ಸುಮಾರು 45.6 ದಶಲಕ್ಷಗಳಿಗೆ ಏರಬಹುದೆಂದು ಅಂದಾಜು ಮಾಡಲಾಗಿತ್ತು. 1981ರ ಆಗಸ್ಟ್ 15 ರಂದು ದೂರದರ್ಶನದಲ್ಲಿ ಆರಂಭವಾದ ಉನ್ನತ ಶಿಕ್ಷಣ ಕಾರ್ಯಕ್ರಮಗಳು ಈಗಲೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ. ಇವು ದೂರದರ್ಶನದ ಕಾರ್ಯಕ್ರಮಗಳ ಮೌಲ್ಯವನ್ನು ಹೆಚ್ಚಿಸಿವೆ.

ದೂರದರ್ಶನ ಒಂದು ಪ್ರಬಲ ಪ್ರಸಾರ ಮಾಧ್ಯಮ. ಇದು ತನ್ನ ಮನರಂಜನೆಯ ಕಾರ್ಯಕ್ರಮಗಳ ಜೊತೆಗೆ ಜ್ವಲಂತ ಸಮಸ್ಯೆಗಳ ವಿಷಯದಲ್ಲಿ ಜನಾಭಿಪ್ರಾಯವನ್ನು ಕ್ರೋಡೀಕರಿಸುವ ಕೆಲಸವನ್ನು ಮಾಡುತ್ತಿದೆ.

**ಬಾನುಲಿ**

ಭಾರತದಲ್ಲಿ ಬಾನುಲಿ ಪ್ರಸಾರವು 1927ರಲ್ಲಿ ಆರಂಭಗೊಂಡಿತು. ಆಗ ಮುಂಬಯಿ ಕಲ್ಕತ್ತಾಗಳಲ್ಲಿ ಎರಡು ಖಾಸಗಿ ಒಡೆತನದ ಟ್ರಾನ್ಸ್‌ಮಿಟರ್‌ಗಳಿದ್ದುವು. ಅವುಗಳನ್ನು ಸರಕಾರ ಕೊಂಡುಕೊಂಡು 1930ರಲ್ಲಿ ಭಾರತ ಪ್ರಸಾರ ಸೇವೆಯನ್ನು ಆರಂಭಿಸಿತು. (ಇಂಡಿಯನ್ ಬ್ರಾಡ್ ಕಾಸ್ಟಿಂಗ್ ಸರ್ವಿಸಸ್, I.B.S) 1936ರಲ್ಲಿ ಆಲ್ ಇಂಡಿಯಾ ರೇಡಿಯೋ ಎಂದು ಕರೆಯಲಾಯಿತು. 1935 ರಲ್ಲಿ ಮೈಸೂರು ನಗರದಲ್ಲಿ ಖಾಸಗಿ ಬಾನುಲಿ ಕೇಂದ್ರ ಆರಂಭವಾಯಿತು. 1941ರಲ್ಲಿ ಅದು ಆಲ್ ಇಂಡಿಯಾ ರೇಡಿಯೋ (AIR) ವ್ಯಾಪ್ತಿಗೆ ಬಂತು. 1957ರಲ್ಲಿ ಇದಕ್ಕೆ ಆಕಾಶವಾಣಿ ಎಂಬ ಹೆಸರು ಬಂದಿತು. (ಈ ಹೆಸರನ್ನು ಮೈಸೂರಿನ ಖಾಸಗಿ ಕೇಂದ್ರ ಮೊದಲು ಬಳಸಿತ್ತು.) ಈಗ ಆಕಾಶವಾಣಿಗೆ ಇನ್ನೂರಕ್ಕೂ ಹೆಚ್ಚು ಪ್ರಸಾರ ಕೇಂದ್ರಗಳಿವೆ. ಆಕಾಶವಾಣಿಯ ವಾರ್ತಾಸೇವಾ ವಿಭಾಗವು (ನ್ಯೂಸ್ ಸರ್ವಿಸ್ ಡಿವಿಷನ್) 19ಭಾಷೆಗಳಲ್ಲಿ ಸುದ್ದಿ ಪ್ರಸಾರ ಮಾಡುತ್ತದೆ. 'ವಿವಿಧ ಭಾರತಿ' ಶ್ರೋತೃಗಳಿಗೆ ಮನರಂಜನೆಯನ್ನು ಒದಗಿಸುತ್ತದೆ. ವಾಣಿಜ್ಯ ಪ್ರಸಾರದಿಂದ ಬರುವ ಒಟ್ಟು ಆದಾಯವು ವರ್ಷಕ್ಕೆ ಮೂವತ್ತು ಕೋಟಿ ರೂ.ಗಳಿಗೂ ಹೆಚ್ಚಿನದಾಗಿದೆ.

**ಸಾರ್ವಜನಿಕ ವೇದಿಕೆ**

ಸಂವಿಧಾನವು ವಾಕ್ ಸ್ವಾತಂತ್ರ್ಯವನ್ನು ಕೊಟ್ಟಿರುವುದರಿಂದ ಸಾರ್ವಜನಿಕ

ವೇದಿಕೆಗಳು ಜನಾಭಿಪ್ರಾಯವನ್ನು ರೂಪಿಸಲು ಸಾಧ್ಯವಾಗಿದೆ. ರಾಜಕೀಯ ಪಕ್ಷ, ಖಾಸಗಿ ವೇದಿಕೆ ಮೊದಲಾದವುಗಳು ಸಾರ್ವಜನಿಕ ಉಪನ್ಯಾಸಗಳಿಗೆ ಅವಕಾಶವಿತ್ತು, ಅಂತರ ರಾಷ್ಟ್ರೀಯ, ರಾಷ್ಟ್ರೀಯ ಹಾಗೂ ದೇಶೀಯ ಸಮಸ್ಯೆಗಳನ್ನು ಚರ್ಚಿಸುತ್ತವೆ. ಚುನಾವಣೆಯ ಸಂದರ್ಭದಲ್ಲಿ ನಾಯಕರು ತಮ್ಮ ವಾಗ್ಮಿಯತೆಯನ್ನು ಪ್ರದರ್ಶಿಸಿ ಜನರು ರಾಜಕೀಯ ಪ್ರಜ್ಞೆ ಬೆಳೆಸಿಕೊಳ್ಳುವಂತೆ ಮಾಡುತ್ತಾರೆ. ಜನತೆ ಇವರ ವಾಗ್ಮಿಯತೆಯ ಪ್ರವಾಹದಲ್ಲಿ ಕೊಚ್ಚಿ ಹೋಗಬಾರದು. ಅವರ ಉಪನ್ಯಾಸವನ್ನು ಕೇಳಿ ತಮ್ಮದೇ ಆದ ತೀರ್ಮಾನಗಳಿಗೆ ಬರಬೇಕಾದದ್ದು ಪೌರರ ಕರ್ತವ್ಯ.

**ವೈಚಾರಿಕ ತೀರ್ಮಾನ**

ಪೌರನು ವೈಚಾರಿಕವಾಗಿ ತೀರ್ಮಾನಿಸಬೇಕಾಗುತ್ತವೆ. ಪ್ರಚಾರ ಮತ್ತು ಸತ್ಯ ಇವುಗಳ ಅಂತರವನ್ನು ಪೌರನು ವಿಮರ್ಶಿಸಬೇಕು. ರಾಜಕೀಯ ಪಕ್ಷಗಳು ಕೆಲವು ಬಾರಿ ಒದಗಿದ ಸಂದರ್ಭಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚಿಕೊಳ್ಳುತ್ತವೆ. ಅಂಥ ಸಂದರ್ಭಗಳಲ್ಲಿ ಪೌರನಿಗೆ ಗೊಂದಲವುಂಟಾಗುತ್ತದೆ. ಆದುದರಿಂದ ಉತ್ತಮ ಪೌರನಾಗಬೇಕಾದರೆ ವೈಚಾರಿಕ ತೀರ್ಮಾನ ಅಗತ್ಯ.

**ಮತದಾನದ ಹಕ್ಕನ್ನು ನ್ಯಾಯಯುತವಾಗಿ ಚಲಾಯಿಸುವುದು**

ಇದು ಪೌರನಲ್ಲಿರಬೇಕಾದ ಇನ್ನೊಂದು ಮುಖ್ಯ ಗುಣ. ಮತವನ್ನು ಚಲಾಯಿಸುವುದು ಮತ್ತು ಸರಿಯಾದ ಉಮೇದುವಾರನನ್ನು ತಮ್ಮ ಕ್ಷೇತ್ರದ ಪ್ರತಿನಿಧಿಯಾಗಿ ಆರಿಸುವುದು ಪ್ರತಿನಾಗರಿಕನ ಪವಿತ್ರ ಕರ್ತವ್ಯ. ಮತದಾನದ ಬಗೆಗೆ ತಟಸ್ಥ ಧೋರಣೆ ತಳೆಯುವುದು, ನಮ್ಮ ಹಿತಕ್ಕೇ ಧಕ್ಕೆ ತರುತ್ತದೆ ಎಂಬುದನ್ನು ಮರೆಯಬಾರದು. ಏಕೆಂದರೆ ಭಾರತದ ಸಂವಿಧಾನದಲ್ಲಿ ಗೆದ್ದ ಅಭ್ಯರ್ಥಿಯನ್ನು ಹಿಂದಕ್ಕೆ ಕರೆಯಲು ಅವಕಾಶವಿಲ್ಲ. ಯಾವುದಾದರೂ ಸಂವಿಧಾನದ ತೊಡಕು ಬಂದ ಹೊರತು ಉಳಿದಂತೆ ಸಾಮಾನ್ಯವಾಗಿ ಒಮ್ಮೆ ಆಯ್ಕೆಯಾದವರು ಪೂರ್ಣ ಅವಧಿಯವರೆಗೆ ಸದಸ್ಯರಾಗಿಯೇ ಉಳಿಯುತ್ತಾರೆ.

**ಸಾರ್ವಜನಿಕ ಜೀವನದಲ್ಲಿ ಶಿಸ್ತು**

ಇದು ಕೂಡ ಜನರಲ್ಲಿ ಹಾಗೂ ಅವರ ನಾಯಕರುಗಳಲ್ಲಿ ಇರಬೇಕಾದ ಗುಣ. ಆಡಳಿತದಲ್ಲಿರುವವರು ತಪ್ಪು ಆಳ್ವಿಕೆ ನಡೆಸಿದರೆ ಅಥವಾ ಅಕೃತ್ಯಗಳನ್ನು ಮಾಡಿದರೆ ಅದನ್ನು ವಿರೋಧಿಸಲು ಶಾಸಕಾಂಗ, ಪತ್ರಿಕೆ ಮತ್ತು ಸಾರ್ವಜನಿಕ ವೇದಿಕೆಗಳಂಥ ಸ್ಪಷ್ಟ ಮಾರ್ಗಗಳಿವೆ.

ಈ ವೇದಿಕೆಗಳು ಅವರ ಅಕೃತ್ಯಗಳ ಬಗೆಗೆ ಅಸಮಾಧಾನವನ್ನು ಸೂಚಿಸಿ ವಿಮರ್ಶಿಸಲು ಅಧಿಕೃತ ಮಾಧ್ಯಮಗಳಾಗಿವೆ. ಒಂದು ಕ್ರಿಯಾಶೀಲ ಪ್ರಜಾಸತ್ತೆಯಲ್ಲಿ ಜನವರ್ತನೆಯಲ್ಲಿ ಹಿಂಸಾಮಾರ್ಗವನ್ನು ತ್ಯಜಿಸುವುದು ಅದರ ದೊಡ್ಡ ಗುಣಗಳಲ್ಲಿ ಒಂದಾಗಿದೆ. ಜನರು ತಮ್ಮ ಸಂಕಟಗಳಿಗೆ ಪರಿಹಾರವನ್ನು ಕೋರಲು ಕೆಲವು ಸಲ

ಹಿಂಸಾಚಾರಕ್ಕಿಳಿದು, ಸಾರ್ವಜನಿಕ ಆಸ್ತಿಪಾಸ್ತಿಗೆ ಧಕ್ಕೆ ತರಲು ಪ್ರಯತ್ನಿಸುವ ಸಂಗತಿ ನಮಗೆಲ್ಲ ತಿಳಿದೇ ಇದೆ. ಸಾರ್ವಜನಿಕ ಜೀವನದಲ್ಲಿ ಈ ಬಗೆಯ ವರ್ತನೆ ಪ್ರಜಾಸತ್ತೆಯ ಅಪಕ್ವ ಚಿಹ್ನೆಯಾಗುತ್ತದೆ. ಆದರೆ ಇಂಥವು ಅಲ್ಲಲ್ಲಿ ನಡೆದಿದ್ದರೂ ಭಾರತದ ಜನತೆ, ಮುಖ್ಯವಾಗಿ ಚುನಾವಣೆಯ ಕಾಲದಲ್ಲಿ, ತುಂಬ ಪಕ್ವವಾದ ಬುದ್ಧಿಯನ್ನು ತೋರಿದ್ದಾರೆಂದು ಹೇಳಬೇಕು. ನಮ್ಮ ದೇಶದಲ್ಲಿ ಅನೇಕ ಸಂದರ್ಭಗಳಲ್ಲಿ ಅತೃಪ್ತ ಜನ ಹಿಂಸಾಮಾರ್ಗಕ್ಕೆ ಇಳಿದಿದ್ದಾರೆ.

## ಸಾಮಾಜಿಕ ಮತ್ತು ಆರ್ಥಿಕ ಸಮಾನತೆ

ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯೇ ನಮ್ಮ ಪ್ರಜಾಸತ್ತೆಯ ಅಂತಿಮ ಗುರಿ. ಇವೆರಡನ್ನೂ ಎಲ್ಲರಿಗೂ ಒದಗಿಸದೆ ಹೋದರೆ ಪ್ರಜಾಪ್ರಭುತ್ವ ಎಂಬ ಮಾತಿಗೆ ಅರ್ಥವೇ ಇರುವುದಿಲ್ಲ. ಸಾಮಾಜಿಕ ಮತ್ತು ಆರ್ಥಿಕ ನ್ಯಾಯವನ್ನು ಒದಗಿಸುವುದಕ್ಕಾಗಿ ನಮ್ಮ ಸಂವಿಧಾನದಲ್ಲಿ ಹಲವಾರು ಕ್ರಮಗಳನ್ನು ಸೂಚಿಸಲಾಗಿದೆ. ಕಳೆದ ಹತ್ತಾರು ವರ್ಷಗಳಲ್ಲಿ ಅನೇಕ ಉತ್ತಮ ಯೋಜನೆಗಳನ್ನು ಅನುಷ್ಠಾನಕ್ಕೆ ತರಲಾಗಿದೆ. ಕರ್ನಾಟಕ ರಾಜ್ಯದ ಭೂಸುಧಾರಣಾ ಮಸೂದೆಯು ಬಡ ರೈತರಿಗೆ ತುಂಬ ಉಪಯೋಗಕರವಾಯಿತು. ಪಟ್ಟಣ ಪ್ರದೇಶದ ಭೂ ಮಿತಿಯ ಮಸೂದೆಯು ಭೂರಹಿತ ಜನತೆಗೆ ಉಪಕಾರಿಯಾಯಿತು. ಸಾಲ ವಿಮೋಚನೆ ಮತ್ತು ಜೀತಪದ್ಧತಿಯ ರದ್ದತಿಗಳು ಕೆಳವರ್ಗದ ಜನರಿಗೆ ಸಾಕಷ್ಟು ಪರಿಹಾರವನ್ನು ತಂದುಕೊಟ್ಟವು. ಈ ಆಜ್ಞೆಗಳಿಂದಾಗಿ ಸರಕಾರವು ಸಾವಿರಾರು ಜನರನ್ನು ಬಡತನದ ರೇಖೆಯಿಂದ ಮೇಲೆತ್ತಲು ಪ್ರಯತ್ನಿಸಿತು. 1955ರ ಅಸ್ಪೃಶ್ಯತಾ ನಿವಾರಣೆಯ ಕಾನೂನು ಸಮಾಜದ ದಲಿತರಿಗೆ ಮೇಲುವರ್ಗದವರೊಂದಿಗೆ ಸಮಾನ ಸ್ಥಾನಮಾನವನ್ನು ಗಳಿಸಿ ಕೊಡುವುದರಲ್ಲಿ ನೆರವಾಯಿತು. ವರದಕ್ಷಿಣೆ ಕೊಡುವುದನ್ನು ಅಥವಾ ತೆಗೆದುಕೊಳ್ಳುವುದನ್ನು ಈಗ ಕಾನೂನು ಬಾಹಿರವೆಂದು ಪರಿಗಣಿಸಲಾಗಿದೆ. ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡಲಾಗಿದೆ. ಭಾರತದಲ್ಲಿ ಈಗ ಸ್ತ್ರೀಯರ ಸ್ಥಾನಮಾನ ಸುಧಾರಿಸಿದೆ. ರಾಷ್ಟ್ರದ ಅಜ್ಞಾತ ಮೂಲೆಗಳಲ್ಲೂ ಸಾಕ್ಷರತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಬ್ಯಾಂಕುಗಳು ಬಡವರ ಹಳೆಯ ಸಾಲವನ್ನು ಮನ್ನಾ ಮಾಡಿವೆ ಮತ್ತು ಅಗತ್ಯಕ್ಕೆ ತಕ್ಕಂತೆ ಬಡವರಿಗೆ ವಿವಿಧ ಬಡ್ಡಿದರಗಳಲ್ಲಿ ಸಾಲವನ್ನು ಕೊಡುತ್ತಿವೆ. ರಾಸಾಯನಿಕ ಗೊಬ್ಬರಗಳನ್ನು ರೈತಾಪಿ ಜನರ ಅನುಕೂಲಕ್ಕಾಗಿ ಸರಕಾರದ ಸಹಾಯ ಧನ ಬೆಲೆಗಳಲ್ಲಿ ಕೊಡಲಾಗುತ್ತಿದೆ. ಉದ್ಯೋಗ ಮೀಸಲಾತಿ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶಾವಕಾಶ ಮೀಸಲಾತಿ ಕ್ರಮಗಳಿಂದಾಗಿ ಕೆಳವರ್ಗದ ನಿರುದ್ಯೋಗಿಗಳಿಗೂ ಮತ್ತು ವಿದ್ಯಾ ಅವಕಾಶಗಳಿಂದ ವಂಚಿತರಾಗಿದ್ದವರಿಗೂ ಅನುಕೂಲವಾಗಿದೆ. ಗ್ರಾಮೀಣ ಸ್ಥಾನಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ಮೀಸಲಾಗಿಟ್ಟಿರುವುದರಿಂದ ಕುಗ್ರಾಮಗಳಲ್ಲಿರುವವರಿಗೂ ಸಹಾಯವಾಗಿದೆ.

ಇಂಥ ಇನ್ನೂ ಹಲವಾರು ಕ್ರಮಗಳು ನಮ್ಮ ಜನರ ಸಾಮಾಜಿಕ ಮತ್ತು ಆರ್ಥಿಕ

ಸ್ಥಿತಿಗತಿಗಳನ್ನು ಸುಧಾರಿಸುವುದರಲ್ಲಿ ನೆರವಾಗಿವೆ. ಈ ದಿಸೆಯಲ್ಲಿ ಆಗಬೇಕಾದ ಕೆಲಸ ಇನ್ನೂ ಬಹಳ ಇದೆ. 8ನೇ ಪಂಚವಾರ್ಷಿಕ ಯೋಜನೆಯನ್ನು ಯೋಜನಾ ಆಯೋಗವು ಜಾರಿಗೆ ತಂದಿದೆ. ಈ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ನಮ್ಮ ಜನರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತದೆ ಮತ್ತು ಪ್ರಜಾಸತ್ತೆ ಬಲಗೊಳ್ಳುತ್ತದೆ ಎಂದು ಆಶಿಸೋಣ.

## ಅಭ್ಯಾಸಗಳು

**1. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

ಅ. 1990–91ರ ಜನಗಣತಿ ವರದಿಯ ಪ್ರಕಾರ ಭಾರತದಲ್ಲಿ ಸಾಕ್ಷರತೆಯ ಶೇಕಡಾವಾರು ಪ್ರಮಾಣ ಎಷ್ಟಿತ್ತು ?

ಆ. ರಾಜಕೀಯ ಪಕ್ಷಗಳು ಸಾರ್ವಜನಿಕ ವೇದಿಕೆಗಳನ್ನು ಸಮೂಹ ಮಾಧ್ಯಮಗಳಾಗಿ ಯಾವ ಸಂದರ್ಭದಲ್ಲಿ ಬಳಸಿಕೊಳ್ಳುತ್ತವೆ ?

ಇ. ಪ್ರಜಾಪ್ರಭುತ್ವದ ಪದ್ಧತಿಯಲ್ಲಿ ಅಸಂತೃಪ್ತಿಯನ್ನು ವ್ಯಕ್ತಪಡಿಸಲು ಬಳಸಿಕೊಳ್ಳುವ ಅಧಿಕೃತ ಮಾಧ್ಯಮಗಳು ಯಾವುವು ?

ಈ. ಒಮ್ಮೆ ಆಯ್ಕೆಗೊಂಡ ಸದಸ್ಯರನ್ನು 'ಹಿಂದಕ್ಕೆ ಕರೆಸುವುದು' ಎಂದರೇನು ?

ಉ. ಈಚಿನ ದಿನಗಳಲ್ಲಿ ಬಾನುಲಿಯ ಜನಪ್ರಿಯತೆ ಕುಗ್ಗಿರುವುದಕ್ಕೆ ಕಾರಣವೇನು ?

**2. ಇವಕ್ಕೆ ಕಾರಣಗಳೇನು ?**

ಅ. ದೂರದರ್ಶನದ ಎರಡನೆಯ ಚಾನಲ್‌ಗಳನ್ನು ರಾಜ್ಯಗಳ ರಾಜಧಾನಿಗಳಲ್ಲಿ ಆರಂಭಿಸಲಾಗಿದೆ.

ಆ. ಸಾರ್ವಜನಿಕ ಜೀವನದಲ್ಲಿ ಹಿಂಸೆಯನ್ನು ತ್ಯಜಿಸುವುದು ಅಪೇಕ್ಷಣೀಯ.

ಇ. ಮಹಿಳೆಯರ ಕಲ್ಯಾಣದ ವಿಧೇಯಕವನ್ನು ಭಾರತದಲ್ಲಿ ಜಾರಿಗೆ ತರಬೇಕಾಗಿದೆ.

**3. ಬಿಟ್ಟಿರುವ ಸ್ಥಳಗಳನ್ನು ತುಂಬಿರಿ.**

ಅ. ಜಗತ್ತಿನಲ್ಲಿಯೇ ಭಾರತವು ಅತಿ ದೊಡ್ಡ.......ವಾಗಿದೆ.

ಆ. ಎಲ್ಲಿ ನಿರಕ್ಷರಿಗಳಿದ್ದರೋ ಅಲ್ಲಿ ........... ಹರಡುವುದರ ಮೇಲೆ ಪ್ರಜಾಪ್ರಭುತ್ವದ ಯಶಸ್ಸು ನಿಂತಿದೆ.

ಇ. ಟೆಲಿವಿಷನ್‌ಗೆ ಭಾರತೀಯ ಹೆಸರು ಯಾವುದೆಂದರೆ........

ಈ. ಎ.ಐ.ಆರ್. ಇದರ ವಿಸ್ತರಣೆ........ ......... ........

ಉ. ಭಾರತದ ವಾರ್ತೆ ಮತ್ತು ಪ್ರಸಾರ ಸಚಿವಾಲಯದ ಅಧೀನದಲ್ಲಿರುವ ಎರಡು ಮುಖ್ಯ ಸಮೂಹ ಮಾಧ್ಯಮಗಳೆಂದರೆ......... ಮತ್ತು.........

ಊ. ಎರಡು ಖಾಸಗಿ ಒಡೆತನದ ಟ್ರಾನ್ಸಮಿಟರ್‌ಗಳಿಂದ ಮುಂಬಯಿ ಮತ್ತು......... ಗಳಲ್ಲಿ ಭಾರತದ ಪ್ರಸಾರ ಸೇವೆಯು......... ನೇ ವರ್ಷದಲ್ಲಿ ಆರಂಭವಾಯಿತು.

4. **ಇವಕ್ಕೆ ಟಿಪ್ಪಣಿ ಬರೆಯಿರಿ.**

ಅ. ಭಾರತದಲ್ಲಿ ಸಾಕ್ಷರತಾ ಕಾರ್ಯಕ್ರಮ.

ಆ. ಸಮೂಹ ಮಾಧ್ಯಮಗಳ ಮಹತ್ವ.

ಇ. ಬಾನುಲಿ (ಆಕಾಶವಾಣಿ).

ಈ. ಸಮೂಹ ಮಾಧ್ಯಮಗಳಾಗಿ ಸಾರ್ವಜನಿಕ ವೇದಿಕೆಗಳು.

5. **ಈ ಪ್ರಶ್ನೆಗಳಿಗೆ ಒಂದೊಂದು ಪುಟದಲ್ಲಿ ಉತ್ತರ ಬರೆಯಿರಿ.**

ಅ. ಪ್ರಜಾಪ್ರಭುತ್ವದಲ್ಲಿ ನಾಗರಿಕನ ಕರ್ತವ್ಯಗಳು.

ಆ. ಸಾಮಾಜಿಕ ಆರ್ಥಿಕ ಸಮಾನತೆಯ ಗುರಿಯನ್ನು ಸಾಧಿಸುವ ಉದ್ದೇಶದಿಂದ ಭಾರತದಲ್ಲಿ ಅಂಗೀಕೃತವಾದ ಮಸೂದೆಗಳು.

6. **ಇವುಗಳನ್ನು ಅರ್ಥಪೂರ್ಣವಾಗಿ ಹೊಂದಿಸಿ ಬರೆಯಿರಿ. ಕಂಸಗಳಲ್ಲಿ ಸಂಖ್ಯೆಯನ್ನು ಬರೆಯಿರಿ.**

| | ಅ | ಆ |
|---|---|---|
| 1. | ಪ್ರೆಸ್ ಕೌನ್ಸಿಲ್ ವಿಧೇಯಕವನ್ನು ಮಂಡಿಸಿದ ವರ್ಷ ಯಾವುದೆಂದರೆ | 1927 – ( ) |
| 2. | ಭಾರತದಲ್ಲಿ ಅತಿ ಎತ್ತರದ ದೂರದರ್ಶನ ಗೋಪುರವನ್ನು ಕಟ್ಟಿದ ವರ್ಷವೆಂದರೆ | 1955 – ( ) |
| 3. | ಪಂಚಾಯತಿ ರಾಜ್ ಮಸೂದೆಯನ್ನು ಕರ್ನಾಟಕದಲ್ಲಿ ಅಂಗೀಕರಿಸಿದ ವರ್ಷವೆಂದರೆ | 1978 – ( ) |
| 4. | ಕೇಂದ್ರ ಸರಕಾರವು ಖಾಸಗಿ ಒಡೆತನದ ಪ್ರಸಾರ ವ್ಯವಸ್ಥೆಯನ್ನು ತನ್ನ ಕೈಗೆ ತೆಗೆದುಕೊಂಡ ವರ್ಷ ಯಾವುದೆಂದರೆ | 1985 – ( ) |
| 5. | ಅಸ್ಪೃಶ್ಯತಾ ನಿವಾರಣೆಯ ಮಸೂದೆ ಅಂಗೀಕೃತವಾದ ವರ್ಷವೆಂದರೆ | 1930 – ( ) |

7. **ಚಟುವಟಿಕೆ**

ಅ. ಸೂಚಿತವಾಗಿರುವ 'ಪ್ರಸಾರ ಭಾರತಿ' ಮಸೂದೆಯ ಬಗೆಗೆ ವಿವರವಾದ ಮಾಹಿತಿಗಳನ್ನು ಸಂಗ್ರಹಿಸಿ.

ಆ. ನಮ್ಮ ಜನರ ಸಾಮಾಜಿಕ – ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸುವ ದೃಷ್ಟಿಯಿಂದ ಭಾರತ ಸರಕಾರವು ಕೈಕೊಂಡ ಕ್ರಮಗಳನ್ನು ಕಾಲಾನುಕ್ರಮವಾಗಿ ವಿವರಿಸಿ.

# ೩. ರಾಷ್ಟ್ರೀಯ ಸಮಗ್ರತೆ

## ಭಾರತದ ಜನತೆ ಮತ್ತು ವೈವಿಧ್ಯಗಳು

ಬಹುಕಾಲದ ವಿದೇಶೀ ಆಳ್ವಿಕೆಯ ನಂತರ ಭಾರತೀಯರು ಮೊದಲ ಬಾರಿಗೆ ಒಂದೇ ಧ್ವಜದ ಅಡಿಯಲ್ಲಿ ಒಂದಾದರು. ಭಾರತವು 32.8 ಲಕ್ಷ ಚದರ ಕಿಲೋ ಮೀಟರುಗಳ ವ್ಯಾಪ್ತಿಯ ಪ್ರದೇಶವನ್ನುಳ್ಳ ಒಂದು ದೊಡ್ಡ ರಾಷ್ಟ್ರ. ಭಾರತವು ಗಾತ್ರದಲ್ಲಿ ಜಗತ್ತಿನ ಏಳನೆಯದು. ಜನಸಂಖ್ಯೆಯಲ್ಲಿ ಎರಡನೆಯದು. ಭಾರತದಲ್ಲಿ ತುಂಬ ಭೌತಿಕ ವೈವಿಧ್ಯಗಳಿವೆ. ಹವಾಗುಣ ಹಾಗೂ ಭೂಗುಣದಲ್ಲಿ ವೈವಿಧ್ಯವಿರುವುದರ ಫಲವಾಗಿ ಇಲ್ಲಿ ಆಹಾರ ಪದ್ಧತಿ ಮತ್ತು ಧಾರ್ಮಿಕ ಆಚಾರಗಳಲ್ಲೂ ವೈವಿಧ್ಯವಿದೆ.

ಭಾರತದ ದೀರ್ಘ ಇತಿಹಾಸದಲ್ಲಿ ಜಗತ್ತಿನ ಬೇರೆ ಬೇರೆ ಭಾಗದ ಜನ ಈ ದೇಶವನ್ನು ತಮ್ಮ ನೆಲೆಯಾಗಿ ಸ್ವೀಕರಿಸಿದ್ದಾರೆ. ಭಾರತದ ಆದಿಕಾಲದ ಇತಿಹಾಸವನ್ನು ಸಿಂಧೂ ಕಣಿವೆಯ ನಾಗರಿಕತೆಯಲ್ಲಿ ಕಾಣಬಹುದು. ವೇದಗಳು, ಉಪನಿಷತ್ತುಗಳು, ಪುರಾಣಗಳು, ಇವೆಲ್ಲ ನಮ್ಮ ಸಂಸ್ಕೃತಿಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟಿವೆ. ಮುಂದೆ ಶಕರು, ಹೂಣರು, ಗ್ರೀಕರು, ಪರ್ಷಿಯನ್ನರು ನಮ್ಮ ದೇಶಕ್ಕೆ ಬಂದರು. ಅವರೆಲ್ಲ ವಿಭಿನ್ನ ಸಂಸ್ಕೃತಿಯ ಹಿನ್ನೆಲೆ ಇದ್ದವರು. ಅವರಿಗೆ ತಮ್ಮದೇ ಆದ ಸ್ವಭಾವ, ಪದ್ಧತಿ, ಪರಂಪರೆ, ನಡವಳಿಕೆಗಳಿದ್ದು, ಈ ಮಿಶ್ರಣದ ಫಲವಾಗಿ ನಮ್ಮಲ್ಲಿ ಒಂದು ಸಂಯುಕ್ತ ಸಂಸ್ಕೃತಿ, ಹೊಸ ವಾಸ್ತುಶಿಲ್ಪ, ಚಿತ್ರಕಲೆ ಮುಂತಾದವುಗಳು ಮೂಡಿ ಬಂದವು. ಜೈನಧರ್ಮ ಬೌದ್ಧಧರ್ಮಗಳು ನಮ್ಮಲ್ಲೇ ಮೂಡಿ ಪ್ರವರ್ಧಮಾನಕ್ಕೆ ಬಂದವು. ಇಸ್ಲಾಂ ಧರ್ಮದ ಪ್ರವೇಶವು ಭಾರತದ ಸಂಸ್ಕೃತಿಗೆ ಹೊಸ ಆಯಾಮವನ್ನು ಒದಗಿಸಿತು. ಅನಂತರ ಯೂರೋಪಿಯನ್ನರು ತಮ್ಮೊಂದಿಗೆ ಪಶ್ಚಿಮ ಸಂಸ್ಕೃತಿಯ ಅಂಶಗಳನ್ನು ತಂದರು. ಬ್ರಿಟಿಷರು ಭಾರತವನ್ನು ಒಂದು ಆಡಳಿತದ ಕಕ್ಷೆಗೆ ತಂದರು. ಸ್ವಭಾವ, ವೇಷ ಮತ್ತು ಚಿಂತನೆಗಳಲ್ಲಿ ನಮ್ಮ ಜೀವನ ಪದ್ಧತಿಯು ಅವರ ಪ್ರಭಾವಕ್ಕೆ ಒಳಗಾಯಿತು.

ಹೀಗೆ ಚಾರಿತ್ರಿಕ ಮತ್ತು ಭೌಗೋಳಿಕ ಅಂಶಗಳು ನಮ್ಮ ಸಂಸ್ಕೃತಿಯನ್ನು ವೈವಿಧ್ಯಮಯವಾಗುವಂತೆ ಮಾಡಿವೆ. ಭಾರತದ ಪ್ರತಿಯೊಂದು ಪ್ರಾಂತವೂ ತನ್ನದೇ ಆದ ಭಾಷೆ, ಸಾಹಿತ್ಯ, ವೇಷ, ಆಹಾರ, ಕಲೆ ಮತ್ತು ಸಾಮಾಜಿಕ ಪರಂಪರೆಯನ್ನು ಹೊಂದಿದೆ. ಹೀಗೆ ಭಾರತ ಸಂಸ್ಕೃತಿಯ ಬಹುಮುಖತೆ ಮತ್ತು ವೈವಿಧ್ಯಗಳು ಸಾವಿರಾರು ವರ್ಷಗಳಿಂದ ಬೆಳೆದು ಬಂದಿವೆ. ಒಂದು ವಿಶಿಷ್ಟ ಸಮ್ಮಿಶ್ರಣವಾಗಿ ರೂಪುಗೊಂಡಿವೆ. ಇಷ್ಟೊಂದು ವೈವಿಧ್ಯಗಳಿದ್ದರೂ ಭಾರತವು ಒಂದು. "ವೈವಿಧ್ಯದಲ್ಲಿ ಏಕತೆ" ಎಂದು ನೆಹರೂ ಅವರು ಸರಿಯಾಗಿ ಗುರುತಿಸಿದ್ದಾರೆ. ಭಾರತದ ವೈವಿಧ್ಯದ ಅಂತರಾಳದಲ್ಲಿ ಒಂದು ಏಕತೆಯ ಒಳಸೆಲೆ ಇದೆ.

ಪ್ರತಿಯೊಬ್ಬ ಭಾರತೀಯನಿಗೂ ತನ್ನ ಸಂಸ್ಕೃತಿ, ಇತಿಹಾಸ, ಭಾಷೆ, ಕಲೆ, ಧರ್ಮ,

ಸಂಗೀತ ಹಾಗೂ ತತ್ವಗಳ ಬಗೆಗೆ ಹೆಮ್ಮೆಯಿದೆ. ಭಾರತೀಯನಲ್ಲಿ ತಾನು ಕರ್ನಾಟಕದಲ್ಲಿರಲಿ, ಕಾಶ್ಮೀರದಲ್ಲಿರಲಿ ಒಂದೇ ರಾಷ್ಟ್ರದವನೆಂಬ ಆಪ್ತತೆಯಿದೆ. ಇಂಥ ಭಾವನೆಯ ಸಮಾವೇಶದಿಂದ ರಾಷ್ಟ್ರೀಯ ಭಾವೈಕ್ಯ ಮೂಡುತ್ತದೆ. ಭಾವೈಕ್ಯ ಎಂದರೆ ರಾಷ್ಟ್ರದ ಜನರಲ್ಲಿ ತಾವೆಲ್ಲ ಒಂದೇ ಎಂಬ ಭಾವನೆ ಹೊಂದಿರುವಿಕೆ. ಅದು ಎಲ್ಲ ಜನರನ್ನೂ ಒಗ್ಗೂಡಿಸುತ್ತದೆ. ಈ ಸಮಗ್ರ ಆಪ್ತಭಾವವು ರಾಷ್ಟ್ರೀಯ ಭಾವೈಕ್ಯವನ್ನು ಪೋಷಿಸುತ್ತದೆ. ಬ್ರಿಟಿಷ್ ಆಳ್ವಿಕೆಯ ವಿರುದ್ಧ ನಡೆದ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಇಂಥ ಭಾವೈಕ್ಯ ಮೂಡಿ ಬಂದಿತ್ತು. ಹಾಗೆಯೇ ಹೊರಗಿನವರಿಂದ ಆಕ್ರಮಣ ನಡೆದಾಗಲೆಲ್ಲ ನಮ್ಮವರು ಸಹಜವಾಗಿ ತಾವೆಲ್ಲ ಒಂದೇ ಎಂದು ತೋರಿಸಿಕೊಟ್ಟಿದ್ದಾರೆ. ಭಾರತೀಯ ಸಂಸ್ಕೃತಿಯ ಮೂಲಭೂತ ಗುಣಗಳು:

1. ಅನ್ಯ ಧರ್ಮ ಮತ್ತು ಅನ್ಯ ಪದ್ಧತಿಗಳನ್ನು ಗೌರವಿಸುವಿಕೆ.
2. ಔದಾರ್ಯ, ಸಹಿಷ್ಣುತೆ ಮತ್ತು ಪರಸ್ಪರ ಗೌರವ ಭಾವ.

ಈ ಗುಣಗಳು ಭಾರತೀಯತೆಯ ಭಾವನೆಗಳನ್ನು ತರುತ್ತವೆ. ಅವು ಏಕತೆ ಮತ್ತು ದೃಢತೆಗಳನ್ನು ಪೋಷಿಸುತ್ತವೆ.

## ರಾಷ್ಟ್ರೀಯ ಏಕತೆಗೆ ಭಂಗ ತರುವ ಅಂಶಗಳು

ಸ್ವಾತಂತ್ರ್ಯ ಬಂದ ನಂತರ ನಾವು ರಾಷ್ಟ್ರೀಯ ಏಕತೆ ಮತ್ತು ಸಮಗ್ರತೆ ಮೊದಲಾದ ದಿವ್ಯ ಸ್ಫೂರ್ತಿಗಳಿಂದ ವಂಚಿತರಾಗಿರುವಂತೆ ಕಾಣುತ್ತದೆ. ಸ್ವಾತಂತ್ರ್ಯವು ನಮ್ಮನ್ನು ನಿರ್ಲಕ್ಷ್ಯದಿಂದ ಇರುವಂತೆ ಮಾಡಿದೆ. ಈಗ ಭಾರತದ ಏಕತೆಯನ್ನು ಮುರಿಯುವ ಪ್ರಯತ್ನವನ್ನು ಹಲವಾರು ದುಷ್ಟ ಶಕ್ತಿಗಳು ಮಾಡುತ್ತಿವೆ. ಅವು ಯಾವುವೆಂದರೆ:

ಪ್ರಾಂತೀಯತೆ, ಜಾತೀಯತೆ, ಭಾಷಾಪ್ರೇಮ, ಮೂಲಭೂತವಾದಿತ್ವ, ಆರ್ಥಿಕ ಅಸಮಾನತೆ, ಭಯೋತ್ಪಾದಕತೆ ಮತ್ತು ರಾಜ್ಯಾಂಗದಿಂದ ಬೇರ್ಪಡೆಯಾಗುವ ಬುದ್ಧಿ. ಇವೆಲ್ಲ ತಮ್ಮ ದುಷ್ಟ ಹೆಡೆಯನ್ನು ಎತ್ತುತ್ತಿವೆ. ನಮ್ಮಲ್ಲಿ ರಾಜಕೀಯ ದೇಶೈಕ್ಯವನ್ನು ಸಾಧಿಸಲಾಗಿದೆ ನಿಜ. ಆದರೆ ಅದಕ್ಕೂ ಮುಖ್ಯವಾದ ಭಾವೈಕ್ಯವನ್ನು ಸಾಧಿಸಬೇಕಾಗಿದೆ. ಡಾ. ಎಸ್. ರಾಧಾಕೃಷ್ಣನ್ ಅವರು "ರಾಷ್ಟ್ರೀಯ ಭಾವೈಕ್ಯವನ್ನು ಇಟ್ಟಿಗೆ ಮತ್ತು ಗಾರೆಗಳಿಂದ ಕಟ್ಟಲು ಸಾಧ್ಯವಿಲ್ಲ. ಅದು ಮೌನವಾಗಿ ಜನರ ಅಂತರಂಗದಲ್ಲಿ ಬೆಳೆದು ನಿಲ್ಲಬೇಕು" ಎಂದು ಸೂಕ್ತವಾಗಿ ಹೇಳಿದ್ದಾರೆ. ಅಪನಂಬಿಕೆ, ಪೂರ್ವಾಗ್ರಹ, ದ್ವೇಷ, ಪಕ್ಷಪಾತ ಇವುಗಳಿಗೆ ಬದಲಾಗಿ ಪರಸ್ಪರ ಗೌರವ, ಅರ್ಥವಂತಿಕೆ ಮತ್ತು ಪ್ರೇಮ ಕಾಣಿಸಿಕೊಳ್ಳಬೇಕು. ರಾಷ್ಟ್ರದ ಏಕತೆ ಎಂದರೆ ಅಚ್ಚು ಹೊಯ್ದಂತೆ ಎಲ್ಲವನ್ನೂ ಒಂದು ಮಾಡಿ ಬಿಡುವುದಲ್ಲ. ಏಕತೆ ಎನ್ನುವುದು ರೂಪ ಸಮಾನತೆಯಲ್ಲ. ವ್ಯಕ್ತಿ ತನ್ನ ಧರ್ಮವನ್ನು, ಭಾಷಾ ಪ್ರೇಮವನ್ನು, ತನ್ನ ಪದ್ಧತಿಯನ್ನು ಅನುಸರಿಸಬಾರದು ಎಂಬುದು ಅರ್ಥವಲ್ಲ.

## ರಾಷ್ಟ್ರೀಯ ಏಕತೆಯನ್ನು ಪೋಷಿಸುವುದು

ಸಂಸ್ಕೃತಿ, ಇತಿಹಾಸ ಮತ್ತು ಮೌಲ್ಯ ಪ್ರಜ್ಞೆಗಳಿಂದಾಗಿ ಮೂಡಿ ಬರುವ ನಮ್ಮ ಒಕ್ಕೂಟದ ಶಕ್ತಿಯು ವಿಚ್ಛಿದ್ರಕಾರಕ ಶಕ್ತಿಗಳಿಗಿಂತ ಹೆಚ್ಚು ಬಲಶಾಲಿಯಾಗಿದೆ. ಸ್ವಾತಂತ್ರ್ಯ ಬಂದ ದಿನದಿಂದ ಹಿಡಿದು ಇಂದಿನವರೆಗೂ ರಾಜಕೀಯವಾಗಿ ಒಂದಾಗಿ ಮುಂದುವರಿಯುತ್ತಿದ್ದೇವೆ. ಇದರಿಂದ ನಮ್ಮ ಸ್ಥಾನಿಕ ಸಂಸ್ಥೆಗಳು ಬೆಳೆಯಲು ಅವಕಾಶವಾಗಿದೆ. ಹೀಗಾಗಿ ಜಗತ್ತಿನಲ್ಲಿ ಒಂದು ದೊಡ್ಡ ಕ್ರಿಯಾಶೀಲ ಪ್ರಜಾಸತ್ತೆಯಾಗಿ ಭಾರತವು ಬೆಳೆದಿದೆ.

ರಾಷ್ಟ್ರೀಯ ಏಕತೆಯನ್ನು ಪೋಷಿಸುವ ಶಕ್ತಿಗಳು ಹಲವಾರಿವೆ. ಅವು ಯಾವುವೆಂದರೆ:

1.ಸಂವಿಧಾನ 2.ನಮ್ಮ ಸಂಪದ್ಯುಕ್ತ ಸಾಂಸ್ಕೃತಿಕ ಪರಂಪರೆಯ ಪ್ರಜ್ಞೆ 3.ರಾಷ್ಟ್ರೀಯ ಚಿಹ್ನೆಗಳಿಗೆ ಗೌರವ 4. ರಾಷ್ಟ್ರೀಯ ಹಬ್ಬಗಳ ಆಚರಣೆ 5. ಪ್ರಾಂತ್ಯಗಳ ಪರಸ್ಪರಾವಲಂಬನವನ್ನು ಪೋಷಿಸುವುದು ಮತ್ತು 6. ಆರ್ಥಿಕ ಪ್ರಗತಿ.

### ಸಂವಿಧಾನ

ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ರೂಪಿಸಲಾದ ಜಾತ್ಯಾತೀತತೆ, ಸಮಾಜವಾದ, ಪ್ರಜಾಪ್ರಭುತ್ವ, ಉದಾರವಾದ, ಗಣತಂತ್ರವಾದ ಮೊದಲಾದ ಮೌಲ್ಯಗಳನ್ನು 'ಸಂವಿಧಾನ'ವು ಎತ್ತಿ ಹಿಡಿಯುತ್ತದೆ. ಭಾರತದಲ್ಲಿ ಎಲ್ಲರಿಗೂ ಅನ್ವಯವಾಗುವಂಥ ಒಂದು ಸಂವಿಧಾನವಿದೆ. ಜಾತಿ, ಮತ, ವರ್ಣ, ಧರ್ಮ ಅಥವಾ ಪ್ರದೇಶಗಳನ್ನು ಮೀರಿ ಅದು ಎಲ್ಲರಿಗೂ ಅನ್ವಯವಾಗುತ್ತದೆ. ಭಾರತದ ಪ್ರತಿಯೊಬ್ಬ ಪ್ರಜೆಯೂ ಭಾರತದ ಪ್ರಜೆ. ಈ ಪೌರತ್ವ ಆತನಿಗೆ ಗೌರವ ಸ್ಥಾನ ಮತ್ತು ಸಮಾನತೆಯನ್ನು ತಂದುಕೊಡುತ್ತದೆ. ಕೇಂದ್ರದ ಮತ್ತು ರಾಜ್ಯಗಳ ಶಾಸಕರು ಮತ್ತು ಸಚಿವರುಗಳು ಸಾರ್ವತ್ರಿಕ ಮತದಾನದ ನಿಯಮದಂತೆ ಜನರಿಂದ ಆರಿಸಿ ಬಂದವರೇ ಆಗಿರುತ್ತಾರೆ. ಇದರಿಂದ ಪ್ರತಿಯೊಬ್ಬ ಪೌರನಿಗೆ ದೇಶದ ವಿದ್ಯಮಾನಗಳಲ್ಲಿ ತನ್ನ ಮಾತಿಗೂ ಬೆಲೆಯಿದೆ ಎಂದು ಹೇಳಲು ಅವಕಾಶವಿದೆ. ಚಿಂತನ ಸ್ವಾತಂತ್ರ್ಯ, ಧರ್ಮ ಹಾಗೂ ಪೂಜಾ ಸ್ವಾತಂತ್ರ್ಯಗಳನ್ನು ಸಂವಿಧಾನವು ಎಲ್ಲರಿಗೂ ಸಮಾನವಾಗಿ ಕೊಟ್ಟಿದೆ. ಆದುದರಿಂದ ನಮ್ಮ ಸಂವಿಧಾನವು ಎಲ್ಲರನ್ನೂ ಒಗ್ಗೂಡಿಸುವ ಒಂದು ಶಕ್ತಿಯಾಗಿದ್ದು, ಜನತೆಯಲ್ಲಿ ಧ್ಯೇಯ ಪ್ರಜ್ಞೆಯನ್ನು ಮೂಡಿಸುತ್ತದೆ.

### ಭಾರತದ ಶ್ರೀಮಂತ ಸಾಂಸ್ಕೃತಿಕ ಪರಂಪರೆಯ ಬಗೆಗೆ ಎಚ್ಚರ ಬೆಳೆಸುವುದು

ವಿವಿಧ ಕಾಲಗಳಲ್ಲಿದ್ದ ಸಾಹಿತ್ಯ ಪುಂಗವರ ಕೃತಿ, ಕಾಣಿಕೆಗಳಿಂದ ಪುಷ್ಟಿಗೊಂಡ ಸಾಹಿತ್ಯ ಸಂಪತ್ತನ್ನು ಭಾರತೀಯ ಭಾಷೆಗಳು ತಂದುಕೊಟ್ಟಿವೆ. ನಮ್ಮಲ್ಲಿ ಒಂದು ಶ್ರೀಮಂತವಾದ ಕಲೆ, ಸಂಗೀತ, ನೃತ್ಯ, ಶಿಲ್ಪ, ಚಿತ್ರ, ಜಾನಪದ ಮುಂತಾದ ಪರಂಪರೆಯಿದೆ. ಉದಾರಿಗಳಾದ ರಾಜರುಗಳನ್ನು ಮತ್ತು ನಮ್ಮ ಸಂಸ್ಕೃತಿಯನ್ನು ಅವರು ಪೋಷಿಸಿದ ಬಗೆಯನ್ನು ಹೆಮ್ಮೆಯಿಂದ ಸ್ಮರಿಸಬಹುದು.

ನಾವು ಅಂಥ ಒಂದು ಭವ್ಯ ಸಂಸ್ಕೃತಿ ಪರಂಪರೆಯ ವಾರಸುದಾರರಾಗಿರುವುದು ನಮ್ಮ ಪುಣ್ಯ. ಇದನ್ನು ಉಳಿಸಿ ಬೆಳಸಿ ಮುಂದಿನ ತಲೆಮಾರಿನ ಜನತೆಗೆ ವಹಿಸಿಕೊಡಬೇಕಾದುದು ನಮ್ಮ ಕರ್ತವ್ಯ.

## ನಮ್ಮ ರಾಷ್ಟ್ರೀಯ ಚಿಹ್ನೆಗಳನ್ನು ಗೌರವಿಸುವುದು

ಸ್ವತಂತ್ರ ಭಾರತದಲ್ಲಿ ಏಕತೆ ಮತ್ತು ಗೌರವಗಳನ್ನು ಸೂಚಿಸುವುದಕ್ಕಾಗಿ ಕೆಲವು ರಾಷ್ಟ್ರೀಯ ಚಿಹ್ನೆಗಳನ್ನು ರೂಪಿಸಲಾಗಿದೆ. ದೇಶದೊಂದಿಗೆ ನಮ್ಮನ್ನು ಗುರುತಿಸಿಕೊಳ್ಳುವಂತೆ ಮಾಡುವುದು, ಧ್ಯೇಯಗಳನ್ನು ಪ್ರೀತಿಸುವುದು, ದೇಶಪ್ರೇಮ ಆತ್ಮಗೌರವಗಳನ್ನು ಬೆಳೆಸುವುದು ಮೊದಲಾದ ಮನೋವೈಜ್ಞಾನಿಕ ಅಂಶಗಳ ಆಧಾರದ ಮೇಲೆ ಈ ಚಿಹ್ನೆಗಳನ್ನು ರೂಪಿಸಲಾಗಿದೆ. ಅಂತಹ ರಾಷ್ಟ್ರೀಯ ಚಿಹ್ನೆಗಳು ಯಾವುವೆಂದರೆ:

1. ರಾಷ್ಟ್ರ ಧ್ವಜ
2. ರಾಷ್ಟ್ರ ಗೀತೆ
3. ರಾಷ್ಟ್ರ ಚಿಹ್ನೆ

**ರಾಷ್ಟ್ರ ಧ್ವಜವು** ನಮ್ಮ ದೇಶದ ಧ್ಯೇಯಗಳನ್ನೂ, ಮೌಲ್ಯಗಳನ್ನೂ ಸಂಕೇತಿಸುತ್ತದೆ. ಅದು ತ್ರಿವರ್ಣ ಧ್ವಜ. ಮೇಲ್ಭಾಗದಲ್ಲಿ ಕೇಸರಿ ವರ್ಣ, ಮಧ್ಯದಲ್ಲಿ ಶ್ವೇತವರ್ಣ ಹಾಗೂ ಕೆಳಭಾಗದಲ್ಲಿ ಹಸಿರು ವರ್ಣದ ಅಡ್ಡಹಾಸುಗಳಿವೆ. ಕೇಸರಿ ಬಣ್ಣವು ತ್ಯಾಗ, ಧೈರ್ಯ ಮತ್ತು ತಪಸ್ಸಿನ ಸಂಕೇತ. ಬಿಳಿಯ ಬಣ್ಣವು ಸತ್ಯ ಮತ್ತು ಚಿಂತನ ಶುದ್ಧಿಗಳ ಪ್ರತೀಕ. ಹಸಿರು ಬಣ್ಣವು ಜೀವಂತಿಕೆ, ಸಮೃದ್ಧಿ ಹಾಗೂ ಪ್ರಗತಿಗಳ ಸಂಕೇತ. ಧ್ವಜದ ಮಧ್ಯಭಾಗದಲ್ಲಿ 24 ಅರಗಳ ಒಂದು ಚಕ್ರದ ಚಿಹ್ನೆಯು ನೀಲವರ್ಣದ್ದಾಗಿದ್ದು ಅದು ಚಲನಶೀಲತೆ ಮತ್ತು ಏಳಿಗೆಗಳನ್ನು ಧ್ವನಿಸುತ್ತದೆ. ಈ ಧ್ವಜವು ಪ್ರತಿ ನಾಗರಿಕನಲ್ಲೂ ದೇಶಪ್ರೇಮ ಮತ್ತು ಗೌರವ ಭಾವಗಳನ್ನು ಮೂಡಿಸುತ್ತದೆ. ಇದನ್ನು ನಮ್ಮ ರಾಷ್ಟ್ರದ ಕೀರ್ತಿ ಎಂದು ತಿಳಿದು ಅದನ್ನು ಕಾಪಾಡಲು ನಾವು ಸಿದ್ಧರಾಗಿರಲೇಬೇಕು. ಅದಕ್ಕಾಗಿ 'ಮಾಡು ಇಲ್ಲವೇ ಮಡಿ' ಎನ್ನಬಲ್ಲ ಸಿದ್ಧತೆ ನಮ್ಮದಾಗಿರಬೇಕು.

**ರಾಷ್ಟ್ರಗೀತೆ:** 'ಜನಗಣಮನ' ಎಂಬ ರಾಷ್ಟ್ರಗೀತೆಯ ರಚಯಿತರು ಶ್ರೀ ರವೀಂದ್ರನಾಥ ಠಾಕೂರರು. 1950ರ ಜನವರಿ 24 ರಂದು ಇದನ್ನು ರಾಷ್ಟ್ರಗೀತೆಯಾಗಿ ಆರಿಸಲಾಯಿತು. ಇದಕ್ಕೆ ಮೊದಲು 1911ನೇ ಇಸವಿ ಡಿಸೆಂಬರ್ 27ರಂದು ಕಲ್ಕತ್ತಾದಲ್ಲಿ ನಡೆದ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಇದನ್ನು ಹಾಡಲಾಗಿತ್ತು. ನಮ್ಮ ರಾಷ್ಟ್ರಗೀತೆಯು ನಮ್ಮ ರಾಷ್ಟ್ರರಕ್ಷಕನನ್ನು ಕುರಿತು ಹೇಳುತ್ತದೆ ಮತ್ತು ಭಾರತದ ಜನತೆ ಎಲ್ಲೆಲ್ಲಿಯವರೆಂಬುದನ್ನು ಹೇಳುತ್ತದೆ. ದೇಶಪ್ರೇಮವನ್ನು ಉಕ್ಕಿಸುವ ಹಾಡು ಇದು. ಇದು ಗೀತಮಯವಾಗಿರುವುದೇ ಅಲ್ಲದೆ ಅರ್ಥಪೂರ್ಣವೂ ಆಗಿದೆ.

**ರಾಷ್ಟ್ರಚಿಹ್ನೆ:** ಅಶೋಕ ಚಕ್ರವರ್ತಿಯು ನಿರ್ಮಿಸಿದ ಸಾರನಾಥ್ ಸ್ತೂಪದಿಂದ ನಮ್ಮ ರಾಷ್ಟ್ರಚಿಹ್ನೆಯನ್ನು ತೆಗೆದುಕೊಳ್ಳಲಾಗಿದೆ. ಇದನ್ನು 1950 ರ ಜನವರಿ 26 ರಂದು ಸ್ವೀಕರಿಸಲಾಯಿತು. ಈ ಚಿಹ್ನೆಯಲ್ಲಿ ಹಿಂಗಾಲ ಮೇಲೆ ಕುಳಿತ ನಾಲ್ಕು ಸಿಂಹಗಳ ಚಿತ್ರವಿದೆ. ವೈವಿಧ್ಯದಲ್ಲಿ ಏಕತೆಯ ಭಾವವನ್ನು ಇದು ಬಿಂಬಿಸುತ್ತದೆ. ಇವುಗಳ ಕೆಳಗೆ ಪ್ರಸಿದ್ಧವಾದ

ಅಶೋಕಚಕ್ರ (ಧರ್ಮಚಕ್ರ)ವನ್ನು ಕಾಣಬಹುದಾಗಿದೆ. ಅದರ ತಳಧಲ್ಲಿ ''ಸತ್ಯಮೇವ ಜಯತೇ'' ಎಂಬ ಸೂಕ್ತಿಯಿದೆ. ಅಂದರೆ ಯಾವಾಗಲೂ ಸತ್ಯಕ್ಕೆ ಜಯ ಎಂದರ್ಥ.

**ರಾಷ್ಟ್ರೀಯ ಹಬ್ಬಗಳ ಆಚರಣೆ**

ಹಬ್ಬ ಎಂದರೆ ಬದುಕಿನ ಸಂಭ್ರಮದ ಆಚರಣೆ. ಇದಕ್ಕೆ ಸಾಮಾಜಿಕ ಮಹತ್ವವೂ ಇದೆ. ರಾಷ್ಟ್ರೀಯ ಮಹತ್ವದ ಹಬ್ಬಗಳನ್ನಾಚರಿಸುವುದರಿಂದ ನಾವೆಲ್ಲರೂ ಒಂದು ಎಂಬ ಸಂಭ್ರಮ್ಮದಿಂದ ಪಾಲ್ಗೊಳ್ಳುವ ಅವಕಾಶ ದೊರೆಯುತ್ತದೆ. ಭಾರತೀಯರಿಗೆ ಮುಖ್ಯವಾದ ರಾಷ್ಟ್ರೀಯ ಹಬ್ಬಗಳೆಂದರೆ ಸ್ವಾತಂತ್ರ್ಯ ದಿನಾಚರಣೆ ಮತ್ತು ಗಣರಾಜ್ಯ ದಿನಾಚರಣೆ. ನಮ್ಮ ರಾಷ್ಟ್ರನಾಯಕರ ಜನ್ಮ ಜಯಂತಿಗಳನ್ನಾಚರಿಸುವುದರಿಂದ ನಮ್ಮ ಸಂಸ್ಕೃತಿಯನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತದೆ. ಇಂಥ ಸಾಮಾಜಿಕ ಉತ್ಸವಗಳು ಎಲ್ಲ ಜಾತಿ, ಮತ, ಧರ್ಮ, ಭಾಷೆ ಮತ್ತು ಭಿನ್ನ ವಯೋಮಾನಗಳ ಜನತೆಯನ್ನು ಹತ್ತಿರ ತರುತ್ತವೆ.

**ಪ್ರಾಂತ್ಯಗಳ ಪರಸ್ಪರ ಅವಲಂಬನೆಯನ್ನು ಪೋಷಿಸುವುದು**

ರಾಷ್ಟ್ರದ ಯಾವ ಪ್ರಾಂತ್ಯವೂ ತನ್ನಷ್ಟಕ್ಕೆ ಸ್ವತಂತ್ರವಾದ ಒಂದು ಘಟಕವಲ್ಲ. ತನ್ನ ಅನೇಕ ಅವಶ್ಯಕತೆಗಳಿಗೆ ಅದು ಬೇರೆ ರಾಜ್ಯಗಳ ಸಹಾಯವನ್ನು ಅಪೇಕ್ಷಿಸುತ್ತದೆ. ಸಮಗ್ರ ದೇಶದ ಪ್ರಗತಿಗೆ ರಾಷ್ಟ್ರದ ಬೇರೆ ಬೇರೆ ಪ್ರಾಂತ್ಯಗಳ ಪರಸ್ಪರ ಅವಲಂಬನೆ ಬಹಳ ಮುಖ್ಯ. ಪರಸ್ಪರ ಅವಲಂಬನೆಯ ಕ್ಷೇತ್ರಗಳೆಂದರೆ ವ್ಯವಹಾರ, ವಾಣಿಜ್ಯ, ಕೈಗಾರಿಕೆ, ಕೃಷಿ, ಸಾರಿಗೆ, ನದಿಯ ನೀರು ಇತ್ಯಾದಿ. ಪ್ರವಾಸ ಮತ್ತು ತೀರ್ಥ ಪರ್ಯಟನಗಳನ್ನೂ ಈ ಪಟ್ಟಿಗೆ ಸೇರಿಸಬಹುದು. ಅಂಥ ಪರಸ್ಪರ ಅವಲಂಬನೆ ಮತ್ತು ಸಹಕಾರಗಳು ಸಂಪತ್ತನ್ನು ಉತ್ಪಾದಿಸುವುದರೊಂದಿಗೆ ಅದರ ವಿಂಗಡನೆಗೂ ಸಹಕಾರಿಯಾಗುತ್ತವೆ.

**ಆರ್ಥಿಕ ಪ್ರಗತಿ**

ಬಡತನ ಯಾವುದೇ ರಾಷ್ಟ್ರಕ್ಕೆ ಶತ್ರು. ಸಂಪತ್ತು ತುಂಬ ಅಸಮವಾಗಿ ಹಂಚಿ ಹೋದಾಗ ಸಾಮಾಜಿಕ ಸೌಹಾರ್ದಕ್ಕೆ ಧಕ್ಕೆಯಾಗುತ್ತದೆ. ವ್ಯವಸ್ಥಿತವಾದ ಮತ್ತು ರಚನಾತ್ಮಕವಾದ ಆರ್ಥಿಕ ಪ್ರಗತಿಯು ದೇಶದ ಏಳಿಗೆಗೆ ಅಗತ್ಯ. ಇದರ ಫಲವಾಗಿ ಸರಕಾರಿ ಹಾಗೂ ಖಾಸಗಿ ಘಟಕಗಳು ನಮ್ಮ ಅರ್ಥ ವ್ಯವಸ್ಥೆಯಲ್ಲಿ ಸಹಬಾಳ್ವೆ ನಡೆಸುತ್ತಿವೆ. ಮಿಶ್ರ ಆರ್ಥಿಕ ವ್ಯವಸ್ಥೆಯ ಸೂತ್ರದಲ್ಲಿ ಮುಕ್ತವಾದ ಮತ್ತು ನಿಯಂತ್ರಿಕವಾದ ಅರ್ಥವ್ಯವಸ್ಥೆಗಳೆರಡರ ಸೌಲಭ್ಯಗಳೂ ಇವೆ. ಸಾರ್ವಜನಿಕ ಘಟಕಗಳು ಬಡವರ್ಗಗಳ ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸುವುದರ ಜೊತೆಗೆ ಸಂಪತ್ತನ್ನು ಉತ್ಪಾದಿಸುತ್ತವೆ. ಬಡವರಿಗೆ ಆರ್ಥಿಕ ಸೌಲಭ್ಯ ಒದಗಿಸುವ ಸಲುವಾಗಿ ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಗಿದೆ. ನಾವು ಈಗಾಗಲೇ ಏಳು ಪಂಚವಾರ್ಷಿಕ ಯೋಜನೆಗಳನ್ನು ಪೂರೈಸಿ ವ್ಯವಸ್ಥಿತ ಆರ್ಥಿಕ ಬೆಳವಣಿಗೆಗಾಗಿ ಎಂಟನೆಯದನ್ನು ಆರಂಭಿಸಿದ್ದೇವೆ. ಸುಖೀರಾಜ್ಯದ ಕಲ್ಪನೆಯ ಇಂಥ ನಿಲುವುಗಳಿಂದ ರಾಷ್ಟ್ರಿಯ ಏಕತೆಯನ್ನು ಸಾಧಿಸುವುದು ಸಾಧ್ಯವಾಗುತ್ತದೆ.

ಪ್ರತಿ ರಾಷ್ಟ್ರಕ್ಕೂ ಏಕತೆ ಅಗತ್ಯ. ಬೇರೆ ದೇಶಗಳಿಗಿಂತ ನಮ್ಮ ದೇಶಕ್ಕೆ ಅದು ಅತ್ಯಗತ್ಯ. ಏಕೆಂದರೆ ಭೌಗೋಳಿಕ ವಿಸ್ತಾರ, ಪ್ರಾಂತ್ಯ ಸಂಸ್ಕೃತಿಗಳ ವೈವಿಧ್ಯ, ನಾಗರಿಕತೆಯ ಸುದೀರ್ಘ ಇತಿಹಾಸ ಮತ್ತು ಮತಧರ್ಮಗಳ ಬಾಹುಳ್ಯ ನಮ್ಮಲ್ಲೇ ಬಹಳ ಹೆಚ್ಚು. ಈ ಘನ ಕಾರ್ಯದಲ್ಲಿ ನಮ್ಮನ್ನು ತೊಡಗಿಸಿಕೊಳ್ಳೋಣ. ಹಾಗೆ ಮಾಡಿ ಜಗತ್ತಿಗೇ ಮಾದರಿಯಾಗುವಂತೆ ಭಾರತವನ್ನು ಕಟ್ಟೋಣ.

## ಅಭ್ಯಾಸ

**I. ಇವುಗಳಿಗೆ ಉತ್ತರಿಸಿ.**

1. ಭಾರತದ ವಿವಿಧ ಭಾಗಗಳಲ್ಲಿ ವ್ಯತ್ಯಾಸಗಳು ಕಂಡುಬರಲು ಕಾರಣವೇನು ?
2. ಭಾರತೀಯ ಸಂಸ್ಕೃತಿಯ ವಿವಿಧ ಅಂಶಗಳಾವುವು ?
3. ಭಾರತಕ್ಕೆ ಬಂದು ನೆಲೆಸಿದ ವಿದೇಶೀಯರು ಯಾರು ? ಅವರು ನಮ್ಮ ಸಂಸ್ಕೃತಿಗೆ ನೀಡಿರುವ ಕಾಣಿಕೆ ಏನು ?
4. ನಮ್ಮ ರಾಷ್ಟ್ರೀಯ ಚಿಹ್ನೆಗಳ ಮಹತ್ವವನ್ನು ವಿವರಿಸಿ.
5. ರಾಷ್ಟ್ರೀಯ ಏಕತೆ ಎಂದರೇನು ?
6. ರಾಷ್ಟ್ರೀಯ ಏಕತೆಗೆ ನೆರವಾಗುವ ಅಂಶಗಳು ಯಾವುವು ?
7. ಭಾರತದಲ್ಲಿ ರಾಷ್ಟ್ರೀಯ ಏಕತೆಗೆ ಭಂಗ ತರುವ ಅಂಶಗಳು ಯಾವುವು ?
8. ನಮ್ಮ ಸಂವಿಧಾನದಲ್ಲಿ ಉಕ್ತವಾಗಿರುವ ರಾಷ್ಟ್ರೀಯ ಏಕತೆಗೆ ಪೋಷಕವಾಗುವ ಅಂಶಗಳನ್ನು ವಿವರಿಸಿ.
9. ರಾಷ್ಟ್ರೀಯ ಚಿಹ್ನೆಗಳ ಮೂಲಕ ರಾಷ್ಟ್ರೀಯ ಏಕತೆಯನ್ನು ಬೆಳೆಸುವುದು ಹೇಗೆ ?
10. ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವುದರಿಂದ ರಾಷ್ಟ್ರೀಯ ಏಕತೆ ಹೇಗೆ ಮೂಡುತ್ತದೆ ?
11. ಅಂತರ ಪ್ರಾಂತ್ಯ ಪರಸ್ಪರಾವಲಂಬನೆಯಿಂದ ರಾಷ್ಟ್ರೀಯ ಏಕತೆಯನ್ನು ಸಾಧಿಸಲು ಹೇಗೆ ಸಾಧ್ಯವಾಗುತ್ತದೆ ?
12. ಆರ್ಥಿಕ ಪ್ರಗತಿ ಹಾಗೂ ರಾಷ್ಟ್ರೀಯ ಏಕತೆಗಳು ಹೇಗೆ ಪರಸ್ಪರ ಅವಲಂಬಿಗಳಾಗಿವೆ ?

**II. ಬಿಟ್ಟಿರುವ ಜಾಗಗಳನ್ನು ಭರ್ತಿ ಮಾಡಿ.**

1. ಭಾರತವು ಗಾತ್ರದಲ್ಲಿ ಜಗತ್ತಿನ......... ಯದು ಜನಸಂಖ್ಯೆಯಲ್ಲಿ...... ಯದು.
2. ಭಾರತೀಯ ಸಂಸ್ಕೃತಿಯ ಮುಖ್ಯ ಸ್ವರೂಪ.......... ದಲ್ಲಿ ಏಕತೆ.
3. ರಾಷ್ಟ್ರೀಯ ಏಕತೆಯನ್ನು ಬರಿಯ....... ಮತ್ತು ಗಾರೆಗಳಿಂದ ಕಟ್ಟಲು ಸಾಧ್ಯವಿಲ್ಲ.
4. ನಮ್ಮ ರಾಷ್ಟ್ರದ ಮೂರು ರಾಷ್ಟ್ರೀಯ ಚಿಹ್ನೆಗಳೆಂದರೆ........ .......... ...........
5. ನಮ್ಮ ರಾಷ್ಟ್ರಗೀತೆಯನ್ನು ರಚಿಸಿದವರು..........

III. **ಚಟುವಟಿಕೆಗಳು**

1. ಬೇರೆ ಬೇರೆ ಮತಧರ್ಮದವರ ಹಬ್ಬಗಳನ್ನು, ಮದುವೆಗಳನ್ನು ಕಂಡು ಅವುಗಳ ವಿಶಿಷ್ಟ ಅಂಶಗಳನ್ನು ಗುರುತಿಸಿ.
2. ನಿಮ್ಮ ರಾಜ್ಯ ಅಥವಾ ಜಿಲ್ಲೆಯಲ್ಲಿ ಪ್ರವಾಸ ಮಾಡಿ ಅಲ್ಲಿ ಗಮನಿಸಿದ ಕುತೂಹಲಕಾರೀ ಸಂಗ್ರತಿಗಳನ್ನು ಟಿಪ್ಪಣಿ ಮಾಡಿಕೊಳ್ಳಿ.

# ೪. ರಾಷ್ಟ್ರರಕ್ಷಣೆ

ಭಾರತ ಶಾಂತಿಯನ್ನು ಬಯಸುವ ರಾಷ್ಟ್ರ. ಭಾರತವು ಅನುಸರಿಸುತ್ತಿರುವ ವಿದೇಶೀ ನೀತಿ ಜಗತ್ತಿನಲ್ಲಿ ಶಾಂತಿ ಮತ್ತು ಸಹಬಾಳ್ವೆಗಳ ಅಗತ್ಯವನ್ನು ಹೇಳುತ್ತದೆ. ಜಗತ್ತಿನ ಅಲಿಪ್ತ (NAM)ಚಳುವಳಿಯಲ್ಲೂ ಭಾರತವು ಮಹತ್ವದ ಪಾತ್ರವನ್ನು ವಹಿಸಿದೆ. ಪಂಡಿತ ಜವಾಹರಲಾಲ ನೆಹರೂ ಈ ಅಲಿಪ್ತ ಚಳುವಳಿಯ ಸ್ಥಾಪಕರಲ್ಲಿ ಒಬ್ಬರು. ಸಂಧಾನದ ಮೂಲಕವೇ ಎಲ್ಲ ಸಮಸ್ಯೆಗಳನ್ನೂ ಪರಿಹರಿಸಬೇಕೆಂಬುದೇ ಭಾರತದ ಪ್ರಾಮಾಣಿಕ ಆಶಯವಾಗಿದೆ. ಯಾವ ಸಮಸ್ಯೆಯನ್ನು ಎದುರಿಸುವಾಗಲೂ ಕೂಡ ನಾವು ಹಿಂಸಾ ಮಾರ್ಗವನ್ನು ಅನುಮೋದಿಸಿಲ್ಲ. ನಮ್ಮ ನೆರೆ ದೇಶಗಳೊಂದಿಗೆ ವಿವಾದಗಳು ಉಂಟಾದ ಸಂದರ್ಭದಲ್ಲೆಲ್ಲ ನಾವು ತುಂಬ ತಾಳ್ಮೆಯಿಂದ ವರ್ತಿಸಿದ್ದೇವೆ.

ಭಾರತವು ಸುಮಾರು 15200 ಕಿಲೋ ಮೀಟರುಗಳಷ್ಟು ಭೂಮಿಯ ಗಡಿ ಪ್ರದೇಶವನ್ನುಳ್ಳ, 7,500 ಕಿ.ಮೀ.ಗಳಷ್ಟು ಜಲದ ಗಡಿಪ್ರದೇಶವನ್ನುಳ್ಳ ವಿಸ್ತಾರವಾದ ದೇಶವಾಗಿದೆ. ಗಡಿ ಪ್ರದೇಶಗಳ ಭದ್ರತೆ ಬಗೆಗೆ ನಾವು ನಿರ್ಲಕ್ಷ್ಯದಿಂದ ಇರಲು ಸಾಧ್ಯವಿಲ್ಲ. ಹಿಂದೆ ನಮ್ಮ ದೇಶದ ಸಮಗ್ರತೆಗೆ ಸವಾಲುಗಳು ಎದುರಾದಾಗ ನಾವು ಆ ಸವಾಲುಗಳನ್ನು ಎದುರಿಸಬೇಕಾದ ಸಂದರ್ಭಗಳು ಬಂದಿದ್ದವು. ಇಂಥ ಸವಾಲುಗಳನ್ನು ಎದುರಿಸಲು ಸಾಮರ್ಥ್ಯವುಳ್ಳ ಸುವ್ಯವಸ್ಥಿತ ರಕ್ಷಣಾ ಪಡೆ ನಮ್ಮಲ್ಲಿದೆ. ತಾಯಿನಾಡಿಗಾಗಿ ಎಂಥ ತ್ಯಾಗಕ್ಕೂ ಸಿದ್ಧರಾದ ಧೀರ, ಸಮರ್ಥ ಯೋಧರ ಪಡೆ ನಮ್ಮಲ್ಲಿದೆ. ನಮ್ಮ ದೇಶದಲ್ಲಿ ಮತ್ತು ಹೊರ ದೇಶಗಳಲ್ಲಿ ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಹಾಗೂ ಅನಂತರದಲ್ಲಿ ಅದು ತನ್ನ ಸಾಮರ್ಥ್ಯವನ್ನು ಅನೇಕ ಬಾರಿ ಪ್ರದರ್ಶಿಸಿದೆ.

**ಸೇನಾಶಕ್ತಿಗಳ ಪಾತ್ರ**

ನಮ್ಮ ಯೋಧರ ಮುಖ್ಯ ಕಾರ್ಯವೆಂದರೆ ಭಾರತದ ಸಮಗ್ರತೆಯನ್ನು ಕಾಪಾಡುವುದು. ಸೇನಾ ವಿಭಾಗಗಳು ತರುಣ ಭಾರತೀಯರಿಗೆ ತಮ್ಮ ದೇಶ ಪ್ರೇಮ, ಪ್ರಾಮಾಣಿಕತೆ, ಸಾಮರ್ಥ್ಯ ಮತ್ತು ಸಮರ್ಪಣ ಶಕ್ತಿಯನ್ನು ಪ್ರದರ್ಶಿಸುವ ಅವಕಾಶವನ್ನು ನೀಡುತ್ತವೆ.

**ಶಾಂತಿ ಸಮಯದ ಕಾರ್ಯ**

ಕೇವಲ ಯುದ್ಧದ ಸಮಯದಲ್ಲೇ ಅಲ್ಲದೆ ಶಾಂತಿಯ ಸಮಯದಲ್ಲಿಯೂ

ರಕ್ಷಣಾ ಪಡೆಗಳಿಗೆ ದೇಶಕ್ಕಾಗಿ ದುಡಿಯಲು ಅನೇಕ ಜವಾಬ್ದಾರಿಗಳನ್ನು ಕೊಡಲಾಗಿದೆ. ಉದಾಹರಣೆಗೆ ಪ್ರಾಕೃತಿಕ ದುರಂತಗಳ ಕಾಲದಲ್ಲಿ ಅಂದರೆ ಪ್ರವಾಹ, ಬರಗಾಲ, ಭೂಕಂಪ, ಭೂಕುಸಿತ, ಬಿರುಗಾಳಿ ಮೊದಲಾದುವು ಸಂಭವಿಸಿದಾಗ ರಕ್ಷಣಾಪಡೆ ಧಾವಿಸಿ ಸಂಕಟದಲ್ಲಿರುವವರ ಸಹಾಯಕ್ಕೆ ಮುಂದಾಗುತ್ತದೆ. ಪ್ರವಾಹದಲ್ಲಿ ಸಿಕ್ಕಿಕೊಂಡು ಹೊರಬರಲಾದವರಿಗೆ ಮೇಲಿನಿಂದ ಆಹಾರ ಪದಾರ್ಥ, ವಸ್ತ್ರ, ಔಷಧಗಳನ್ನು ಸೇನೆಯು ಪೂರೈಸುವುದನ್ನು ನೀವು ಪತ್ರಿಕೆಗಳಲ್ಲಿ ಓದಿರಬಹುದು. ಸರಕಾರಿ ಅಧಿಕಾರಿಗಳ ಕೈಮೀರಿ ಪರಿಸ್ಥಿತಿ ವಿಕೋಪಕ್ಕೆ ಹೋಗಿ, ನ್ಯಾಯ ಕಾನೂನುಗಳನ್ನು ಕಾಪಾಡುವುದು ತುಂಬ ಕಷ್ಟವೆನಿಸಿದ ಸಂದರ್ಭಗಳಲ್ಲಿ ಸೇನೆಯು ಸರಕಾರಕ್ಕೆ ಸಹಾಯ ಹಸ್ತ ನೀಡುತ್ತದೆ. ಗಡಿಯಾಚೆಯಿಂದ ನುಸುಳಿ ಬರುವ ನಿಷಿದ್ಧ ವಸ್ತುಗಳನ್ನು ತಡೆಗಟ್ಟಲು ಅವರು ಸುಂಕದ ಅಧಿಕಾರಿಗಳೊಂದಿಗೆ ಸಹಕರಿಸುತ್ತಾರೆ. ಸಮುದ್ರದಲ್ಲಿ ಬಿರುಗಾಳಿ ಎದ್ದಾಗ ಬೆಸ್ತರ ದೋಣಿಗಳನ್ನು ಕಾಪಾಡಲು ಧಾವಿಸುತ್ತಾರೆ ಮತ್ತು ರಾಷ್ಟ್ರಕ್ಕೆ ಅಗತ್ಯವಾದ ಪರಿವೀಕ್ಷಣ ಕಾರ್ಯ (ಸರ್ವೆ) ಮತ್ತು ಸಂಶೋಧನ ಕಾರ್ಯಗಳನ್ನು ಮಾಡಿಕೊಡುತ್ತಾರೆ.

## ನಮ್ಮ ರಕ್ಷಣಾ ಪಡೆಗಳು ಮತ್ತು ಅಂತರರಾಷ್ಟ್ರೀಯ ಶಾಂತಿ

ವಿದೇಶಗಳಲ್ಲಿ ಶಾಂತಿಸ್ಥಾಪನಾ ದಳಗಳಾಗಿ ಕೆಲಸ ಮಾಡುವ ಗೌರವಕ್ಕೆ ನಮ್ಮ ಸೇನೆಗಳು ಪಾತ್ರವಾಗಿವೆ. ವಿಶ್ವ ಸಂಸ್ಥೆಯ ಮೇಲ್ವಿಚಾರಣೆಯಲ್ಲಿ ನಮ್ಮ ಯೋಧರು ಗಾಝಾ ಪ್ರದೇಶ, ಕೊರಿಯಾ ಮತ್ತು ಕಾಂಗೋಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಈಚೆಗೆ ಶ್ರೀಲಂಕಾದಲ್ಲಿ ಒಂದು ಮಹತ್ತರ ಪಾತ್ರವನ್ನು ನಿರ್ವಹಿಸಲು ನಮ್ಮ ಯೋಧರನ್ನು ಆಹ್ವಾನಿಸಲಾಗಿತ್ತು. ಶ್ರೀಲಂಕಾದ ಭಾಷಾ ಜನಾಂಗದ ಸಮಸ್ಯೆ, ಶ್ರೀಲಂಕಾ ಮತ್ತು ಭಾರತ ಎರಡಕ್ಕೂ ಚಿಂತೆಗೆ ಕಾರಣವಾಗಿದೆ. 1987ರ ಜುಲೈ 29ರಂದು ಶ್ರೀಲಂಕಾದ ಅಧ್ಯಕ್ಷ ಜಯವರ್ಧನೆ ಹಾಗೂ ಭಾರತದ ಪ್ರಧಾನಿಯಾಗಿದ್ದ ರಾಜೀವ ಗಾಂಧಿಯವರು ಒಂದು ಒಪ್ಪಂದಕ್ಕೆ ಸಹಿ ಹಾಕಿದರು. ಅದರಂತೆ ಭಾರತದ ಶಾಂತಿ ರಕ್ಷಕ ದಳ (IPKF) ವನ್ನು ಶ್ರೀಲಂಕಾ ದ್ವೀಪದಲ್ಲಿ ಶಾಂತಿ ರಕ್ಷಣೆಗಾಗಿ ಕಳುಹಿಸಲಾಯಿತು. 1989ರಲ್ಲಿ ನಮ್ಮ ದಳವು ಹಿಂದಿರುಗಲು ಆರಂಭಿಸಿತು.

ಬಾಂಗ್ಲಾದೇಶದ ಜನಪ್ರಿಯ ನಾಯಕ ಮುಜೀಬುರ್ ರೆಹಮಾನ್ ಅವರಿಗೆ ನಮ್ಮ ಸೇನಾದಳಗಳು ಮಾಡಿದ ಸಹಾಯದಿಂದಾಗಿ ಬಂಗ್ಲಾ ದೇಶವು ಒಂದು ಸ್ವತಂತ್ರ ರಾಷ್ಟ್ರವಾಯಿತು.

## ಆಂತರಿಕ ಶಾಂತಿ ಮತ್ತು ನಮ್ಮ ರಕ್ಷಣಾ ದಳಗಳು

ರಾಷ್ಟ್ರದ ಸಮಗ್ರತೆಯನ್ನು ಕಾಪಾಡುವ ಉದ್ದೇಶದಿಂದ ನಮ್ಮ ರಕ್ಷಣಾ ದಳಗಳು ಪಂಜಾಬ್, ಜಮ್ಮು ಕಾಶ್ಮೀರ, ಮಿಜೋರಾಂ, ನಾಗಾಲಾಂಡ್ ಮೊದಲಾದ ದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ತಪ್ಪು ಹಾದಿ ತುಳಿದ ಜನರನ್ನು ನಮ್ಮ ಮಾತೃಭೂಮಿಯ ವಾಹಿನಿಯಲ್ಲಿ ಸೇರಿಸಲು ಎಲ್ಲ ಪ್ರಯತ್ನಗಳನ್ನು ನಡೆಸಿವೆ.

### ನಮ್ಮ ರಕ್ಷಣಾ ವ್ಯವಸ್ಥೆಯ ರಚನೆ

ಭಾರತದ ರಕ್ಷಣಾ ವ್ಯವಸ್ಥೆಯಲ್ಲಿ ಮೂರು ವಿಭಾಗಗಳಿವೆ. ಅವು ಭೂಸೇನೆ, ನೌಕದಳ ಮತ್ತು ವಾಯುದಳ. ಇವುಗಳ ಜೊತೆಗೆ ತರಬೇತಿ–ಸಂಶೋಧನಾ ವಿಭಾಗ ಮತ್ತು ರಕ್ಷಣಾ ಉತ್ಪಾದನಾ ವಿಭಾಗ ಎಂಬ ಇನ್ನೆರಡು ಘಟಕಗಳೂ ಇವೆ.

ರಾಷ್ಟ್ರಾಧ್ಯಕ್ಷರು ಈ ಮೂರು ರಕ್ಷಣಾ ದಳಗಳ ಮಹಾದಂಡನಾಯಕರು. ಪ್ರಧಾನಮಂತ್ರಿಯ ಅಧ್ಯಕ್ಷತೆಯಲ್ಲಿ ರಾಜಕೀಯ ವ್ಯವಹಾರಗಳ ಉಪಸಮಿತಿಯು ತುಂಬ ಮಹತ್ವದ ವಿಚಾರ ಹಾಗೂ ಧ್ಯೇಯಕ್ಕೆ ಸಂಬಂಧಿಸಿದ ವಿಚಾರಗಳನ್ನು ನಿರ್ಧರಿಸುತ್ತದೆ. ರಕ್ಷಣಾ ವಿಭಾಗದ ಆಡಳಿತವನ್ನು ರಕ್ಷಣಾ ಮಂತ್ರಿ ನೋಡಿಕೊಳ್ಳುತ್ತಾರೆ. ತಮ್ಮ ಸಚಿವಾಲಯದ ಸಹಾಯದಿಂದ ಅವರು ವಿವಿಧ ರಕ್ಷಣಾ ಘಟಕಗಳ ಕಾರ್ಯವನ್ನು ಸಂಯೋಜಿಸುತ್ತಾರೆ.

ಸೇನಾ ಸಿಬ್ಬಂದಿಯ ಮುಖ್ಯಸ್ಥರು 'ದಂಡನಾಯಕ'ರು. (ಜನರಲ್) ನೌಕಾಸಿಬ್ಬಂದಿಯ ಮುಖ್ಯಸ್ಥರು 'ಅಡ್ಮಿರಲ್' ಹಾಗೆಯೇ ವಿಮಾನ ಸಿಬ್ಬಂದಿಯ ಮುಖ್ಯಸ್ಥರನ್ನು 'ಏರ್ ಚೀಫ್ ಮಾರ್ಷಲ್' ಎನ್ನುತ್ತಾರೆ. ಈ ಮೂವರು ಮುಖ್ಯಸ್ಥರ ಕಾರ್ಯಸ್ಥಳ ದೆಹಲಿಯಲ್ಲಿದೆ.

### ಪುರಸ್ಕಾರಗಳು

ಮೂರು ವಿಭಾಗಗಳ ರಕ್ಷಣಾ ಸಿಬ್ಬಂದಿಗಳಿಗೆ ಅವರ ಶೌರ್ಯ ಹಾಗೂ ಮಹತ್ತರ ಸಾಧನೆಗಳಿಗಾಗಿ ಕೆಳಕಂಡ ಪ್ರಶಸ್ತಿಗಳನ್ನೂ, ಪದಕಗಳನ್ನೂ ನೀಡಲಾಗುತ್ತದೆ.

### ಪದಕಗಳು

ಪರಮ ವಿಶಿಷ್ಟ ಸೇವಾ ಪದಕ
ಅತಿ ವಿಶಿಷ್ಟ ಸೇವಾ ಪದಕ
ವಿಶಿಷ್ಟ ಸೇವಾ ಪದಕ

### ಭಾರತೀಯ ಭೂಸೇನೆ

ಆಡಳಿತದ ದೃಷ್ಟಿಯಿಂದ ಭಾರತೀಯ ಸೇನೆಯನ್ನು ಐದು ಕಮಾಂಡ್‌ಗಳಾಗಿ ರೂಪಿಸಲಾಗಿದೆ. ಅವು ಯಾವುವೆಂದರೆ:

ಪಶ್ಚಿಮ ಕಮಾಂಡ್, ಪೂರ್ವ ಕಮಾಂಡ್, ಕೇಂದ್ರ ಕಮಾಂಡ್, ಉತ್ತರ ಕಮಾಂಡ್ ಹಾಗೂ ದಕ್ಷಿಣ ಕಮಾಂಡ್.

ಈ ಕಮಾಂಡ್‌ಗಳನ್ನು ಮತ್ತೆ 'ಏರಿಯಾ'ಗಳಾಗಿಯೂ 'ಏರಿಯಾ'ಗಳನ್ನು 'ಸಬ್‌ಏರಿಯಾ'ಗಳಾಗಿಯೂ ಒಳವಿಭಜನೆ ಮಾಡಲಾಗಿದೆ. ಮೇಜರ್ ಜನರಲ್‌ರವರು ಕಮಾಂಡಿನ ಮುಖ್ಯಸ್ಥರಾಗಿರುತ್ತಾರೆ. ಪ್ರತಿ 'ಏರಿಯಾ'ದಲ್ಲೂ ಲೆಫ್ಟಿನೆಂಟ್ ಜನರಲ್ ಮುಖ್ಯಸ್ಥರಾಗಿರುತ್ತಾರೆ. ಪ್ರತಿ 'ಸಬ್‌ಏರಿಯಾ'ದ ಮುಖ್ಯಸ್ಥನನ್ನು 'ಬ್ರಿಗೇಡಿಯರ್' ಎಂದು ಕರೆಯಲಾಗುತ್ತದೆ.

ಪುಣೆಯ ಸಮೀಪವಿರುವ ಖಡಕವಾಸ್ಲದಲ್ಲಿರುವ ಡಿಫೆನ್ಸ್ ಅಕಾಡೆಮಿ, ಊಟಿಯ

ಬಳಿ ವೆಲ್ಲಿಂಗ್ಟನ್ನಿನಲ್ಲಿರುವ ರಕ್ಷಣಾ ಸೇವಾ ಸಿಬ್ಬಂದಿ ಕಾಲೇಜು ಮತ್ತು ನವದೆಹಲಿಯಲ್ಲಿರುವ ರಾಷ್ಟ್ರೀಯ ರಕ್ಷಣಾ ಕಾಲೇಜು ಇವುಗಳು ಮಹತ್ವದ ತರಬೇತಿ ಕೇಂದ್ರಗಳಾಗಿವೆ.

**ಭಾರತೀಯ ನೌಕಾದಳ**

ನಮ್ಮ ಕರಾವಳಿ ಸುಮಾರು 7500 ಕಿ.ಮೀ.ಗಳಷ್ಟು ವಿಸ್ತಾರವಾದದ್ದು. ಈ ಪ್ರದೇಶವನ್ನು ಹಾಗೂ ಅಂಡಮಾನ್ ನಿಕೋಬಾರ್ ಮತ್ತು ಲಕ್ಷದ್ವೀಪಗಳನ್ನು ರಕ್ಷಿಸಲು ಬಲಿಷ್ಠವಾದ ಒಂದು ನೌಕಾಸೇನೆ ಅಗತ್ಯ. ನೌಕದಳವನ್ನು ಮೂರು 'ಏರಿಯಾ' ಕಮಾಂಡ್‌ಗಳಾಗಿ ವಿಭಜಿಸಲಾಗಿದೆ. ಅವು ಯಾವುವೆಂದರೆ ಪಶ್ಚಿಮ, ಪೂರ್ವ ಮತ್ತು ದಕ್ಷಿಣ ಏರಿಯಾ ಕಮಾಂಡ್‌ಗಳು ಈ ಕಮಾಂಡ್‌ಗಳ ಕಾರ್ಯಸ್ಥಳಗಳು ಮುಂಬಯಿ, ವಿಶಾಖಪಟ್ಟಣ ಮತ್ತು ಕೊಚಿನ್‌ಗಳಲ್ಲಿವೆ. ಭಾರತೀಯ ನೌಕೆಗೆ ಎರಡು ಫ್ಲೀಟ್‌ಗಳಿವೆ. ಪಶ್ಚಿಮದ ಫ್ಲೀಟ್ ಮತ್ತು ಪೂರ್ವದ ಫ್ಲೀಟ್. ಅವುಗಳಲ್ಲಿ ಐ.ಎನ್.ಎಸ್. – ವಿಕ್ರಾಂತ್ ಮತ್ತು ಐ.ಎನ್.ಎಸ್. – ವಿರಾಟ್ ಎಂಬ ವಿಮಾನ ವಾಹಕಗಳಿವೆ.

ಭಾರತೀಯ ನೌಕಾದಳದ ನೌಕಾಧಿಕಾರಿಗಳಿಗಾಗಿ ಎರಡು ತರಬೇತಿ ಕೇಂದ್ರಗಳಿವೆ. ಅವು ಯಾವುವೆಂದರೆ ಕೇರಳದ ಐ.ಎನ್.ಎಸ್. ವೆಂಡುರ್ತಿ ಮತ್ತು ಮಹಾರಾಷ್ಟ್ರದ ಲೋನಾವಳದಲ್ಲಿರುವ ಐ.ಎನ್.ಎಸ್. – ಶಿವಾಜಿ.

ಅಂತರ–ರಾಷ್ಟ್ರೀಯ ವಿದ್ಯಮಾನಗಳ ತಿಳುವಳಿಕೆಗಾಗಿ ನಮ್ಮ ನೌಕಾ ಸಿಬ್ಬಂದಿ ವಿದೇಶಗಳನ್ನು ಸಂದರ್ಶಿಸುತ್ತಾರೆ. ಇದನ್ನು 'ಧ್ವಜ ಪ್ರದರ್ಶನ' (Showing the Flag) ಎಂದು ಕರೆಯಲಾಗುತ್ತದೆ.

ನೌಕಾ ಸಿಬ್ಬಂದಿಯಲ್ಲಿ ಸೇರ್ಪಡೆಯಾಗುವುದು ಒಂದು ಸಾಹಸಮಯ ಹಾಗೂ ಸವಾಲಿನ ಕಾರ್ಯವಾಗಿದೆ.

**ಭಾರತೀಯ ವಾಯುಸೇನೆ**

ಭೂಸೇನೆ ಹಾಗೂ ನೌಕಾದಳದ ನಡುವೆ ವಾಯುದಳವು ಸಂಪರ್ಕವನ್ನು ಕಲ್ಪಿಸುತ್ತದೆ. ವಾಯುದಳವನ್ನು ಕಮಾಂಡುಗಳಲ್ಲಿ ವ್ಯವಸ್ಥೆಗೊಳಿಸಲಾಗಿದೆ. ಪಶ್ಚಿಮ ಕಮಾಂಡ್ (ದೆಹಲಿ), ಪೂರ್ವ ಕಮಾಂಡ್ (ಷಿಲ್ಲಾಂಗ್) ಕೇಂದ್ರ ಕಮಾಂಡ್ (ಅಲಹಾಬಾದ್) ನಿರ್ವಹಣಾ ಕಮಾಂಡ್ (ನಾಗಪುರ) ಮತ್ತು ತರಬೇತಿ ಕಮಾಂಡ್ (ಬೆಂಗಳೂರು). ವಾಯುಸೇನಾ ಸಿಬ್ಬಂದಿಗೆ ತರಬೇತಿ ಕೊಡುವ ಕೇಂದ್ರಗಳಲ್ಲಿ ಪ್ರಮುಖವಾದವುಗಳೆಂದರೆ ಬೆಂಗಳೂರು ಮತ್ತು ಹೈದರಾಬಾದ್ ಕೇಂದ್ರಗಳು.

ವಿಜ್ಞಾನ ಮತ್ತು ತಂತ್ರಜ್ಞಾನಗಳು ತುಂಬ ಮುಂದುವರಿದಿರುವುದರಿಂದ ಇಂದಿನ ಯುದ್ಧಗಳಲ್ಲಿ ವಾಯುಸೇನೆಯ ಮಹತ್ವವು ತುಂಬ ಹೆಚ್ಚಿದೆ. ಯುದ್ಧಗಳಲ್ಲಿ ವಿಜಯ ತಂದುಕೊಡುವಲ್ಲಿ ಯುದ್ಧ ವಿಮಾನಗಳ ಪಾತ್ರ ಹಿರಿದು.

**ನಮ್ಮ ರಕ್ಷಣಾ ಸಂಸಿದ್ಧತೆ**

ಹಿಂದೆ ಹೇಳಿದಂತೆ ನಮ್ಮ ಗಡಿ ಭಾಗಗಳಲ್ಲಿ ರಕ್ಷಣಾ ಸೇನೆಗಳು ಹಿಂದೆ ಅನೇಕ

ಸವಾಲುಗಳನ್ನು ಎದುರಿಸಬೇಕಾಗಿತ್ತು. ರಾಷ್ಟ್ರ ರಕ್ಷಣೆಯ ವಿಷಯದಲ್ಲಿ ನಮ್ಮ ಸೈನಿಕರು ಯಾವುದೇ ಸಂಭವನೀಯ ಪರಿಸ್ಥಿತಿಯನ್ನು ಎದುರಿಸಬಲ್ಲ ಸಾಮರ್ಥ್ಯ ಹೊಂದಿದ್ದಾರೆ. ಆದರೆ ಅತ್ಯಾಧುನಿಕ ಯುದ್ಧಗತಿಯ ಯಾವುದೇ ಅಪಾಯವನ್ನು ಎದುರಿಸಬಲ್ಲ ಸಂಸಿದ್ಧತೆಯನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ನಮ್ಮ ರಕ್ಷಣಾ ವ್ಯವಸ್ಥೆಯನ್ನು ಎಲ್ಲ ಬಗೆಯ ಆಧುನಿಕ ಶಸ್ತ್ರಾಸ್ತ್ರಗಳಿಂದ ಸಿದ್ಧಪಡಿಸಲಾಗಿದೆ ಮತ್ತು ಯುದ್ಧದ ಎಲ್ಲ ಬಗೆಯ ಅತ್ಯಾಧುನಿಕ ತಂತ್ರಜ್ಞಾನದಲ್ಲಿ ಮರುಶಿಕ್ಷಣ ನೀಡಲಾಗುತ್ತಿದೆ.

ಇಂದು ನಮ್ಮದು ಜಗತ್ತಿನಲ್ಲಿಯೇ ಸೇನಾಪಡೆಯಲ್ಲಿ ನಾಲ್ಕನೆಯದು, ವಾಯುಪಡೆಯಲ್ಲಿ ಐದನೆಯದು ಮತ್ತು ನೌಕಾಪಡೆಯಲ್ಲಿ ಏಳನೆಯದಾಗಿದೆ. ರಕ್ಷಣಾ ಸಚಿವಾಲಯದಲ್ಲಿ ಈಗ ನಾಲ್ಕು ವಿಭಾಗಗಳಿವೆ.

1. ರಕ್ಷಣಾ ಇಲಾಖೆ 2. ರಕ್ಷಣಾ ಸಾಮಗ್ರಿಗಳ ಪೂರೈಕೆಯ ಇಲಾಖೆ 3. ರಕ್ಷಣಾ ಸಾಮಗ್ರಿಗಳ ಉತ್ಪಾದನಾ ಇಲಾಖೆ 4. ರಕ್ಷಣಾ ವಿಜ್ಞಾನ ಮತ್ತು ಸಂಶೋಧನ ಇಲಾಖೆ. ಸಂಸಿದ್ಧತೆಯ ಕಟ್ಟೆಚ್ಚರ ಅಗತ್ಯವಾಗಿರುವುದರಿಂದ ರಕ್ಷಣಾ ಖಾತೆಗೆ ಬಜೆಟ್ ಹಂಚಿಕೆಯು ಪ್ರತಿವರ್ಷವೂ ಏರುತ್ತಿದೆ.

ನಮ್ಮಲ್ಲಿ ಈ ಕೆಳಕಂಡ ಬಗೆಗಳ ಒಂದು ಸಾವಿರಕ್ಕೂ ಹೆಚ್ಚಿನ ಸಂಖ್ಯೆಯ ಹೋರಾಟ ವಿಮಾನಗಳು ಹಾಗೂ ಹೆಲಿಕಾಪ್ಟರುಗಳು ಇವೆ. ಅವು ಯಾವುವೆಂದರೆ: ಕ್ಯಾನ್ಬೆರಾ, ಹಂಟರ್, ಅಜಿತ್, ಕಿರಣ್, ಚೇತಕ್, ಮಿಗ್, ಜಾಗ್ವಾರ್, ಮಿರಾಜ್ 2000 ಇತ್ಯಾದಿ.

**ಸೀ ಬರ್ಡ್:** ನಮ್ಮ ನೌಕಾ ಸಂಸಿದ್ಧತೆಯನ್ನು ಬಲಪಡಿಸುವುದಕ್ಕಾಗಿ 'ಸೀ ಬರ್ಡ್' ಎಂಬ ನೌಕಾನೆಲೆಯನ್ನು ಕಾರವಾರದ ಬಳಿ ಸಿದ್ಧಗೊಳಿಸಲಾಗುತ್ತಿದೆ. ಅದು ಸದ್ಯದಲ್ಲೇ ಕಾರ್ಯಾರಂಭ ಮಾಡಲಿದೆ.

**ಅಗ್ನಿ** ಇದೊಂದು 'ಭೂಮಿಯಿಂದ ಭೂಮಿಗೆ'' ಕ್ಷಿಪಣಿ. ಇದನ್ನು ಈಚೆಗೆ ಯಶಸ್ವಿಯಾಗಿ ಪರೀಕ್ಷಾರ್ಥವಾಗಿ ಉಡಾಯಿಸಲಾಯಿತು. 'ತ್ರಿಶೂಲ್' ಅನ್ನು ಈಗಾಗಲೇ ಉಡಾಯಿಸಲಾಗಿದೆ. ಸಬ್‌ಮೆರಿನ್ ಮತ್ತು ಆಂಟಿಸಬ್‌ಮೆರಿನ್ ತಂತ್ರಜ್ಞಾನವನ್ನು ತುಂಬ ಚೆನ್ನಾಗಿ ಅಭಿವೃದ್ಧಿಪಡಿಸಲಾಗಿದೆ.

ರಕ್ಷಣಾ ಸಾಮಗ್ರಿಗಳ ಉತ್ಪಾದನೆಗಳ ಚಟುವಟಿಕೆಗಳನ್ನು ಸರಕಾರದ ಆರ್ಡ್‌ನೆನ್ಸ್ ಕಾರ್ಖಾನೆಗಳಲ್ಲಿ ಹಾಗೂ ಎಚ್.ಎ.ಎಲ್. ಬಿ.ಎಚ್.ಈ.ಎಲ್, ಬಿ.ಇ.ಎಂ.ಎಲ್., ಎಂ.ಡಿ.ಎಲ್. ಮೊದಲಾದ ಸಾರ್ವಜನಿಕ ಸಂಸ್ಥೆಗಳಲ್ಲಿ ಕೈಕೊಳ್ಳಲಾಗಿದೆ. ರಾಷ್ಟ್ರದ ವಿವಿಧ ಭಾಗಗಳಲ್ಲಿ 45 ರಕ್ಷಣಾ ಪ್ರಯೋಗಾಲಯಗಳನ್ನು ಸ್ಥಾಪಿಸಲಾಗಿದೆ.

ನಮ್ಮ ಯುದ್ಧ ಸಂಸಿದ್ಧತೆಗೆ ಅಪಾರ ವೆಚ್ಚ ತಗಲುತ್ತದೆ. ತೆರಿಗೆದಾರ ಇದನ್ನು ಹೊರಬೇಕಾಗುತ್ತದೆ. ಇದರ ಜೊತೆಗೆ ನಮ್ಮದು ಅಭಿವೃದ್ಧಿಶೀಲ ರಾಷ್ಟ್ರವಾಗಿರುವುದರಿಂದ ನಾವು ನಮ್ಮ ಪ್ರಗತಿಪರ ಚಟುವಟಿಕೆಗಳಿಗೆ ಕೂಡ ಹಣ ಹೊಂದಿಸಬೇಕಾಗುತ್ತದೆ. ನಮ್ಮ ರಾಷ್ಟ್ರದ ಹಿತಾಸಕ್ತಿ ಹಾಗೂ ಉಜ್ವಲ ಭವಿಷ್ಯಗಳಿಗಾಗಿ ನಾವು ತ್ಯಾಗಕ್ಕೆ ಸಿದ್ಧರಾಗಲೇಬೇಕು.

## ಎರಡನೆಯ ಸಾಲಿನ ರಕ್ಷಣಾ ವ್ಯವಸ್ಥೆ

ಮೇಲೆ ಹೇಳಿದ ರಕ್ಷಣಾ ಸಂಸಿದ್ಧತೆಯ ಚಟುವಟಿಕೆಗಳ ಜೊತೆಗೆ ಭೂಸೇನೆ, ವಾಯುದಳ ಮತ್ತು ನೌಕಾದಳಗಳ ಎಂದಿನ ಸಿಬ್ಬಂದಿಯ ಸಹಾಯಕ್ಕೆ ಬರುವ ಎರಡನೆಯ ರಕ್ಷಣಾ ಜಾಲವನ್ನು ವ್ಯವಸ್ಥೆಗೊಳಿಸುತ್ತಿದ್ದೇವೆ. ಈ ಸಹಾಯಕ ಘಟಕಗಳು ಯಾವುವೆಂದರೆ:

1. ಪ್ರಾದೇಶಿಕ ಸೇನೆ (Territorial army)
2. ಗಡಿನಾಡ ಭದ್ರತಾ ದಳ (Border Security Force)
3. ಕರಾವಳಿ ಪಹರೆಯವರು (Coast Guards)
4. ಸಹಾಯಕ ವಾಯುಸೇನೆ (Auxiliary Air Force)
5. ಎನ್.ಸಿ.ಸಿ. (National Cadet Corps)
6. ಗೃಹರಕ್ಷಕ ದಳ (Home Guards)

ಟೆರಿಟೋರಿಯಲ್ ಸೇನೆ ಒಂದು ಸ್ವಯಂ ಸೇವಾ ಸಂಸ್ಥೆಯಾಗಿದೆ. ತುರ್ತಿನ ಸಂದರ್ಭಗಳಲ್ಲಿ ಪೋಲಿಸ್ ಶಕ್ತಿಗೆ ನೆರವಾಗುವುದಕ್ಕಾಗಿ 'ಹೋಂ ಗಾರ್ಡ್'ಗಳನ್ನು ನೇಮಿಸಲಾಗುತ್ತದೆ. ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಮಿಲಿಟರಿ ತರಬೇತಿಯ ಓನಾಮವನ್ನು ಕಲಿಸಲು ಶಾಲಾ ಕಾಲೇಜುಗಳಲ್ಲಿ ಎನ್.ಸಿ.ಸಿ.ಯನ್ನು ವ್ಯವಸ್ಥೆಗೊಳಿಸಲಾಗಿದೆ. ಬಿ.ಎಸ್.ಎಫ್. (ಬಾರ್ಡರ್ ಸೆಕ್ಯುರಿಟಿ ಫೋರ್ಸ್, ಗಡಿನಾಡ ರಕ್ಷಣಾ ದಳ) ಸಿ.ಜಿ ಮತ್ತು ಎ.ಎ.ಎಫ್. ಇವು ಅರೆಮಿಲಿಟರಿ (ಪ್ಯಾರಾಮಿಲಿಟರಿ) ಸೇನೆಗಳು. ಇವೆಲ್ಲ ಭಾರತದ ಎರಡನೆಯ ಸಾಲಿನ ರಕ್ಷಣಾ ಜಾಲಗಳಾಗಿವೆ.

## ಟೆರಿಟೋರಿಯಲ್ ಆರ್ಮಿ (ಪ್ರಾದೇಶಿಕ ಸೇನೆ):

ಇದೊಂದು ಅರೆಕಾಲಿಕ ಸ್ವಯಂ ಸೇವಾದಳ. ಇದರಲ್ಲಿ ವೃತ್ತಿ ಯೋಧರು ಇರುವುದಿಲ್ಲ. ರಕ್ಷಣಾ ಕಾರ್ಯದಲ್ಲಿ ಪಾಲುಗೊಳ್ಳಬಯಸುವ ಪೌರರ ಸೇನೆ ಇದು. 1948ರಲ್ಲಿ ಅಂಗೀಕೃತವಾದ ವಿಧೇಯಕಕ್ಕೆ ಅನುಸಾರವಾಗಿ ಇದನ್ನು ಸ್ಥಾಪಿಸಲಾಯಿತು. ನಾಗರಿಕರು ತಮ್ಮ ಬಿಡುವಿನ ವೇಳೆಯಲ್ಲಿ ಮಿಲಿಟರಿ ತರಬೇತಿಯನ್ನು ಪಡೆಯಲು ಇದು ಅವಕಾಶ ಮಾಡಿಕೊಡುತ್ತದೆ. ಉದ್ಯೋಗಸ್ಥನಾದ ಮತ್ತು 18–35 ಈ ವಯೋಶ್ರೇಣಿಯಲ್ಲಿರುವ ಮಂದಿ ಮಾತ್ರ ಈ ಸೇನೆಗೆ ಸೇರಲು ಅರ್ಹರಾಗಿರುತ್ತಾರೆ. ಪ್ರತಿವರ್ಷವೂ ನವೆಂಬರ್ ತಿಂಗಳ ಮೂರನೇ ಶನಿವಾರವನ್ನು ಪ್ರಾದೇಶಿಕ ಸೇನಾ ದಿವಸವಾಗಿ ಆಚರಿಸಲಾಗುತ್ತದೆ.

## ಗಡಿನಾಡ ಭದ್ರತಾ ದಳ (ಬಿ.ಎಸ್.ಎಫ್.)

ಈ ಸೇನೆಯನ್ನು 1965ರಲ್ಲಿ ಸ್ಥಾಪಿಸಲಾಯಿತು. ಈ ಸೇನೆಗೆ ನೇಮಕಗೊಂಡ ಸೈನಿಕರು ನಮ್ಮ ರಾಷ್ಟ್ರದ 15,200 ಕಿ.ಮೀ. ಪ್ರದೇಶದ ಗಡಿಭಾಗಗಳನ್ನು ಕಾಯುತ್ತಿದ್ದಾರೆ. ಇವರ ತರಬೇತಿ ಕೇಂದ್ರವು ಬೆಂಗಳೂರಿನ ಬಳಿ ಯಲಹಂಕದಲ್ಲಿದೆ.

**(ಕರಾವಳಿ ಪಹರೆಯವರು) ಕೋಸ್ಟ್ ಗಾರ್ಡ್ಸ್‌ಗಳು**

ಇದೂ ಒಂದು ಅರೆಮಿಲಿಟರಿ ಶಕ್ತಿಯಾಗಿ ಎರಡನೇ ಸಾಲಿನ ರಕ್ಷಣಾ ಜಾಲಕ್ಕೆ ಸೇರಿದೆ. ಇಂಥ ರಕ್ಷಣಾ ಜಾಲದಲ್ಲಿ ಇತ್ತೀಚಿನದಾದ ಇದಕ್ಕೆ 7,500ಕಿ.ಮೀ. ವ್ಯಾಪ್ತಿಯುಳ್ಳ ಕರಾವಳಿಯ ರಕ್ಷಣೆಯ ಕಾರ್ಯವನ್ನು ವಹಿಸಲಾಗಿದೆ. ಕರಾವಳಿ ಪಹರೆಯವರ ನೌಕೆಗಳಿಗೆ ಕುಠಾರ್, ವಿಕ್ರಮ್, ವಿಜಯ್ ಮತ್ತು ವೀರ ಎಂಬ ಹೆಸರುಗಳಿವೆ.

**ಸಹಾಯಕ ವಾಯುಸೇನೆ**

ವಾಯುಪಡೆಯ ಕಾರ್ಯಕ್ಕೆ ಪೂರಕವಾಗಿರುವ ಈ ಸೇನೆಯು ವಿದೇಶದ ದಾಳಿಯ ಸಂದರ್ಭದಲ್ಲಿ ಕಾರ್ಯಮಗ್ನವಾಗುತ್ತದೆ.

**ಎನ್.ಸಿ.ಸಿ. (ನ್ಯಾಷನಲ್ ಕೆಡೆಟ್ ಕೋರ್)**

ಇದು ಶಾಲಾ ಕಾಲೇಜುಗಳ ಯುವ ಸಂಸ್ಥೆ. ಇಷ್ಟವಿರುವ ವಿದ್ಯಾರ್ಥಿಗಳು ನೊಂದಾಯಿಸಿಕೊಳ್ಳಲು ಅವಕಾಶವಿದೆ. ಹಾಗೆ ನೊಂದಾಯಿಸಲ್ಪಟ್ಟ ಕೆಡೆಟ್‌ಗಳಿಗೆ ಈ ಕೆಳಕಂಡ ಸೌಲಭ್ಯಗಳಿರುತ್ತವೆ.

1. ಎನ್.ಸಿ.ಸಿ. ತರಬೇತಿ ಮುಗಿದ ನಂತರ ರಕ್ಷಣಾ ಸೇನೆಗಳಿಗೆ ಸೇರಲು ವಿಶೇಷ ಸವಲತ್ತು ನೀಡಲಾಗುವುದು.
2. ಎನ್.ಸಿ.ಸಿ. ಕೆಡೆಟ್‌ಗಳಾಗಿದ್ದು ತರಬೇತಿಯ ಅವಧಿಯಲ್ಲಿ ವಿಶಿಷ್ಟ ಸ್ಥಾನಮಾನಗಳನ್ನು ಗಳಿಸಿದವರಿಗೆ ವೃತ್ತಿಪರ ಕಾಲೇಜುಗಳಲ್ಲಿ ಮೀಸಲಾತಿ ಸೌಲಭ್ಯವಿದೆ.
3. ತರಬೇತಿಯ ಅವಧಿಯಲ್ಲಿ ಅವರಿಗೆ ಆಯುಧ ಶಿಕ್ಷಣವನ್ನೂ ನೀಡಲಾಗುವುದು.
4. ಅವರಿಗೆ ಕೆಳಕಂಡ ಅನುಭವಗಳನ್ನು ಪಡೆಯುವ ಅವಕಾಶ ಒದಗಿಸಲಾಗುವುದು. ಹೈಕಿಂಗ್(ದೂರನಡಗೆ), ಟ್ರೆಕಿಂಗ್(ಗುಂಪು ಪ್ರಯಾಣ), ಗ್ಲೈಡಿಂಗ್(ಜಾರಾಟ) ಸೆಯ್ಲಿಂಗ್(ಜಲ ಪ್ರಯಾಣ), ಪರ್ವತಾರೋಹಣ ಕ್ರೀಡೆಗಳು ಇತ್ಯಾದಿ.
5. ಅವರಲ್ಲಿ ಮೂಡಿಸುವ ಗುಣಗಳೆಂದರೆ ದೇಶಪ್ರೇಮ, ನಿಷ್ಠಾತ್ಮಕ ಸೇವೆ, ಕ್ರೀಡೋಮನೋಭಾವ ಮತ್ತು ಬದುಕಿನಲ್ಲಿ ಶಿಸ್ತು. ಅಲ್ಲದೆ ಅವರಿಗೆ ನಾಯಕತ್ವದ ತರಬೇತಿಯನ್ನು ನೀಡಲಾಗುವುದು.

ಎನ್.ಸಿ.ಸಿ.ಯಲ್ಲಿ ಎರಡು ಘಟಕಗಳಿವೆ.

ಸೀನಿಯರ್ ಘಟಕ ಮತ್ತು ಜೂನಿಯರ್ ಘಟಕ. ಸೀನಿಯರ್ ಘಟಕವು ಕಾಲೇಜು ವಿದ್ಯಾರ್ಥಿಗಳಿಗೆ ಮತ್ತು ಜೂನಿಯರ್ ಘಟಕವು ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ಮೀಸಲಾಗಿವೆ. ವಿದ್ಯಾರ್ಥಿ ವಿದ್ಯಾರ್ಥಿನಿಯರ ವಿಭಾಗಗಳನ್ನು ಬೇರೆ ಬೇರೆಯಾಗಿ ವ್ಯವಸ್ಥೆ ಮಾಡಲಾಗಿರುತ್ತದೆ. ವಿದ್ಯಾರ್ಥಿಗಳು ಎನ್.ಸಿ.ಸಿ. ಯೂನಿಟ್‌ನ ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಗಳಲ್ಲಿ ಯಾವುದಕ್ಕೆ ಬೇಕಾದರೂ ಸೇರಬಹುದು.

ಎನ್.ಸಿ.ಸಿ. ಏರ್ಪಾಡು ಮಾಡುವ ವಾರ್ಷಿಕ ಶಿಬಿರವು ರಾಷ್ಟ್ರೀಯ

ಸಮಗ್ರತೆಯನ್ನು ಬೆಳೆಸುತ್ತದೆ. ಅಲ್ಲದೆ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಪ್ರಾಂತ್ಯಗಳ ವಿದ್ಯಾರ್ಥಿಗಳೊಂದಿಗೆ ಬೆರೆಯುವ ಅವಕಾಶವನ್ನು ಕೊಡುತ್ತದೆ.

ಎನ್.ಸಿ.ಸಿ. ವಿದ್ಯಾರ್ಥಿಗಳ ವೃಂದದಲ್ಲಿ ತುಂಬ ಜನಪ್ರಿಯವಾಗಿದೆ. ಆಕ್ಸಿಲರಿ ಕೆಡೆಟ್ ಕೋರ್ (ಎ.ಸಿ.ಡಿ) ಎಂಬುದು ಇಂದು ಇಲ್ಲ. ಹೈಸ್ಕೂಲು ಮಟ್ಟದಲ್ಲಿ ಹಿಂದೆ ಇದು ಕೆಲಸ ಮಾಡುತ್ತಿದ್ದಿತು.

ರಕ್ಷಣಾ ಪಡೆಗಳ ಕೈಯಲ್ಲಿ ನಮ್ಮ ರಾಷ್ಟ್ರವು ಕ್ಷೇಮವಾಗಿರುತ್ತದೆ. ನಮ್ಮ ಪ್ರಾದೇಶಿಕ ಸಮಗ್ರತೆಯನ್ನು ಕಾಯ್ದುಕೊಂಡು ಆಧುನಿಕ ಯುದ್ಧ ತಂತ್ರಗಳ ಪುಷ್ಟಿ ಹೊಂದಿರುವ ನಿಷ್ಠಾವಂತ ಸೇನಾಪಡೆ ನಮ್ಮದಾಗಿದೆ.

ಶಾಂತಿ ಸಮಯ ಮತ್ತು ಯುದ್ಧ ಸಮಯಗಳೆರಡಲ್ಲೂ ಜನತೆಯನ್ನು ಕಾಪಾಡುವ ಕಾಯಕದಲ್ಲಿ ನಿರತರಾಗಿರುವ ಸೈನಿಕರಿಗೆ ಬೆಂಗಾವಲಾಗಿ ನಿಂತು ಅವರ ಬೆನ್ನು ತಟ್ಟಿ ನೈತಿಕ ಸಾಮರ್ಥ್ಯವನ್ನು ಹೆಚ್ಚಿಸುವುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯ. ಸೈನಿಕರು ತಮ್ಮ ಪ್ರಾಣವನ್ನೇ ಪಣವಾಗಿ ಒಡ್ಡುತ್ತಾರೆ. ಆದುದರಿಂದ ಅವರನ್ನು ಸಂತೋಷವಾಗಿ ಇಟ್ಟು ಅವರ ಕುಟುಂಬಗಳಿಗೆ ಪೂರ್ಣ ರಕ್ಷಣೆ ಕೊಡೋಣ. ಈ ಬಗೆಯ ಎಚ್ಚರ ನಾಗರಿಕರಲ್ಲಿರಬೇಕಾದ್ದು ಅಗತ್ಯ.

## ಅಭ್ಯಾಸ

**1. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಅಥವಾ ಎರಡು ವಾಕ್ಯಗಳಲ್ಲಿ ಉತ್ತರಿಸಿ.**

1. ರಕ್ಷಣಾ ದಳಗಳಿಗೆ ಸೇರುವ ತರುಣರು ಯಾವ ಯಾವ ಗುಣಗಳನ್ನು ಪಡೆದಿರುತ್ತಾರೆ ?
2. ನಮ್ಮ ರಕ್ಷಣಾ ಸೇನೆಗಳ ಮೂರು ವಿಭಾಗಗಳು ಯಾವುವು ? ಈ ಮೂರೂ ಸೇನೆಗಳ ಮಹಾದಂಡ ನಾಯಕರು ಯಾರು ?
3. ಮಹತ್ಸಾಧನೆಗಾಗಿ ನಮ್ಮ ರಕ್ಷಣಾ ವಿಭಾಗದಲ್ಲಿರುವ ನಾಲ್ಕು ಘಟಕಗಳು ಯಾವುವು ?
4. ಕೇಂದ್ರದ ರಕ್ಷಣಾ ವಿಭಾಗದಲ್ಲಿರುವ ನಾಲ್ಕು ಘಟಕಗಳು ಯಾವುವು ?
5. ಎನ್.ಸಿ.ಸಿ.ಯ ವಾರ್ಷಿಕ ಶಿಬಿರಗಳಿಂದ ರಾಷ್ಟ್ರದ ಸಮಗ್ರತೆಗೆ ಹೇಗೆ ಸಹಾಯಕವಾಗುತ್ತದೆ ?

**2. ಅ) ಪ್ರತಿ ಪ್ರಶ್ನೆಗೂ ಒಂದೊಂದು ಪ್ಯಾರಾದಷ್ಟು ಉತ್ತರ ಬರೆಯಿರಿ.**

1. ನಮ್ಮ ರಕ್ಷಣಾ ಪಡೆಗಳು ಶಾಂತಿ ಕಾಲದಲ್ಲಿ ನಿರ್ವಹಿಸುವ ಕೆಲಸಗಳು.
2. ಅಂತರ-ರಾಷ್ಟ್ರೀಯ ಶಾಂತಿಪಾಲನೆಗೆ ನಮ್ಮ ರಕ್ಷಣಾ ಪಡೆಗಳ ಕಾಣಿಕೆ.
3. ಭಾರತೀಯ ವಾಯುಪಡೆಯ ಸಾಂಸ್ಥಿಕ ರಚನೆ

**3. ಅ) ಇವುಗಳಿಗೆ ಟಿಪ್ಪಣಿ ಬರೆಯಿರಿ.**

1. "ನಾವು ನಮ್ಮ ನೆರೆಹೊರೆಯ ರಾಷ್ಟ್ರಗಳ ಮೇಲೆ ಸ್ನೇಹಭಾವದಿಂದ ಇದ್ದರೂ

ಸಹ, ರಕ್ಷಣಾ ಬಲಗಳು ನಮ್ಮ ವಿಸ್ತಾರವಾದ ಗಡಿನಾಡುಗಳನ್ನು ಕಾಯುವ ದೊಡ್ಡ ಜವಾಬ್ದಾರಿಯನ್ನು ಹೊಂದಿವೆ'' – ವಿವರಿಸಿ.

2. ನಮ್ಮ ವಿದ್ಯಾರ್ಥಿಗಳು ಈ ರಾಷ್ಟ್ರದ ಅರ್ಹ ಪ್ರಜೆಗಳಾಗುವ ದಿಕ್ಕಿನಲ್ಲಿ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಎನ್.ಸಿ.ಸಿ. ಹೇಗೆ ಸಹಾಯ ಮಾಡುತ್ತದೆ ?

**4. ಪ್ರತಿ ವಿಭಾಗದಲ್ಲೂ ಹೊಂದಿಕೆಯಾಗದ ಶಬ್ದಗಳನ್ನು ದುಂಡು ಮಾಡಿ ತೋರಿಸಿ:**

ಎ. ವಿಭಾಗ : ಜನರಲ್, ಅಡ್ಮಿರಲ್, ಮೇಜರ್ ಜನರಲ್, ಏರ್ ಚೀಫ್ ಮಾರ್ಷಲ್

ಬಿ. ವಿಭಾಗ : ಖಡಕವಾಸ್ಲ, ವೆಲಿಂಗ್ಟನ್, ನವದೆಹಲಿ.

ಸಿ. ವಿಭಾಗ : ಅಗ್ನಿ, ಅಜಿತ್, ಕಿರಣ್, ಚೇತಕ್.

ಡಿ. ವಿಭಾಗ : ಕುಠಾರ್, ಸೀಬರ್ಡ್, ವಿಕ್ರಂ, ವಿಜಯ್.

**5. ಚಟುವಟಿಕೆಗಳು**

i) ಸಾರ್ಕ್ ದೇಶಗಳು ವ್ಯವಸ್ಥೆಗೊಳಿಸಿದ್ದ ಚಟುವಟಿಕೆಗಳನ್ನು ಅಧ್ಯಯನ ಮಾಡಿ.

ii) ನಮ್ಮ ರಕ್ಷಣಾ ಪಡೆಗಳ ಆಯಕಟ್ಟಿನ ಎಡೆಗಳಲ್ಲಿ ಕೆಲಸ ಮಾಡುತ್ತಿರುವ ಮುಖ್ಯ ರಕ್ಷಣಾ ಸಿಬ್ಬಂದಿಯ ಹೆಸರುಗಳನ್ನು ಸಂಗ್ರಹಿಸಿ.

iii) ಇದುವರೆಗೂ, ನೀವು ಎನ್.ಸಿ.ಸಿ.ಗೆ ಹೆಸರು ನೊಂದಾಯಿಸದಿದ್ದರೆ ನಿಮ್ಮ ಶಾಲೆಯಲ್ಲಿ ಕೂಡಲೇ ನೊಂದಾಯಿಸಿ.

**ಟೆಕ್ನೊ ವೆಬ್ ಆಫ್‌ಸೆಟ್**

ಬೆಂಗಳೂರು – 560 045

ದೂರವಾಣಿ : 5461658

# ಮೂಲಭೂತ ಕರ್ತವ್ಯಗಳು

**ಮೂಲಭೂತ ಕರ್ತವ್ಯಗಳು** - ಪ್ರತಿಯೊಬ್ಬ ನಾಗರೀಕನಿಗೂ -

(ಕ) ಸಂವಿಧಾನವನ್ನು ಅನುವರ್ತಿಸುವುದು ಹಾಗೂ ಅದರ ಆದರ್ಶಗಳನ್ನು ಮತ್ತು ಸಂಸ್ಥೆಗಳನ್ನು, ರಾಷ್ಟ್ರಧ್ವಜ ಹಾಗೂ ರಾಷ್ಟ್ರಗೀತೆಯನ್ನೂ ಗೌರವಿಸುವುದು;

(ಖ) ನಮ್ಮ ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸ್ಫೂರ್ತಿದಾಯಕವಾದ ಉದಾತ್ತ ಆದರ್ಶಗಳನ್ನು ಘೋಷಿಸುವುದು ಮತ್ತು ಅನುಸರಿಸುವುದು;

(ಗ) ಭಾರತದ ಸಾರ್ವಭೌಮತ್ವವನ್ನು, ಐಕ್ಯತೆಯನ್ನು ಮತ್ತು ಅಖಂಡತೆಯನ್ನು ಎತ್ತಿ ಹಿಡಿಯುವುದು ಹಾಗೂ ಸಂರಕ್ಷಿಸುವುದು;

(ಘ) ದೇಶವನ್ನು ರಕ್ಷಿಸಲು ಮತ್ತು ರಾಷ್ಟ್ರಕ್ಕೆ ಸೇವೆ ಸಲ್ಲಿಸಲು ಕರೆ ಬಂದಾಗ, ಹಾಗೆ ಮಾಡುವುದು;

(ಙ) ಧಾರ್ಮಿಕ, ಭಾಷಾ ಮತ್ತು ಪ್ರಾದೇಶಿಕ ಅಥವಾ ಜಾತಿ ಪಂಗಡಗಳ ಭಿನ್ನತೆಗಳಿಂದ ಅತೀತವಾಗಿ, ಭಾರತದ ಎಲ್ಲಾ ಜನತೆಯಲ್ಲಿ ಸಾಮರಸ್ಯವನ್ನು ಮತ್ತು ಸಮಾನ ಭ್ರಾತೃತ್ವದ ಭಾವನೆಯನ್ನು ಬೆಳೆಸುವುದು, ಸ್ತ್ರೀಯರ ಗೌರವಕ್ಕೆ ಕುಂದುಂಟು ಮಾಡುವ ಆಚರಣೆಗಳನ್ನು ಬಿಟ್ಟು ಬಿಡುವುದು;

(ಚ) ನಮ್ಮ ಸಮ್ಮಿಶ್ರ ಸಾಂಸ್ಕೃತಿಯ ಭವ್ಯ ಪರಂಪರೆಯನ್ನು ಗೌರವಿಸುವುದು ಹಾಗೂ ಕಾಪಾಡುವುದು;

(ಛ) ಅರಣ್ಯಗಳು, ಸರೋವರಗಳು, ನದಿಗಳು ಮತ್ತು ವನ್ಯಜೀವಿಗಳೂ ಸೇರಿದಂತೆ ನೈಸರ್ಗಿಕ ಪರಿಸರವನ್ನು ಸಂರಕ್ಷಿಸುವುದು ಹಾಗೂ ಮೇಲ್ಪಟ್ಟಿ ಮಾಡುವುದು, ಪ್ರಾಣಿಗಳಿಗೆ ಅನುಕಂಪ ತೋರಿಸುವುದ;

(ಜ) ವೈಜ್ಞಾನಿಕ ಮನೋಭಾವನೆ, ಮಾನವೀಯತೆ, ಜಿಜ್ಞಾಸೆ ಮತ್ತು ಸುಧಾರಣಾ ಪ್ರವೃತ್ತಿಯನ್ನು ಅಭಿವೃದ್ಧಿಗೊಳಿಸುವುದು;

(ಝ) ಸಾರ್ವಜನಿಕ ಸ್ವತ್ತನ್ನು ರಕ್ಷಿಸುವುದು ಮತ್ತು ಹಿಂಸೆಯನ್ನು ತ್ಯಜಿಸುವುದು;

(ಞ) ರಾಷ್ಟ್ರವು ನಿರಂತರವಾಗಿ ಸಾಧನೆ ಮತ್ತು ಸಿದ್ಧಿಯ ಉನ್ನತ ಮಟ್ಟಗಳಿಗೆ ಬರುವುದಕ್ಕಾಗಿ ವೈಯಕ್ತಿಕ ಹಾಗೂ ಸಾಮಾಜಿಕ ಚಟುವಟಿಕೆಯ ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಶ್ರೇಷ್ಠವಾಗಿ ಶ್ರಮಿಸುವುದು :-

(ಕರ್ತವ್ಯವಾಗಿರತಕ್ಕುದು).

# ಕಾಡು ಬೆಳೆಸಿ ನಾಡು ಉಳಿಸಿ

## ಮನೆಗೊಂದು ಮಗು, ಮಗುವಿಗೊಂದು ಮರ



Techno Web Offset, Ph : 5461658 ಬೆಲೆ ರೂ 8-70

ಪ್ರಕಾಶಕರು: ದೂರವಾಣಿ: 2264123

ಬೆಂಗಳೂರು ಬುಕ್ ಸೆಂಟರ್

ನಂ. 4, ರಂಗಸ್ವಾಮಿ ಗುಡಿ ಬೀದಿ,

ಬೆಂಗಳೂರು - 560 053